# ಬಂಗಾರದ ಜಿಂಕೆಯ ಹಿಂದೆ

ಬಸವರಾಜ ಕಟ್ಟೀಮನಿ




ಶಾರದಾ ಪ್ರಕಟನಾಲಯ
ಬೆಂಗಳೂರು

ಶಾರದಾ ಸಾಹಿತ್ಯ ಮಾಲೆ – ೪೨

# ಬಂಗಾರದ ಜಿಂಕೆಯ ಹಿಂದೆ

## [‘ನಾನು ಪೋಲೀಸನಾಗಿದ್ದೆ’ ಭಾಗ – ೨]

“ ಬಂಗಾರದ ಚಿಗರಿಯ ಹಿಂದೆ
ಹೊಂಟಾನ ಸೀತಾಪತಿ !”
—ನಾಡ ಹಾಡು

ಬಸವರಾಜ ಕಟ್ಟೀಮನಿ



ಮುದ್ರಣ ಮತ್ತು ಪ್ರಕಾಶನ:
ಶಾರದಾ ಪ್ರಕಟನಾಲಯ
ಅರಳೇಪೇಟೆ, :: ಬೆಂಗಳೂರು – ೨.

# ಪರಿವಿಡಿ

## ಕಾಲವಾಢದಲ್ಲಿ



## ತೊಂಡೇಬಾವಿಯಲ್ಲಿ

## ಹುಂಬರೂರಿನಲ್ಲಿ



## ಉಗ್ರಪುರದಿಂದ ಮನೆಗೆ !



---

## ಸಮರ್ಪಣ:

ಬಡವರ ಬಂಧು

**ಶ್ರೀ ಹಳ್ಳಿಕೇರಿ ಗುದ್ಲೆಪ್ಪನವರಿಗೆ**

ಆದರಪೂರ್ವಕವಾಗಿ

# ಈ ಲೇಖಕರ ಇತರ ಕೃತಿಗಳು

**ಕಾದಂಬರಿಗಳು**

ಸ್ವಾತಂತ್ರ್ಯದೆಡೆಗೆ
ಮಾಡಿ ಮಡಿದವರು
ಜ್ವಾಲಾಮುಖಿಯ ಮೇಲೆ
ಮೋಹದ ಬಲೆಯಲ್ಲಿ
ಬೀದಿಯಲ್ಲಿ ಬಿದ್ದವಳು
ಜರತಾರಿ ಜಗದ್ಗುರು
ಮಣ್ಣು ಮತ್ತು ಹೆಣ್ಣು
ಖಾನಾವಳಿಯ ನೀಲಾ
ನೀ ನನ್ನ ಮುಟ್ಟಬೇಡ
ಜನಿವಾರ ಮತ್ತು ಶಿವದಾರ
ಬಲೆಯ ಬೀಸಿದರು
ನಾನು ಪೋಲೀಸನಾಗಿದ್ದೆ

**ಕಥಾಸಂಗ್ರಹಗಳು :**

ಕಾರವಾನ್
ಗುಲಾಬಿ ಹೂ
ಆಗಸ್ಟ್ ಒಂಭತ್ತು
ಸೆರೆಯಿಂದ ಹೊರಗೆ
ಜೋಳದ ಬೆಳೆಯ ನಡುವೆ

೧

# ದೊಡ್ಡ ಸಾಹೇಬರ ಆಗಮನ

ಗೊಬ್ಬೂರಿಗೆ ಹೋಗಬೇಕಾದುದು ತಪ್ಪಿ, ಫೌಜದಾರ ಈಶ್ವರಪ್ಪನವರ ಒತ್ತಾಯದಿಂದಾಗಿ ನಾನು ಕಾಲವಾಡ ಪೋಲೀಸ್ ಕಚೇರಿಯಲ್ಲಿಯೆ ಇರಬೇಕಾಗಿ ಬಂದಿತು. ಇನ್ನೂ ಎಷ್ಟು ತಿಂಗಳುಗಳವರೆಗೆ ಅಲ್ಲಿಯೆ ಇರಬೇಕಾಗಿದ್ದಿತೊ ಏನೊ. ನನಗೂ ಅಲ್ಲಿಂದ ಹೊರಡುವ ಇಚ್ಛೆಯಿರಲಿಲ್ಲ. ಆ ಊರಿನ ಜನರೊಡನೆ ಆತ್ಮೀಯ ಸಂಬಂಧವೇ ಬೆಳೆದು ಬಂದ ಹಾಗಿತ್ತು. ಉಜ್ಜಪ್ಪನವರಂತೂ ನನ್ನ ನೆಂಟರ ಹಾಗೇ ಆಗಿಬಿಟ್ಟಿದ್ದರು. ವಾರದಲ್ಲೆರಡು ದಿನವಾದರೂ ಅವರಲ್ಲಿಯೇ ಊಟ ಮಾಡಬೇಕಾಗುತ್ತಿತ್ತು. ನಾನೆಷ್ಟು ಸಂಕೋಚಪಟ್ಟುಕೊಂಡರೂ ಬಿಡದೆ ನನ್ನನ್ನೆಳೆದುಕೊಂಡು ಹೋಗುತ್ತಿದ್ದರು ಉಜ್ಜಪ್ಪನವರು. ಗೌಡರಿಗೂ ಅಷ್ಟೇ ಪ್ರೀತಿ ನನ್ನ ಬಗ್ಗೆ. ಫೌಜದಾರರ ಮನೆಗೆ ಊಟಕ್ಕೆ ಹೋಗುವುದನ್ನು ಮಾತ್ರ ನಾನು ನಿಲ್ಲಿಸಿಬಿಟ್ಟ ಹಾಗೇ ಆಗಿತ್ತು.

....ಒಂದು ದಿನ ಬಂದ ಅಂಚೆಯಲ್ಲಿ ದೊಡ್ಡ ಸಾಹೇಬರ ಕಚೇರಿಯದೂ ಒಂದು ಕಾಗದವಿತ್ತು. ಮುಂದಿನ ವಾರ ಕಾಲವಾಡ ಪೋಲೀಸ್ ಕಚೇರಿಯ ತಪಾಸಣೆಗಾಗಿ ಅವರು ಬರುವವರಿದ್ದರು.

ದೊಡ್ಡ ಸಾಹೇಬರ ಸವಾರಿ ತಪಾಸಣೆಗೆ ಆಗಮಿಸುವುದೆಂದರೆ ದೊಡ್ಡದೊಂದು ದಿಬ್ಬಣವೇ ಬಂದ ಹಾಗೆ. ಐದಾರು ಜನ ಕಾರಕೂನರು, ಮೂರು ನಾಲ್ಕು ಜನ ಸಿಪಾಯಿಗಳು, 'ಆರ್ಡರ್ಲಿ' ಗಳು ಮತ್ತಿತರರು ಎಲ್ಲಾ ಸೇರಿ ಹದಿನೈದು ಜನರ ಪರಿವಾರ. ಅವರ ಬಿಡಾರ ಒಂದು ವಾರ. ಅಷ್ಟು ದಿನಗಳ

ವರೆಗೂ ಅವರಿಗೆಲ್ಲ ನಡೆಯಬೇಕು ರಾಜ ಸತ್ಕಾರ. ಅರ್ಥಾತ್ ಅದರ ಖರ್ಚು ವೆಚ್ಚಗಳೆಲ್ಲವನ್ನೂ ಪೋಲೀಸ್ ಠಾಣೆಯ ಫೌಜದಾರರೇ ವಹಿಸಿಕೊಳ್ಳ ಬೇಕಾಗುವುದು. ಅದು ಮೊದಲಿನಿಂದಲೂ ನಡೆದು ಬಂದ ಪದ್ಧತಿ.

ಈಶ್ವರಪ್ಪ ಫೌಜದಾರರು ಗಾಬರಿಗೊಂಡರು. ದೊಡ್ಡ ಸಾಹೇಬರ ಬಿಡಾರದ ಖರ್ಚಿಗೆ ಕನಿಷ್ಠಪಕ್ಷಕ್ಕೆ ಒಂದು ಸಾವಿರ ರೂಪಾಯಿಗಳಾದರೂ ಅವಶ್ಯವಾಗಿ ಬೇಕು.

"ಹ್ಯಾಗೆ ಮಾಡುವುದು ಶಿವಣ್ಣಾ? ಬಲೆ ಪಂಚಾಯ್ತಿ ಬಂತಲ್ಲಾ!" ಎಂದು ಅವರು ನನ್ನೊಡನೆ ಮಾತು ತೆಗೆದರು.

"ಯಾಕೆ ರಾವ್‌ಸಾಹೇಬರೆ, ಹಣವಿಲ್ಲವೇನು?"

"ಎರಡು ಮೂರು ನೂರು ಅದೆಯಪ್ಪ. ಅದು ಯಾವ ಮಣ್ಣಿಗಾದೀತು ಹೇಳು!"

ಅವರ ಚಿಂತೆಯನ್ನು ಕಂಡು ನನಗೇನೂ ಕಳವಳವೆನ್ನಿಸಲಿಲ್ಲ. ಇಂಥ ಸಂದರ್ಭಗಳಿಗೆಂದು ಹಣ ಕೂಡಿಡುವ ದೂರದೃಷ್ಟಿಯೇ ಇರಲಿಲ್ಲವಲ್ಲ ಅವರಲ್ಲಿ. ನಾಲ್ಕೈದು ತಿಂಗಳುಗಳ ಅವಧಿಯಲ್ಲಿ ಅವರಿಗೇನು ಕಡಮೆ ದೊರೆತಿದ್ದಿತೇ ದುಡ್ಡು! ಸಾವಿರಾರು ರೂಪಾಯಿ ಸಿಕ್ಕಿದ್ದುವು, ಅವರ ದುಶ್ಚಟಗಳಿಗಾಗಿ ಹಾಳಾಗಿ ಹೋಗಿದ್ದುವು. ಅವರ ಸೇಂದಿಯ ಖರ್ಚು, ಅವರ ಸೂಳೆಯರ ಖರ್ಚು....

"ಈಗಾದರೂ ಗೊತ್ತಾಯಿತಲ್ಲ ನಿಮಗೆ ರಾವ್‌ಸಾಹೇಬರೆ. ದುಡ್ಡು ಕೈಯಲ್ಲಿದ್ದಾಗ ಇಟ್ಟುಕೊಳ್ಳಬೇಕು. ಈಗ ನೋಡಿರಿ. ಎಂಥ ಪ್ರಸಂಗ...."

"ಹೌದಪ್ಪಾ. ನೀನು ಅನ್ನುವದೂ ಖರೆ."

"ತಳವಾರ ರಂಗಿಯಿಂದ ಏನೂ ಸಿಗಲಾರದೇ ರಾವ್‌ಸಾಹೇಬರೆ? ಆ ಕಘನಿಯಸ್ವಾಮಿಯಿಂದ?"

ನನ್ನ ಮಾತಿನಿಂದಾಗಿ ಅವರಿಗೆ ಚಾಟಿಯೇಟು ಬಿದ್ದಂತಾಯಿತು. ನನ್ನ ಬಗೆಗೆ ಅವರಿಗೆ ಒಳಗೊಳಗೇ ಕೋಪ ಬಂದಿರಲೂ ಸಾಕು. ಆದರೆ ಬಹಿರಂಗ ವಾಗಿ ಅವರೇನನ್ನೂ ಮಾತನಾಡುವ ಹಾಗಿರಲಿಲ್ಲ. ನಾನು ಸತ್ಯವನ್ನೇ ಹೇಳು ತ್ತಿದ್ದೆನಲ್ಲವೆ? ಅದನ್ನು ಅಲ್ಲಗಳೆಯುವ ನೈತಿಕ ಧೈರ್ಯ ಎಲ್ಲಿಂದ ಬರಬೇಕು ಅವರಿಗೆ?

ಒಂದು ಗಳಿಗೆ ಮೌನವಾಗಿದ್ದು ಅವರು ಮತ್ತೆ ಹೇಳಿದರು :

"ಆದದ್ದು ಆಯ್ತು ಶಿವಣ್ಣಾ. ಈಗ ಏನಾದರೂ ಹಾದಿ ಹುಡುಕಬೇಕು. ನಿನ್ನ ಹತ್ತರ ಇದ್ದರೆ ಕೊಡು. ಮುಂದೆ ತೆಗೆದುಕೊಂಡೀಯಂತೆ."

ನನ್ನ ಹತ್ತಿರವಾದರೂ ಎಲ್ಲಿಂದ ಬಂದೀತು ಹಣ? ನನ್ನ ಹತ್ತಿರವೂ ದುಡ್ಡು ನಿಲ್ಲುವಂತಿರಲಿಲ್ಲ. ಬಂದುದೆಲ್ಲ ಬಂದ ಹಾಗೇ ಖರ್ಚಾಗಿ ಹೋಗುತ್ತಿತ್ತು. ಫೌಜದಾರರ ಹಾಗೆ ನಾನು ಹೆಂಡ ಮತ್ತು ಹೆಣ್ಣುಗಳಿಗಾಗಿ ಹಾಳು ಮಾಡುವಂತಿರಲಿಲ್ಲ, ಅಷ್ಟೆ.

"ನನ್ನ ಹತ್ತಿರವೂ ಇಲ್ಲ ರಾವ್‌ಸಾಹೇಬರೆ."

ಈಶ್ವರಪ್ಪನವರ ಮುಖ ಕಪ್ಪಿಟ್ಟಿತು. ಇನ್ನೇನು ಮಾಡುವುದು? ಏನನ್ನಾದರೂ ಮಾಡಿ ಸಾವಿರ ರೂಪಾಯಿಗಳನ್ನಂತೂ ಹೊಂದಿಸಿಕೊಳ್ಳಲೇ ಬೇಕು. ಸಾಲವನ್ನಾದರೂ ಮಾಡಿ ಅಧಿಕಾರಿಗಳ ಪ್ರೀತಿಯುಳಿಸಿಕೊಳ್ಳಬೇಕು. ಸಾಲ....ಅದೂ ಅಷ್ಟು ಸುಲಭವಲ್ಲ. ಕಾಲವಾಡದಲ್ಲಿ ಈಶ್ವರಪ್ಪನವರಿಗೆ ಕೊಂಚವೂ ಮನ್ನಣೆಯಿರಲಿಲ್ಲ. ತಮ್ಮ ದುರ್ನಡತೆಯಿಂದಲೂ ದುಶ್ಚಟಗಳಿಂದಲೂ ಅವರು ಜನರಿಗೆಲ್ಲ ಅಪ್ರಿಯರಾಗಿದ್ದರು. ಅವರು ಕೇಳಿದರೆ ಸಾಲವೂ ಸಿಕ್ಕುವ ಹಾಗಿರಲಿಲ್ಲ.

ಹೆಂಡತಿಯ ಚಿನ್ನದೊಡವೆಗಳನ್ನು ತಂದು ನನ್ನ ಕೈಗೆ ಕೊಡುತ್ತ ಫೌಜದಾರರು ಹೇಳಿದರು :

"ಇವನ್ನು ಎಲ್ಲಾದರೂ ಒತ್ತೆಯಿಟ್ಟು ಸಾಲ ತಂದುಬಿಡು ಶಿವಣ್ಣಾ. ಮುಂದೆ ಬಿಡಿಸಿಕೊಂಡರಾಯಿತು."

ಆ ಹೆಣ್ಣುಮಗಳ ಒಡವೆಗಳನ್ನು ಒತ್ತೆಯಿಡಲು ನನ್ನ ಮನಸ್ಸು ಒಪ್ಪಲಿಲ್ಲ. ಕರುಳಿನಲ್ಲಿ ಕಸಿವಿಸಿಯಾಯಿತು.

"ಇವೇನೂ ಬೇಡ ರಾವ್‌ಸಾಹೇಬರೆ. ನಾನು ಬೇರೆ ಏನಾದರೂ ಉಪಾಯ ಮಾಡಿ ದುಡ್ಡು ಕೂಡಿಸಿ ಸಾಹೇಬರ ಕ್ಯಾಂಪಿನ ಖರ್ಚು ನೋಡಿಕೊಳ್ತೀನಿ," ಎಂದು ಹೇಳಿ ಆಭರಣಗಳನ್ನು ಅವರ ಕೈಗೆ ಕೊಟ್ಟೆ.

"ಏನು ಮಾಡುವವ ಶಿವಣ್ಣಾ ?"

"ಏನಾದರೂ ಮಾಡುತೀನಿ. ಆ ಚಿಂತೆ ಬೇಡ ನಿಮಗೆ. ಮುಂದೆ ನನ್ನ

ಸಾಲದ ಹಣ ಮುಟ್ಟುವವರೆಗೆ ಯಾವ ದುಡ್ಡು ಬಂದರೂ ನೀವು ಒಂದು ಪೈಯನ್ನು ತಕ್ಕೊಳ್ಳಬಾರದು."

"ಹಾಗೇ ಆಗಲಪ್ಪ. ನಿನಗೆ ತಿಳಿದಂತೆ ಮಾಡು," ಎಂದರು ಫೌಜದಾರರು.

ನಾನು ಸಿದ್ಧತೆಗಾರಂಭಿಸಿದೆ.

ಹತ್ತು ಹಳ್ಳಿಗಳ ಗೌಡರಿಗೆ ಹೇಳಿ ಕಳಿಸಿ ಗೋದಿ, ಜೋಳ, ಬೆಣ್ಣೆ, ಸೌದೆ ತರಿಸಿಕೊಂಡೆ. ದೊಡ್ಡ ಸಾಹೇಬರ ಬಿಡಾರದ ವ್ಯವಸ್ಥೆಯೆಂದರೆ ಕೇಳಬೇಕೇ! ಗೌಡರಾರೂ ಇಲ್ಲವೆನ್ನುವಂತಿರಲಿಲ್ಲ. ನೂರಾರು ಕೋಳಿ ಮೊಟ್ಟೆಗಳನ್ನೂ ಸಂಗ್ರಹಿಸಿದುದಾಯಿತು. ಸಾಹೇಬರು ಬರುವುದಕ್ಕೆ ಇನ್ನು ಎರಡು ದಿನವಿದ್ದಾಗ ಊರ ಚಾವಡಿಗೆ ಸುಣ್ಣ ಬಳಿದು ಸಿಂಗರಿಸಿದುದಾಯಿತು. ಗುಡಾರ, ಪಾತ್ರೆ ಪಡಗಗಳನ್ನು ಶೇಖರಿಸಿದುದಾಯಿತು. ಅಡುಗೆಯ ವ್ಯವಸ್ಥೆ ನೋಡಿಕೊಳ್ಳಲು ವೆಂಕಣ್ಣನನ್ನು ನೇಮಿಸಿದುದಾಯಿತು.

ನಮ್ಮ ಪೋಲೀಸಿನವರಲ್ಲೆಲ್ಲ ಅಡುಗೆ ಮಾಡುವುದರಲ್ಲಿ ಹೆಸರು ಗಳಿಸಿದವನು ವೆಂಕಣ್ಣ. ಅವನು ಮಾಡುತ್ತಿದ್ದ ಸಾರು ಜಿಲ್ಲೆಯಲ್ಲೆಲ್ಲ ಪ್ರಖ್ಯಾತಿ ಪಡೆದಿತ್ತು. "ವೆಂಕಣ್ಣನ ಸಾರಿನ ರುಚಿನೋಡಿದ ಆಫೀಸರುಗಳು ಜೋರು ಮಾಡುವ ಹಾಗೇ ಇಲ್ಲ," ಎಂದು ಪೋಲೀಸರು ತಮಾಷೆಗಾಗಿ ಹೇಳುವುದಿತ್ತು. ಅಡುಗೆ ಮಾಡುವುದರಲ್ಲಿ ನಿಪುಣನಾದರೂ ವೆಂಕಣ್ಣ ಬಹಳ ಆಸೆಬುರುಕ. ಅಡುಗೆಗೆಂದು ಕೈಗೆ ಕೊಟ್ಟ ಸಾಮುಗ್ರಿಗಳಲ್ಲಿ ಅರ್ಧಕ್ಕಿಂತಲೂ ಹೆಚ್ಚಾಗಿಯೆ ಅವನು ಮನೆಗೆ ಸಾಗಿಸುತ್ತಿದ್ದ. ಕದ್ದು ತಿನ್ನುವುದು ಅವನ ಮೈಗೆ ಅಂಟಿಕೊಂಡ ಚಟವಾಗಿತ್ತು. ಅರ್ಧಸೇರಿನಷ್ಟು ಬೆಣ್ಣೆಯನ್ನು ಒಂದೇಟಿಗೇ ನುಂಗಿಬಿಡುತ್ತಿದ್ದ. ನಾವು ಮತ್ತೆ ಬೆಣ್ಣೆ ತಂದುಕೊಡಬೇಕು, ಅವನು ಮತ್ತೆ ಅದನ್ನು ನುಂಗಬೇಕು. ಅದರಿಂದಾಗಿ ಅವನ ಅಡುಗೆಯೆಂದರೆ ಒಂದಕ್ಕೆ ನಾಲ್ಕರಷ್ಟು ಖರ್ಚು ಬರುವುದು ವಾಡಿಕೆಯಾಗಿತ್ತು.

ಅದನ್ನೆಲ್ಲ ಮೊದಲೇ ತಿಳಿದಿದ್ದ ನಾನು ಈ ಬಾರಿ ಹಾಗಾಗದಂತೆ ಎಚ್ಚರಿಕೆ ವಹಿಸಬೇಕೆಂದು ನಿರ್ಧರಿಸಿ ವೆಂಕಣ್ಣನನ್ನು ಬರಮಾಡಿಕೊಂಡು ಅವನ ಕೈಯಲ್ಲಿ ಇಪ್ಪತ್ತು ರೂಪಾಯಿ ಇಟ್ಟು,

"ಸಾಮಾನು ಏನೂ ಹಾಳು ಮಾಡಬೇಡ ವೆಂಕಣ್ಣಾ. ನಮ್ಮ ಹತ್ತಿರ ಹೆಚ್ಚು ಹಣವಿಲ್ಲ," ಎಂದು ಹೇಳಿದೆ.

ಇಪ್ಪತ್ತು ರೂಪಾಯಿಗಳನ್ನು ಕಂಡು ವೆಂಕಣ್ಣನಿಗೆ ಅತ್ಯಾನಂದವಾಗಿತ್ತು. ಅಡುಗೆಯ ಕೆಲಸಕ್ಕಾಗಿ ಅಷ್ಟು ಹಣ ಆ ಮೊದಲೆಂದೂ ಸಿಕ್ಕಿರಲಿಲ್ಲ ಅವನಿಗೆ. ಅವನಿಂದ ಕೆಲಸ ಮಾಡಿಸಿಕೊಂಡ ತರುವಾಯ ಐದಾರು ರೂಪಾಯಿ ಕೊಡುವ ಪರಿಪಾಠವಿತ್ತು. ಕೆಲವು ಬಾರಿ ಅಷ್ಟೂ ಸಿಕ್ಕುತ್ತಿರಲಿಲ್ಲ. ಬಿಟ್ಟೀ ಕೆಲಸ ಮಾಡುವುದೇಕೆ ಎಂದು ಯೋಚಿಸಿಕೊಂಡೇ ಸಾಮಾನು ಹಾರಿಸುತ್ತಿದ್ದ ವೆಂಕಣ್ಣ.

"ನೀವು ಕಾಳಜೀ ಬಿಡಿರಿ ಶಿವಣ್ಣಾ," ಎಂದ ವೆಂಕಣ್ಣ.

"ನೀನು ಎಲ್ಲಾ ಚೆನ್ನಾಗಿ ನೋಡಿಕೊಂಡಿಯೆಂದರೆ ನಿನಗೆ ಮತ್ತೆ ಭಕ್ಷೀಸು ಕೊಡ್ತೀನಿ," ಎಂದು ನಾನು ಹೇಳಿದಾಗ ವೆಂಕಣ್ಣನ ಮುಖವರಳಿತು.

ಸಕ್ಕರೆ, ಚಹಾಪುಡಿ, ಕಿರಾಣಿ ಸಾಮಾನು ಮೊದಲಾದುದನ್ನೆಲ್ಲ ಉಜ್ಜಪ್ಪನವರ ಅಂಗಡಿಯಲ್ಲೇ ಕೊಂಡುಕೊಂಡೆವು. ಎಲ್ಲ ಸಾಮಾನುಗಳನ್ನೂ ಫೌಜದಾರರ ಮನೆಯಲ್ಲಿಡಲಾಯಿತು. ಬಿಡಾರದ ಜನರ ಲೆಕ್ಕ ನೋಡಿಕೊಂಡು ವೆಂಕಣ್ಣ ಸಾಮಾನು ಕೇಳುವುದು, ಅಪ್ಪಣ್ಣ ಅಂದರಂತೆ ಮುಟ್ಟಿಸುವುದೆಂದು ಗೊತ್ತಾಯಿತು.

....ಸಾಹೇಬರ ಪರಿವಾರ ಆಗಮಿಸಿತು – ಒಟ್ಟು ಹತ್ತು ಜನರ ಪರಿವಾರ.

ಸಾಹೇಬರಿಗೆ ಬ್ರಾಂದಿ ಅವಶ್ಯವಲ್ಲವೆ? ಏಳು ದಿನಗಳ ವಾಸ್ತವ್ಯ. ಏಳು ಬಾಟಲು ಬ್ರಾಂದಿ ಮೊದಲೇ ತರಿಸಿ ಇಟ್ಟುಕೊಂಡಿದ್ದೆವು. ಅವರ ಊಟದ ವ್ಯವಸ್ಥೆಗಾಗಿ ಒಬ್ಬ 'ಬಟ್ಲರ್' ಬಂದಿದ್ದ. ಎರಡು ಕೋಳಿಗಳು, ಆರು ತತ್ತಿಗಳು, ಎರಡು ಸೇರು ಬೆಣ್ಣೆ, ಗೋದಿಯ ಹಿಟ್ಟು, ಬ್ರೆಡ್, ಅಕ್ಕಿ ಮೊದಲಾದ ಸಾಹಿತ್ಯವನ್ನು ಆ ಬಟ್ಲರನಿಗೊಪ್ಪಿಸಲಾಗುತ್ತಿತ್ತು. ಅದರೊಡನೆ ಎರಡು ತಂಬಿಗೆಗಳಷ್ಟು ಹಾಲು. ಸಾಹೇಬರಿಗೆ ಯಾವುದರಲ್ಲೂ ಕೊರತೆಯೆನ್ನಿಸುವಂತಿರಲಿಲ್ಲ.

ಪರಿವಾರದ ಜನರೆಲ್ಲರೂ ಶಾಖಾಹಾರಿಗಳು. ನಮ್ಮ ವೆಂಕಣ್ಣನ ನಳಪಾಕ ಅವರಿಗೆ ಹೆಚ್ಚು ಹಿಡಿಸಿಬಿಟ್ಟಿತು. "ಬರೀ ಸಾರನ್ನೇ ಕುಡಿದು ಅವರು ಹೊಟ್ಟೆ ತುಂಬಿಸಿಕೊಳ್ಳುವಂತೆ ಮಾಡುತೀನಿ!" ಎಂದು ನಗುನಗುತ್ತಾ ಹೇಳುತ್ತಿದ್ದ ವೆಂಕಣ್ಣ. ಅವನ ಸಾರು ಅವರನ್ನೆಲ್ಲ ಮರುಳುಗೊಳಿಸಿದ್ದುದೂ ನಿಜ.

ಆದರೆ, ಮೊದಲನೆಯ ದಿನ ಮಾತ್ರ ಒಂದು ಅಚಾತುರ್ಯದ ಘಟನೆ ನಡೆಯಿತು.

ಸಾಹೇಬರ ಪರಿವಾರದೊಡನೆ ಬಂದಿದ್ದ ನಾಯಿಗೆ ಮಾಂಸ ಅವಶ್ಯವಷ್ಟೆ. ಬಟ್ಲರ್ ಆ ವಿಷಯವನ್ನೇ ಮರೆತುಬಿಟ್ಟ ಹಾಗಿತ್ತು. ನಮಗಾದರೂ ಹೇಗೆ ತಾನೆ ಗೊತ್ತಾಗಬೇಕು? ಮಾಂಸವಿಲ್ಲದೆ ಹಸಿದಿದ್ದ ನಾಯಿ, ಸಾಹೇಬರು ಊಟಕ್ಕೆ ಕುಳಿತಿದ್ದಾಗ ಅವರ ತಟ್ಟೆಗೆ ಬಾಯಿಹಾಕಿ ಅದರಲ್ಲಿನ ಕೋಳಿಯ ಪಲ್ಯವನ್ನು ತಿಂದುಹಾಕಿತು. ಸಾಹೇಬರು ಕೋಪಿಸಿಕೊಂಡು, ಬಟ್ಲರನನ್ನು ಕೂಗಿ,

"ನಾಯಿಗೆ ಮಟನ್ ಹಾಕಿಲ್ಲವೇನು?" ಎಂದು ಕೇಳಿದರು.

"ಇಲ್ಲ ಸಾಹೇಬರೆ," ನಡುಗುತ್ತಾ ಉತ್ತರವಿತ್ತ ಬಟ್ಲರ್.

ನಾವು ಮಾಂಸವನ್ನೊದಗಿಸಿರಲಿಲ್ಲವೆಂಬ ಸಂಗತಿ ಗೊತ್ತಾಗುತ್ತಲೂ ಸಾಹೇಬರು ನಮ್ಮ ಮೇಲೆ ಸಿಟ್ಟುಬೆಂಕಿಯಾಗಿ ಬಾಯಿಗೆ ಬಂದ ಶಬ್ದಗಳನ್ನು ಕೂಗತೊಡಗಿದರು. ನಾವೂ ಗಾಬರಿಗೊಂಡೆವು. ಅಂಥ ಆಯತ ಸಮಯದಲ್ಲಿ ಮಾಂಸವನ್ನು ತರುವುದಾದರೂ ಎಲ್ಲಿಂದ?

ನಾನು ಅತ್ತಿತ್ತ ನೋಡುತ್ತಿದ್ದ ಹಾಗೇ ರಸ್ತೆಯಲ್ಲಿ ಹೊಲೆಯರಿಬ್ಬರು ಕೆಲವು ಮೊಲಗಳನ್ನು ಹಿಡಿದುಕೊಂಡು ಹೊರಟಿದ್ದುದು ಕಾಣಿಸಿತು. ಆ ಹೊಲೆಯರ ರೂಪದಲ್ಲಿ ದೇವರೇ ಬಂದು ಸಾಹೇಬರ ಕೋಪದಿಂದ ನಮ್ಮನ್ನುಳಿಸಿದನೆಂದು ಮನಸ್ಸಿನಲ್ಲೇ ಹೇಳಿಕೊಳ್ಳುತ್ತಾ ನಾನು ಆ ಹೊಲೆಯರನ್ನು ಕೂಗಿ ಒಂದು ಮೊಲವನ್ನು ಬೇಡಿ ತೆಗೆದುಕೊಂಡು ನೇರವಾಗಿ ಸಾಹೇಬರ ಹತ್ತಿರ ಅದನ್ನೊಯ್ದೆ. ನಾಯಿ ಟಣ್ಣನೆ ಜಿಗಿದು ಮೊಲವನ್ನು ಕಚ್ಚಿ ಹಿಡಿದುಕೊಂಡು ಹೊರಗಡೆ ಹೋಯಿತು.

ಸಾಹೇಬರ ಕೋಪವಿಳಿಯಿತು.

"ನಾಳೆ ನಮ್ಮ ಊಟಕ್ಕೂ ಒಂದು ಮೊಲವನ್ನೇ ತಂದುಕೊಡಪ್ಪಾ," ಎಂದರವರು.

ನಾನು ಆ ಹೊಲೆಯರನ್ನು ಕರೆಯಿಸಿ ಎಲ್ಲ ಮೊಲಗಳನ್ನು ಕೊಂಡುಕೊಂಡು ಸಾಹೇಬರಿಗಾಗಲಿ, ಅವರ ಪರಿವಾರದವರಿಗಾಗಲಿ, ಅವರ ನಾಯಿಗಾಗಲಿ ಯಾವ ಕೊರತೆಯೂ ಆಗದಂತೆ ಪೂರ್ಣವ್ಯವಸ್ಥೆಯಾಯಿತು. ಯಾವ ತಕರಾರೂ ಇಲ್ಲದೆ ಕಚೇರಿಯ ತಪಾಸಣೆ ನಡೆಯಿತು. ನಮ್ಮ ವ್ಯವಸ್ಥೆಯನ್ನು

ಮೆಚ್ಚಿಕೊಂಡಿದ್ದ ಸಾಹೇಬರು ನಮ್ಮ ಕಚೇರಿಯ ಬಗೆಗೆ ಉತ್ತಮ 'ಷರಾ' ಬರೆದರು. ಪೋಲೀಸರ ವೈಯಕ್ತಿಕ 'ಸರ್ವಿಸ್ ಷೀಟ್'ಗಳಲ್ಲೂ ಒಳ್ಳೆಯ 'ಷರಾ' ದಾಖಲಾಯಿತು. ತಪಾಸಣೆ ಮುಗಿದು ಸಾಹೇಬರ ಬಿಡಾರ ತಳಕಿತ್ತು ಮುಂದೆ ಹೋಯಿತು. ಹೋಗುವಾಗ ನಾವು ಬಿಡಾರದ ಖರ್ಚಿನ ಬಗ್ಗೆ ಬಿಲ್ ಕೊಡಬೇಕಾಗುತ್ತದೆ. ವಾಸ್ತವವಾಗಿ ನಮಗೆ ಏಳೆಂಟು ನೂರು ರೂಪಾಯಿ ಖರ್ಚು ಬಂದಿದ್ದಿತಾದರೂ ನಾವು ಬಿಲ್ ಕೊಟ್ಟುದುದು ಮಾತ್ರ ಐದೂವರೆ ರೂಪಾಯಿಗಳಿಗೆ. ಅದಕ್ಕೊಂದು ರಸೀತಿಯನ್ನು ಕೊಟ್ಟೆವು. ಆ ಐದು ರೂಪಾಯಿಗಳೂ ಅವರ ಬಟ್ಲರನ ಕೈಸೇರಿದುವು.

ಈಶ್ವರಪ್ಪ ಫೌಜದಾರರು ಉತ್ತಮರೀತಿಯಿಂದ ಕೆಲಸ ಮಾಡಿರುವರೆಂದು ಸಾಹೇಬರು ಷರಾ ಬರೆದಿದ್ದುದರಿಂದ ಫೌಜದಾರರಿಗೆ ಸ್ವರ್ಗ ಮೂರೇ ಬೆರಳು ಉಳಿದಿತ್ತು.

"ಎಲ್ಲಾ ಚೆನ್ನಾಗಿ ನೋಡಿಕೊಂಡೆ ಶಿವಣ್ಣಾ. ಸಾಹೇಬರು ಖುಷಿ ಯಾದರು," ಎಂದರು ಫೌಜದಾರರು.

ಕಾಲವಾಡದ ಮೊಚ್ಚೆಗಾರರು ಒಳ್ಳೆಯ ಮೊಚ್ಚು ತಯಾರಿಸುವುದಕ್ಕೆ ಹೆಸರು ಪಡೆದಿದ್ದರು. ಸಾಹೇಬರೊಡನೆ ಬಂದವರೆಲ್ಲರೂ ಒಂದೊಂದು ಜೊತೆ ಚಪ್ಪಲಿಗಳನ್ನು ತೆಗೆದುಕೊಂಡರು. ಅವುಗಳ ಹಣವನ್ನೂ ನಾವೇ ಕೊಡ ಬೇಕಾಯಿತು.

"ಹೋದರೆ ಹೋಗಲಿ. ಅಂತೂ ಎಲ್ಲಾ ಸುಸೂತ್ರ ನಡೀತಲ್ಲ!" ಎಂದರು ಫೌಜದಾದರು.

"ಎಂಟು ನೂರು ರೂಪಾಯಿಗಳವರೆಗೂ ಹೋಯಿತಲ್ಲ ರಾವ್ ಸಾಹೇಬರೆ!"

"ಹೋದರೆ ಹೋಗಲಿ ಬಿಡಪ್ಪಾ!" ಎಂದರು ಫೌಜದಾರರು.

ಹಳ್ಳಿಗಳ ಗೌಡರಿಂದ ಉಚಿತವಾಗಿ ಬಂದಿದ್ದ ಕಾಳಿನ ಖರ್ಚನ್ನೂ ಸೇರಿ ಸಿದರೆ ಒಟ್ಟು ಒಂದುಸಾವಿರ ರೂಪಾಯಿಯ ಮೊತ್ತವಾಗುತ್ತಿತ್ತು. ವರ್ಷದ ಲ್ಲೆರಡುಸಲ ಎಲ್ಲ ಪೋಲೀಸ್ ಕಚೇರಿಗಳಿಗೂ ಆಗುವ 'ಹಜಾಮತಿ'ಯಿದು. ಪ್ರತಿವರ್ಷವೂ ಎರಡು ಸಾವಿರ ರೂಪಾಯಿ ಈ ಸರಬರಾಜಿಗಾಗಿ ಸುರಿಯ ಬೇಕು. ಪೋಲೀಸರೂ ಪೋಲೀಸ್ ಅಧಿಕಾರಿಗಳ ಲಂಚದ ಹಣ ಕೇಳಲು

ಮುಖ್ಯ ಕಾರಣವೆಂದರೆ ಇದೇ ಆಗಿದೆ. ಲಂಚ ತಿನ್ನ ಬಾರದೆಂದು ಪ್ರತಿಜ್ಞೆ ಮಾಡಿದ ಪೋಲೀಸು ಅಧಿಕಾರಿ ಒಂದೋ, ಸಾಲಮಾಡಿ ಈ ಎರಡು ಸಾವಿರ ಹೊಂದಿಸಿಕೊಳ್ಳಬೇಕು, ಇಲ್ಲವಾದರೆ ನೌಕರಿಗೆ ರಾಜೀನಾಮೆಯಿತ್ತು ಮನೆಗೆ ಹೋಗಬೇಕು. ಮೂರನೆಯ ದಾರಿಯೇ ಇಲ್ಲ. ಪೋಲೀಸರು, ಪೋಲೀಸ್ ಅಧಿಕಾರಿಗಳು, ಸಾಹೇಬರುಗಳು, ದೊಡ್ಡ ಸಾಹೇಬರುಗಳು ಎಲ್ಲರಿಗೂ ಗೊತ್ತಿರುವ ಸಂಗತಿಯಿದು. ಬಹಿರಂಗವಾಗಿ ಯಾರೂ ಈ ವಿಚಾರ ಚರ್ಚಿಸುವುದಿಲ್ಲ. ಚರ್ಚಿಸುವಂಥ ಸಂಗತಿಯೂ ಅಲ್ಲವಲ್ಲ ಇದು!

ಬ್ರಿಟಿಷ್ ಸರಕಾರವಿದ್ದಾಗಲಂತೂ ಇಂಥ ಪರಿಸ್ಥಿತಿಯಿತ್ತು.

ಕಾಂಗ್ರೆಸ್ ಸರಕಾರ ಬಂದ ತರುವಾಯ ಈ ಸ್ಥಿತಿಯಲ್ಲಿ ಬದಲಾವಣೆಯಾಗಿದ್ದರೂ ಆಗಿದ್ದೀತು. ನನಗೇನೂ ತಿಳಿಯದು.

ನಾನೀಗ ಪೋಲೀಸನಾಗಿಲ್ಲವಲ್ಲ!

ಸ್ವಾತಂತ್ರ್ಯ ಬಂದ ವರ್ಷವೊಂದರಲ್ಲೇ ಪೋಲೀಸ್ ಕೆಲಸದಿಂದ 'ಸ್ವತಂತ್ರ' ನಾಗಿ ಬಿಟ್ಟೆ ನಾನೂ!

## ೨

# ಬಿಡಾರದ ಖರ್ಚು ತುಂಬಿ ಬಂತು!

ಸಾಹೇಬರಿಂದ ನಮಗಾಗಿದ್ದ 'ಹಜಾಮತಿ'ಯ ನಷ್ಟ ತುಂಬಿಕೊಳ್ಳಬೇಕಲ್ಲವೆ! ಪೋಲೀಸರಾದ ನಮಗೆ ಯಾವುದೂ ಅಸಾಧ್ಯವಲ್ಲ. ಹಣ ಸಿಗುವ ಸಂದರ್ಭಗಳಿಗೇನೂ ಕೊರತೆಯಿಲ್ಲ ನಮ್ಮ ಜೀವನದಲ್ಲಿ.

....ಕಾಲವಾಡದಿಂದ ಆರು ಮೈಲು ದೂರವಿದ್ದ ಹಳ್ಳಿಯೊಂದರ ಗೌಡನಿಂದ ಒಂದು ಫಿರ್ಯಾದು ನಮ್ಮ ಕೈಸೇರಿತು. ಆ ಹಳ್ಳಿಯ ಸಿಂಪಿಗನೊಬ್ಬನ ಹೊಲಿಗೆಯ ಯಂತ್ರ ಕಳವಾಗಿ ಹೋಗಿತ್ತು. ಅದರ ತಪಾಸಣೆಗಾಗಿ ನಾವು ಅಲ್ಲಿಗೆ ಹೊರಡಬೇಕಾಯಿತು.

ಅವನೊಬ್ಬ ಬಡ ಸಿಂಪಿಗ. ಅವನ ಜೀವನಾಧಾರವಾಗಿದ್ದುದು ಅದೊಂದು ಪುಟ್ಟ ಯಂತ್ರ. ಅದರ ಮೇಲೆ ರೈತರ ಬಟ್ಟೆ ಹೊಲಿದು ಅವರಿಂದ ದೊರೆಯುವ ಆಯದ ಕಾಳಿನಿಂದ ಜೀವನ ಸಾಗಿಸುತ್ತಿದ್ದ. ಬಡವರಿಗೇ ಮಕ್ಕಳು ಹೆಚ್ಚು ಎನ್ನುವ ಮಾತು ಅವನ ವಿಷಯದಲ್ಲೂ ಸತ್ಯವಾಗಿ ಪರಿಣಮಿಸಿತ್ತು. ಅವನ ಹಿರಿಯ ಮಗಳು ಗೌರಿಗೆ ಆಗ ಹದಿನಾರರ ಪ್ರಾಯ. ಅವಳ ತರುವಾಯ ಎರಡು ವರ್ಷಗಳಿಗೊಂದು ಮಗು ಹುಟ್ಟುತ್ತ ಬಂದು ಈಗ ಅವನಿಗೆ ಎಂಟು ಮಕ್ಕಳಾಗಿದ್ದುವು. ಇನ್ನೊಂದು ಹುಟ್ಟುವುದರಲ್ಲಿತ್ತು. ಸುತ್ತುಮುತ್ತಲಿನ ಹಳ್ಳಿಗಳನ್ನು ಸುತ್ತಿ ಅವನು ಹೊ ಯ ಕೆಲಸ ದೊರಕಿಸಿ ತರುತ್ತಿದ್ದ. ಅವನ ಹೆಂಡತಿಯೂ ಹಿರಿಯ ಮಗಳು ಗೌರಿಯೂ ಬಟ್ಟೆಗಳನ್ನು ಹೊಲಿಯುತ್ತಿದ್ದರು. ಚಿಕ್ಕಮಕ್ಕಳೂ ತರಬೇತಿ ಪಡೆಯುತ್ತಿದ್ದುವು. ಅವರ

ಹೊಲಿಗೆಯೆಂದರೆ ಹಳೆಯ ಕಾಲದ ಹೊಲಿಗೆ. ಮುದುಕರ ಅಂಗಿಗಳು, ಹೆಣ್ಣು ಮಕ್ಕಳ ಕುಬುಸಗಳು, ಚಿಕ್ಕಮಕ್ಕಳ ಕುಲಾವಿ ಕೊಂಚಿಗೆಗಳು.

ಗೌರಿಗೆ ಹದಿನಾರು ವಯಸ್ಸಾಗಿದ್ದರೂ ಇನ್ನೂ ಮದುವೆಯಾಗಿರಲಿಲ್ಲ. ಅವಳು ಹುಟ್ಟಾ ಸುಂದರಿ. ಸಾಧಾರಣ ಸೀರೆ ರವಿಕೆಗಳಲ್ಲೂ ಅವಳ ಚೆಲುವು ಎದ್ದು ಕಾಣುತ್ತಿತ್ತು.

ಆ ಹಳ್ಳಿಯ ಗೌಡನಿಗೆ ಎಂಭತ್ತು ಕೂರಿಗೆಗಳಷ್ಟು ಜಮೀನಿತ್ತು. ಅವನ ಹಿರಿಯ ಮಗ ಸೋಮನಗೌಡನಿಗಾಗ ಇಪ್ಪತ್ತರ ಪ್ರಾಯ. ಗೊಬ್ಬೂರಿನಲ್ಲಿ ಇಂಗ್ಲಿಷ್ ನಾಲ್ಕನೆಯ ತರಗತಿಯವರೆಗೂ ಓದಿ ನಾಲ್ಕು ಶಬ್ದ ಇಂಗ್ಲಿಷ್ ಮಾತಾಡಲು ಕಲಿತು, ನಗರದ ಆಧುನಿಕ ಫ್ಯಾಷನ್ನುಗಳನ್ನಳವಡಿಸಿಕೊಂಡು ಬಂದಿದ್ದವನು ಸೋಮನಗೌಡ. ತಂದೆಯ ತರುವಾಯ ಊರ ಗೌಡನಾಗುವವನು ಅವನೇ ಅಲ್ಲವೆ! ಸೋಮನಗೌಡ ,ರಾಜಕುಮಾರನ ಠೀವಿಯಿಂದ ಮೆರೆಯುತ್ತಿದ್ದ. ಕ್ರಾಪುಕೂದಲನ್ನು ಓರಣದಿಂದ ಬಾಚಿಕೊಂಡು ಬಿಳಿಯ ಬಟ್ಟೆ ಧರಿಸಿ ನಾಲ್ವರು ಗೆಳೆಯರನ್ನು ಕಟ್ಟಿಕೊಂಡು ಹಳ್ಳಿಯಲ್ಲಿ ಅಲೆಯುವುದು ಅವನ ನಿತ್ಯ ಕಾರ್ಯಕ್ರಮವಾಗಿದ್ದಿತು. ಮಾಡುವುದಕ್ಕೆ ಬೇರಾವ ಕೆಲಸವೂ ಇಲ್ಲದಿದ್ದಾಗ ಹುಡುಗಿಯರನ್ನು ನೋಡುವುದೇ ಒಂದು ಕೆಲಸವಾಗಿತ್ತು ಸೋಮನಗೌಡನಿಗೆ. ಹಳ್ಳಿಯ ಹುಡುಗಿಯರಲ್ಲೆಲ್ಲ ರೂಪವತಿಯೆಂದು ಹೆಸರು ಪಡೆದಿದ್ದ ಗೌರಿ ಅವನ ಗಮನ ಸೆಳೆಯದಿರಲಿಲ್ಲ. ನೀರು ತರಲು ಅವಳು ಕೆರೆಗೆ ಹೋಗಿಬರುವಾಗ ಅವನು ಅವಳನ್ನು ಕಂಡಿದ್ದ, ಕಂಡು ಮರುಳಾಗಿದ್ದ. ಗೌಡನ ಮಗನಾದುದರಿಂದ ಅವನಿಗೆ ಯಾರ ಭೀತಿಯೂ ಇರಲಿಲ್ಲ. ನೀರಿನ ಕೊಡ ಹೊತ್ತು ಅವಳು ಮನೆಗೆ ಬರುತ್ತಿದ್ದಾಗ ಒಂದು ದಿನ ಅವನು ಅವಳನ್ನು ಅಡ್ಡಗಟ್ಟಿದ್ದ. "ನಿನ್ನ ನೋಡಿ ಮನಸ್ಸಾಗೈತಿ, ಗೌರೀ," ಎಂದೆಲ್ಲ ಪೋಲಿ ಮಾತು ಆಡಿದ್ದ. ಅವಳು ಬಡವರ ಮನೆಯ ಹುಡುಗಿಯಾದರೂ ಮರ್ಯಾದಸ್ಥಳಾಗಿದ್ದಳು. ಸೋಮನಗೌಡನ ಕೈಯಿಂದ ಹೇಗೋ ತಪ್ಪಿಸಿಕೊಂಡು ಮನೆಗೆ ಬಂದುಬಿಟ್ಟಿದ್ದಳು. ಅವಳಿಗೆ ಉಭಯ ಸಂಕಟ. ಅವಳ ತಾಯಿ ದುರ್ಬಲ ಸ್ತ್ರೀ. ಹಿರಿಯ ಮಗಳಾದ ಅವಳೇ ಮನೆಗೆ ನೀರು ತರಬೇಕಾಗುತ್ತಿತ್ತು ದಿನವೂ. ನೀರಿಗೆ ಹೋಗುವುದನ್ನು ನಿಲ್ಲಿಸುವಂತಿರಲಿಲ್ಲ. ಸೋಮನಗೌಡನಾದರೋ ಅವಳ ಬರುವನ್ನೇ ಕಾಯುತ್ತಿದ್ದು ಭಂಡ ಮಾತು

ಆಡುತ್ತಿದ್ದ. ನೀರಿಗೆ ಬರುತ್ತಿದ್ದ ಹೆಣ್ಣುಮಕ್ಕಳ ಮೂಲಕ ಈ ಸಂಗತಿ ಹಳ್ಳಿಯಲ್ಲಿ ಹರಡಲು ವಿಲಂಬವಾಗಲಿಲ್ಲ.

ಗೌರಿ ಧೈರ್ಯ ತಂದುಕೊಂಡು ಒಂದು ದಿನ ತನ್ನ ತಂದೆಯೆದುರಿಗೆ ಸೋಮನಗೌಡನ ಕಿರುಕುಳವನ್ನೆಲ್ಲ ವಿವರಿಸಿ ಹೇಳಿದಳು. ಬಡ ಸಿಂಪಿಗ. ಅವನಾದರೂ ತಾನೆ ಏನನ್ನು ಮಾಡಬಲ್ಲ? ಗೌಡರ ಮಗನೊಡನೆ ಜಗಳಕ್ಕೆ ನಿಲ್ಲುವುದೇ! ಅದಕ್ಕೆ ಶಕ್ತಿ ಸಾಲದು. ಮಗಳ ಮದುವೆ ಮಾಡಿಬಿಟ್ಟರೆ ಸಮಸ್ಯೆ ಬಗೆಹರಿಯುತ್ತಿತ್ತು. ಆದರೆ, ಮದುವೆಯೂ ಸುಲಭವಾಗಿರಲಿಲ್ಲ. ಮಕ್ಕಳು ಮರಿಗಳ ಹೊಟ್ಟೆ ತುಂಬಿಸುವುದೇ ದುಸ್ತರವಾಗಿರುವಾಗ ಮದುವೆಯ ಮಾತು! ಏನಿಲ್ಲವೆಂದರೂ ನಾಲ್ಕೈದುನೂರು ರೂಪಾಯಿ ಬೇಕು ಮದುವೆಗೆ. ಆ ಬಡಪಾಯಿಯ ಹತ್ತಿರ ಐದು ರೂಪಾಯಿಗಳೂ ಇರಲಿಲ್ಲ.

ಸಿಂಪಿಗ ಬಹಳವಾಗಿ ಯೋಚಿಸಿದ. ಸೋಮನಗೌಡನ ಕಾಟ ತಪ್ಪಿಸಬೇಕಾದರೆ ಗೌಡರಿಗೆ ಹೇಳಿಕೊಳ್ಳುವುದೊಂದೇ ಉಪಾಯ. ಊರಿನೆಲ್ಲ ಜನರ ತಾಯಿ ತಂದೆಯಂತಿದ್ದವರು ಗೌಡರು. ಅವರು ತನ್ನ ಮಗಳ ಮರ್ಯಾದೆಯನ್ನು ಕಾಪಾಡಲಾರರೇ?

ಸಿಂಪಿಗ ನೇರವಾಗಿ ಗೌಡರ ಹತ್ತಿರ ಹೋಗಿ ಅವರ ಮಗನ ಕಿತಾಪತಿಯ ವಿಷಯ ಹೇಳಿಕೊಂಡ.

ನಿಜವಾಗಿ ಆ ಊರ ಗೌಡರು ಬಹಳ ಒಳ್ಳೆಯವರು. ತುಂಬಾ ಸಾತ್ವಿಕ ಸ್ವಭಾವದವರು. ಹಳ್ಳಿಯ ಜನವನ್ನೆಲ್ಲ ತಮ್ಮ ಮಕ್ಕಳಂತೆಯೇ ನೋಡಿಕೊಳ್ಳುತ್ತಿದ್ದರು. ಅವರ ಹೆಂಡತಿಯೂ ಅವರಿಗೆ ಅನುರೂಪಳಾದ ಹೆಣ್ಣು ಮಗಳು. ಕಷ್ಟಪಡುವವರನ್ನು ಕಂಡು ಸುಮ್ಮನಿರದೆ ತಮ್ಮಿಂದ ಸಾಧ್ಯವಿದ್ದ ನೆರವು ನೀಡುತ್ತಿದ್ದಳು. ಅವರ ಮಗಳ ಮದುವೆಯ ಕಾಲಕ್ಕೆ ಮೂರು ದಿನಗಳವರೆಗೆ ಹಳ್ಳಿಯಲ್ಲಿನ ಇತರ ಎಲ್ಲಾ ಮನೆಗಳಲ್ಲೂ ಒಲೆ ಉರಿದಿರಲಿಲ್ಲ. ಊರಿಗೆ ಊರೇ ಗೌಡರ ಮನೆಯಲ್ಲಿ ಉಂಡು ನಲಿದಿತ್ತು. ಬಡ ಹೆಣ್ಣುಮಕ್ಕಳಿಗಾಗಿ ಎರಡು ನೂರು ಸೀರೆಗಳನ್ನೂ ಕುಬುಸಗಳನ್ನೂ ತರಿಸಿ ದಾನ ಮಾಡಿದ್ದರು ಗೌಡರು. ಊರಲ್ಲಿ ಯಾರಿಗೆ ಯಾವ ಅನ್ಯಾಯವಾದರೂ ಗೌಡರು ಸುಮ್ಮನಿರುತ್ತಿರಲಿಲ್ಲ. ಅನ್ಯಾಯ ಮಾಡಿದವರನ್ನು ನಿಷ್ಠುರವಾಗಿ ದಂಡಿಸುತ್ತಿದ್ದರು. ಅಂಥ ಉದಾತ್ತ

ಮನೋವೃತ್ತಿಯ ಗೌಡರಿಗೆ, ಅವರ ಸ್ವಂತ ಮಗನೇ ಅನ್ಯಾಯವೆಸಗುತ್ತಿದ್ದುದು ತಿಳಿದುಬಂದಾಗ ಎಷ್ಟು ವ್ಯಸನವಾಗಿರಬೇಡ!

"ನೀನೇನೂ ಚಿಂತೆ ಮಾಡಬೇಡಪ್ಪಾ. ಮಗಳಿಗೆ ಮೊದಲು ವರ ಹುಡುಕು. ನಾನೂ ನಿನಗೆ ನೂರಿನ್ನೂರು ರೂಪಾಯಿ ಸಹಾಯ ಮಾಡುತ್ತೀನಿ - ಸೋಮನಗೌಡನಿಂದ ಏನೂ ತ್ರಾಸವಾಗದಂಗ ನೋಡಿಕೋತೀನಿ, ಹೋಗು," ಎಂದು ಹೇಳಿ ಸಿಂಪಿಗನನ್ನು ಸಂತೈಸಿ ಕಳಿಸಿದರು ಗೌಡರು.

ಹೊತ್ತು ಮುಳುಗಿ ಕತ್ತಲಾದ ಬಳಿಕ ಸೋಮನಗೌಡ ಮನೆಗೆ ಬಂದ. ಗೌಡರು ಅವನನ್ನು ಕಂಡು ಕಿಡಿಕಿಡಿಯಾಗಿ,

"ಸೋಮಾ, ಬಾ ಇಲ್ಲಿ," ಎಂದು ಕೂಗಿ ಕರೆದರು. ಅವನು ಅಂಜು ತ್ತಂಜುತ್ತ ಬಂದು ನಿಂತ.

"ಇಷ್ಟೊತ್ತು ಎಲ್ಲಿ ಹೋಗಿದ್ದಿ?"

"ತಿರುಗಾಡುವದಕ್ಕೆ." ಸೋಮನಗೌಡ ತಡವರಿಸುತ್ತಾ ಉತ್ತರವಿತ್ತ. ಇಪ್ಪತ್ತರ ಪ್ರಾಯದ ಯುವಕನಾಗಿದ್ದರೂ ಅವನು ತಂದೆಗೆ ಬಹಳವಾಗಿ ಹೆದರುತ್ತಿದ್ದ. ಎರಡು ವರ್ಷಗಳ ಹಿಂದೆ ಅವನು ಗೊಬ್ಬೂರಿನಲ್ಲಿ ಸಾಲೆ ಕಲಿಯು ತ್ತಿದ್ದಾಗಲೊಮ್ಮೆ ಅವನಿಗೆ ಮೊದಲೇ ತಿಳಿಸದೆ ಗೌಡರು ಅವನ ಕೊಠಡಿಗೆ ಹೋಗಿದ್ದರು. ಸೋಮನಗೌಡ ಸುಖವಾಗಿ ಸಿಗರೇಟು ಎಳೆಯುತ್ತಾ ಕುಳಿತು ಕೊಂಡಿದ್ದ. ಗೌಡರು ಅವನನ್ನು ಹಿಡಿದು ನಾಲ್ಕು ಏಟುಹಾಕಿ ಅಂದೇ ಅವನ ಸಾಲೆ ಬಿಡಿಸಿ ಅವನನ್ನು ಊರಿಗೆ ಕರೆದು ತಂದಿದ್ದರು. ಅಂದಿನಿಂದಲೂ ತಂದೆ ಯೆದುರಿಗೆ ನಿಂತು ಮಾತನಾಡುವುದಕ್ಕೂ ಹೆದರುತ್ತಿದ್ದ ಸೋಮನಗೌಡ.

ಗೌಡರು ತಾವೇ ಸ್ವತಃ ಹೊಲಗಳಲ್ಲಿ ಎಂದೂ ದುಡಿದಿರಲಿಲ್ಲವಾದರೂ ಆಳುಗಳಿಂದ ಕೆಲಸ ಮಾಡಿಸುವುದರಲ್ಲಿ ಮಾತ್ರ ಪ್ರವೀಣರಾಗಿದ್ದರು. ರೈತರನ್ನು ಅವರು ಮಮತೆಯಿಂದ ನೋಡಿಕೊಳ್ಳುತ್ತಿದ್ದಂತೆ ಅವರ ಮೇಲೆ ದರ್ಪವನ್ನೂ ಕೂಡಿಸಿದ್ದರು. ಸತ್ಯವನ್ನಾಡುವವರು ಅವರೆದುರಿಗೆ ಅಂಜಬೇಕಾಗಿರಲಿಲ್ಲ. ಸುಳ್ಳು ಹೇಳುವವರು ಮಾತ್ರ ಗಡಗಡ ನಡುಗುತ್ತಿದ್ದರು. ಅವರ ಗೌಡಿಕೆಯ ಅವಧಿಯಲ್ಲಿ ಆ ಊರಿನಲ್ಲಿ ಒಂದು ಕಳವೂ ಆಗಿರಲಿಲ್ಲ, ಒಂದು ಮಾರಾ ಮಾರಿಯೂ ಆಗಿರಲಿಲ್ಲ. ಅಂಥ ದರ್ಪ, ಅಂಥ ವರ್ಚಸ್ಸು, ಅಂಥ ವ್ಯವಸ್ಥೆ ಅವರದು. ಅವರೇನು ಹೆಚ್ಚು ಓದಿದವರಲ್ಲ. ಗೌಡಿಕೆಯ ಕೆಲಸಗಳಿಗೆ ಅವಶ್ಯ

ವಿರುವಷ್ಟು ಓದುಬರೆಹ ಕಲಿತುಕೊಂಡಿದ್ದರಷ್ಟೆ. ಕಾಯದೆ ಕಾನೂನುಗಳ ಸಾಮಾನ್ಯ ಜ್ಞಾನವೂ ಇತ್ತು. ಜಿಲ್ಲೆಯಲ್ಲಿ ಯಾವ ಸಾರ್ವಜನಿಕ ಸಾಮಾಜಿಕ ಕಾರ್ಯ ನಡೆದರೂ ದಾನಿಗಳ ಯಾದಿಯಲ್ಲಿ ಈ ಗೌಡರ ಹೆಸರು ಇದ್ದೇ ಇರುತ್ತಿತ್ತು. ಅಂತೆಯೆ ಅವರಿಗೆ ಸುತ್ತಲಿನ ಸೀಮೆಯಲ್ಲೆಲ್ಲ ವಿಶೇಷವಾದ ಮರ್ಯಾದೆಯಿತ್ತು. ಪೋಲೀಸ್ ಸಬ್ ಇನ್ಸ್‌ಪೆಕ್ಟರರ ಜತೆಯಲ್ಲಿ ಕುರ್ಚಿಯ ಮೇಲೆ ಸರಿಜೋಡಿಯಾಗಿ ಕೂಡ್ರುವ ಯೋಗ್ಯತೆಯುಳ್ಳ ಗೌಡರು ಅವರೊಬ್ಬರೇ ಆಗಿದ್ದರು. ತಮ್ಮಂಥವರ ಹೊಟ್ಟೆಯಿಂದ ಇಂಥ ಮಗ ಹುಟ್ಟಿದನಲ್ಲಾ ಎಂದು ಅವರಿಗೆ ಕಳವಳವಾಯಿತು.

"ನನ್ನ ಮರ್ಯಾದೆ ಕಳೀಲಿಕ್ಕೆ ಹುಟ್ಟಿ ಬಂದೀಯಾ! ಆ ಸಿಂಪಿಗನ ಮಗಳನ್ನು ಯಾಕೆ ಕಾಡಿಸಿದಿ?" ಎಂದು ಮಗನನ್ನು ತರಾಟಿಗೆ ತೆಗೆದುಕೊಂಡರು ಗೌಡರು.

ಸೋಮನಗೌಡ ತನ್ನ ತಪ್ಪನ್ನೊಪ್ಪಿಕೊಂಡು ಮತ್ತೆ ಹಾಗೆ ಮಾಡುವುದಿಲ್ಲ ವೆಂದು ಹೇಳಿಕೊಂಡಿದ್ದರೆ ಗೌಡರು ಶಾಂತರಾಗಬಹುದಾಗಿತ್ತು. ಆದರೆ ಅವನು,

"ಆ ಸಿಂಪಿಗ ಯಾರು, ಅವನ ಮಗಳು ಯಾರು ಅನ್ನೂದೇ ಗೊತ್ತಿಲ್ಲಪ್ಪಾ ನನಗೆ," ಎಂದು ಹೇಳಿದ. ಅಪರಾಧವನ್ನು ಒಪ್ಪಿಕೊಂಡರೆ ತಂದೆ ತನ್ನನ್ನು ಭಯಂಕರವಾಗಿ ಹೊಡೆಯಬಹುದೆಂಬ ಭೀತಿ ಅವನದು.

ಅವರಿಂದ ಹೊಡೆತ ಬೀಳುವುದೇನೂ ತಪ್ಪಲಿಲ್ಲ. ಮೂಲೆಯಲ್ಲಿದ್ದ ದಪ್ಪನೆಯ ಬಡಿಗೆಯನ್ನೆತ್ತಿ ಮಗನನ್ನು ವಿಪರೀತವಾಗಿ ಥಳಿಸಿ ತಮಗೇ ಆಯಾಸವಾದಾಗ ಬಡಿಗೆಯನ್ನು ಬಿಸುಟು ತುಟಿ ಬಿಗಿದು ಕುಳಿತರು ಗೌಡರು. ಗಂಡನ ಕೋಪದ ಬಗೆಯನ್ನು ಚೆನ್ನಾಗಿ ಬಲ್ಲ ಹೆಂಡತಿಯೂ ಮಗನನ್ನು ಬಿಡಿಸಿ ಕೊಳ್ಳಲು ಬರದೆ ಒಳಗೇ ಕುಳಿತಿದ್ದಳು. ದನದಂತೆ ಏಟು ತಿಂದು ಸೋಮನ ಗೌಡ ಒಳಗೆ ಹೋಗಿ ಬಿದ್ದುಕೊಂಡ.

ಅಂದು ಮನೆಯಲ್ಲಿ ಯಾರೂ ಊಟ ಮಾಡಲಿಲ್ಲ.

ನರಳುತ್ತ ಬಿದ್ದುಕೊಂಡಿದ್ದ ಹಾಗೇ ಸೋಮನಗೌಡ ಮೆಲುಕು ಹಾಕಿದ. ಆ ಸಿಂಪಿಗ ಬಂದು ತನ್ನ ತಂದೆಗೆ ದೂರು ಕೊಟ್ಟಿರಬೇಕು. ಅದರಿಂದಲೇ ಅಷ್ಟವೇ ತಾನು ಹೊಡೆತ ತಿಂದುದು. ಆ ಸಿಂಪಿಗನನ್ನು ಹಾಗೇ ಬಿಡಬಾರದು. ಫಜೀತಿ ಮಾಡಬೇಕು, ಅವನ ಫಜೀತಿ....ತನ್ನ ವಿರುದ್ಧ ದೂರು ಕೊಡುವುದೆಂದ

ರೇನು ಹುಡುಗಾಟವೆಂದು ತಿಳಿದಿದ್ದಾನೆಯೇ ಮಗ! ಅವನಿಗೆ ಚೆನ್ನಾಗಿ ಬುದ್ಧಿ ಕಲಿಸಬೇಕು....

ಮರುದಿನ ಹೊರಗಡೆ ಅಲೆಯಲು ಹೋಗಿದ್ದಾಗ ಪೋಲೀಗ್ಯಾಂಗಿನಲ್ಲಿ ಆ ವಿಷಯ ಚರ್ಚೆಗೆ ಬಂತು. ಸಿಂಪಿಗನ ಸಂಸಾರ ನಡೆಯುವುದು ಅದೊಂದು ಯಂತ್ರದಿಂದ. ಆ ಯಂತ್ರವನ್ನೇ ನಾಶಗೊಳಿಸಿಬಿಟ್ಟರೆ ಅವನೂ ಅವನ ಮಕ್ಕಳೂ ಮಣ್ಣು ತಿನ್ನಬೇಕಾಗುವುದು. ಸಿಂಪಿಗನ ಮನೆಯ ಹೊರಗಿನ ಕಟ್ಟೆಯ ಮೇಲೇ ಆ ಯಂತ್ರವಿರುತ್ತಿತ್ತು. ರಾತ್ರೆ ಅದನ್ನು ಹೊತ್ತುಕೊಂಡೊಯ್ದು ಕೆರೆಗೆ ಬಿಸುಟುವುದೆಂದು ನಿರ್ಣಯಿಸಿ ಪೋಲೀಗ್ಯಾಂಗು ಚದುರಿತು. ಸೋಮನಗೌಡನೂ ಅಂದು ಸಂಜೆಯಾಗುವುದರೊಳಗಾಗಿ ಮನೆಗೆ ಬಂದು ಪುಸ್ತಕವೊಂದನ್ನು ಹಿಡಿದು ಕೊಂಡು ಅದನ್ನೋದುವ ನಟನೆ ಮಾಡುತ್ತ ಕುಳಿತುಕೊಂಡ. ಮಗನು ಹಾದಿಗೆ ಬಂದನೆಂದು ತಂದೆಗೂ ಸಮಾಧಾನವಾಯಿತು. ಅಂದು ರಾತ್ರೆ ತಂದೆ ಮಗ ಇಬ್ಬರೂ ಕೂಡಿಯೆ ಕುಳಿತು ಊಟ ಮಾಡಿದರು.

ಬೆಳಗಾಗುತ್ತಲೂ ಸಿಂಪಿಗ ಬಂದು ತನ್ನ ಯಂತ್ರ ಕಳವಾಗಿ ಹೋಗಿದೆ ಯೆಂದು ಗೌಡರಲ್ಲಿ ದೂರು ಕೊಟ್ಟ.

"ಇನ್ನು ಹ್ಯಾಂಗ ಮಾಡೂದು ಗೌಡರೇ? ಅದೊಂದು ಯಂತ್ರದಿಂದ ನಮ್ಮ ಹೊಟ್ಟೆ ನಡೆದದ್ದು. ಇನ್ನುಮ್ಯಾಲ ನಾವೆಲ್ಲಾ ಉಪವಾಸ ಸಾಯುವ ಪ್ರಸಂಗ ಬರುತ್ತೈತಿ."

"ನೀನೇನೂ ಚಿಂತೆ ಮಾಡಬ್ಯಾಡ. ಅದನ್ನು ಹುಡುಕಿ ಕೊಡ್ತೀನಿ." ಎಂದು ಸಮಾಧಾನ ಹೇಳಿ ಅವನಿಂದ ಫಿರ್ಯಾದು ಬರೆಯಿಸಿಕೊಂಡರು ಗೌಡರು. ಸೋಮನಗೌಡನೇ ಈ ಕೆಲಸ ಮಾಡಿರಬಹುದೇ ಎಂದೂ ಅವರಿ ಗೆಸ್ನಿಸದಿರಲಿಲ್ಲ. ಆದರೆ ಮುನ್ನಾದಿನ ಸಾಯಂಕಾಲ ಮತ್ತು ರಾತ್ರೆ ಅವನು ಮನೆಯಲ್ಲೇ ಇದ್ದನಲ್ಲ!

ಗೌಡರು ಮಗನನ್ನು ಕರೆದು ಸಿಂಪಿಗನ ಯಂತ್ರದ ಪ್ರಸ್ತಾಪವೆತ್ತಿದರು. ಅವನು ತನಗೇನೂ ತಿಳಿಯದೆಂದು ಹೇಳಿ ಜಾರಿಕೊಂಡ.

ಫಿರ್ಯಾದು ನಮ್ಮ ಕಡೆಗೆ ಬಂದಿತು.

ನಾವು ಆ ಹಳ್ಳಿಗೆ ಬಂದು ಸಿಂಪಿಗನನ್ನು ಕರೆಯಿಸಿದೆವು. ವಿಚಾರಣೆ ಗಾರಂಭವಾಯಿತು.

“ ಊರಲ್ಲಿ ನಿನ್ನನ್ನು ಕಂಡರಾಗದನರು ಯಾರ್‍ಯಾರಿದ್ದಾರೆ ?”

“ ನನಗೇನೂ ಗೊತ್ತಿಲ್ಲರೀ. ಯಾರಿಗೂ ಎಂದೂ ಏನೂ ಕೆಟ್ಟದು ಮಾಡಿದವನಲ್ಲ ನಾ. ದುಡಿದು ಹೊಟ್ಟೆ ತುಂಬಿಸಿಕೊಳ್ಳುವವರು ನಮಗೆ ಎರಡನೆಯವರ ಉಸಾಬರಿಯಾತಕ್ಕ ಬೇಕ್ರೀ ?” ಎಂದು ಅವನು ಹೇಳಿದ.

ಅವನ ಮನೆಯವರನ್ನೆಲ್ಲ ಕರೆಯಿಸಿ ವಿಚಾರಿಸಿದೆವು. ಗೌರಿಯನ್ನು ಕಂಡಾಗ ನನಗೆ ಏನೋ ಅನುಮಾನ ಬಂತು. ಬಡವರ ಮಗಳು. ಬೆಳೆದ ಹುಡುಗಿ. ಅವಿವಾಹಿತ. ಅವಳನ್ನು ಕಂಡು ಮರುಳಾದವರಾರೋ ಅವರಿಗೆ ತೊಂದರೆ ಕೊಡುವ ಉದ್ದೇಶದಿಂದ ಇಂಥ ಕಿಡಿಗೇಡಿತನದ ಕೃತ್ಯಕ್ಕೆ ಕೈ ಹಾಕಿರಬಹುದೆಂದು ನನಗೆನ್ನಿಸಿತು.

ಅವಳೊಬ್ಬಳನ್ನೇ ಒಂದು ಕಡೆ ಕೂಡಿಸಿಕೊಂಡು ಭೇದಕ ಪ್ರಶ್ನೆ ಹಾಕಿದೆವು.

“ ನಿನಗೆ ಯಾವ ಗಂಡುಹುಡುಗರ ಗುರುತಿದೆ ಗೌರವ್ವಾ ?”

“ ಯಾರದೂ ಇಲ್ಲರೀ.”

“ ಯಾರಾದರೂ ನಿಮಗೆ ತ್ರಾಸ ಕೊಡುವವರಿದ್ದಾರೇನು ?”

ಹೇಳಬೇಕೋ ಬೇಡವೋ ಎಂದು ಅನುಮಾನಿಸುತ್ತಾ ಅವಳು ಸೋಮನ ಗೌಡನ ವಿಷಯ ಹೇಳಿದಳು.

“ ನನಗ ತ್ರಾಸ ಕೊಡುವವ ಅಂದರೆ ಅವನೊಬ್ಬನೇ.”

“ ಹಾಗಾದರೆ ಅವನೇ ನಿಮ್ಮ ಯಂತ್ರ ಮಾಯಮಾಡಿರಬಹುದಲ್ಲ ?”

“ ಅದೇನು ಅವನ ಕೆಲಸ ಇರಲಿಕ್ಕಿಲ್ಲರೀ. ಅವರಿಗೇನು ಕಡಿಮೆ ಯಾಗ್ಯೆತಿ ?”

ನಮಗೆ ಎಲ್ಲವೂ ಹೊಳೆದಂತಾಯಿತು. ಸೋಮನಗೌಡನ ಗೆಳೆಯರ ಹೆಸರುಗಳನ್ನು ಅವಳಿಂದಲೇ ತಿಳಿದುಕೊಂಡು ಅವಳನ್ನು ಕಳಿಸಿಕೊಟ್ಟೆವು. ಅದು ಆ ಪೋಲಿಗ್ಯಾಂಗಿನ ಕೃತ್ಯವೆಂಬುದು ಖಚಿತವಾದಂತಾಯಿತು. ಸೋಮನ ಗೌಡನನ್ನೇ ಮೊದಲು ಹಿಡಿಯಬಹುದಾಗಿತ್ತು. ಆದರೆ ಅವನು ಮರ್ಯಾದಸ್ಥರಾದ ಗೌಡರ ಮಗನಾದುದರಿಂದ ಹಾಗೆ ಮಾಡಲು ನಾವು ಇಷ್ಟಪಡಲಿಲ್ಲ. ತಮ್ಮ ಮಗನು ಕಳವು ಮಾಡಿಸಿದ ಸಂಗತಿ ಹೊರಬಿದ್ದರೆ ಅವರು ಸಂತಾಪದಿಂದ

ಪ್ರಾಣ ತ್ಯಜಿಸಿಯಾರೆಂದು ನಮಗೆ ಚಿಂತೆ. ರಾತ್ರಿಯಾಗುತ್ತಲೂ ಸೋಮನು ಗೌಡನ ಗೆಳೆಯರನ್ನು ಹಿಡಿದು ಚಾವಡಿಗೆ ತಂದೆವು.

"ನಿಮ್ಮ ಮಗನನ್ನೂ ಕರೆಯಿಸಿರಿ ಗೌಡರೇ. ಮುಂದೆ ಅವನೇ ಗೌಡನಾಗುವವ. ನಾವು ವಿಚಾರಣೆ ಮಾಡುವಾಗ ಅವನು ನೋಡಿಕೊಂಡಿದ್ದರೆ ಮುಂದೆ ಉಪಯೋಗವಾಗುತ್ತದೆ," ಎಂದು ನಾನು ಹೇಳುತ್ತಲೂ ಅವರು ಸೋಮನಗೌಡನನ್ನು ಕರೆಯಿಸಿದರು. ಅವನು ಅಂಜುತ್ತಂಜುತ್ತಾ ಬಂದು ಕುಳಿತುಕೊಂಡ. ಚಾವಡಿಯಲ್ಲಿ ತನ್ನ ಗೆಳೆಯರನ್ನು ಕಾಣುತ್ತಲೂ ಅವನ ಮುಖದ ಮೇಲೆ ಆತಂಕದ ಛಾಯೆ ಕವಿಯದಿರಲಿಲ್ಲ.

ಅವನ ಗೆಳೆಯರಲ್ಲೊಬ್ಬೊಬ್ಬನನ್ನೇ ಕರೆದು ಯಂತ್ರದ ವಿಷಯ ಕೇಳಿದುದಾಯಿತು. ತಮಗೇನೂ ಗೊತ್ತಿಲ್ಲವೆಂದೇ ಎಲ್ಲರೂ ಹೇಳಿದರು. ಅವರಲ್ಲೆಲ್ಲ ಅಂಜುಬುರುಕನಂತೆ ಕಾಣುತ್ತಿದ್ದವನೊಬ್ಬನನ್ನು ಹಿಡಿದು ಅವನ ಮೇಲೆ 'ಭರಮಪ್ಪ'ನನ್ನು ಪ್ರಯೋಗಿಸುವ ಸಿದ್ಧತೆಗೆ ತೊಡಗಿದೆವು. ಗೌಡರು ಕಣ್ಣು ಮುಚ್ಚಿಕೊಂಡು ಕುಳಿತರು. ಸೋಮನಗೌಡನ ಮುಖವೂ ಕಪ್ಪಗಾಯಿತು.

'ಭರಮಪ್ಪ'ನ ಮೊದಲನೆಯ ಪ್ರಸಾದದೊಡನೆಯೆ ಆ ಹುಡುಗ ಚಾವಡಿಯ ಹಂಚು ಹಾರಿಹೋಗುವಂತೆ ಚೀತ್ಕಾರ ಮಾಡಿದ. ನಾಲ್ಕು ಏಟು ಬೀಳುವುದರೊಳಗಾಗಿ ಅವನ ಅವತಾರ ಸಮಾಪ್ತಿಯಾಗಿತ್ತು.

"ನನ್ನ ಬಿಟ್ಟುಬಿಡಿರಿ. ಬಡೀಬ್ಯಾಡ್ರಿ," ಎಂದು ಅವನು ಗೋಗರೆಯ ತೊಡಗಿದ.

"ಹೇಳುತೀಯೇನು?"

"ಹೂಂ. ಹೇಳುತೀನಿ. ಎಲ್ಲಾ ಹೇಳುತೀನಿ."

ಅವನನ್ನು ಮೇಲಕ್ಕೆತ್ತಿ ಬಿಟ್ಟುಬಿಟ್ಟೆವು.

"ಹೂಂ. ಹೇಳು ಈಗ."

ಅವನು ಮತ್ತೆ ಹಿಂದೆ ಮುಂದೆ ನೋಡತೊಡಗಿದ.

"ಯಾಕೆ? ಯಾರದಾದರೂ ಅಂಜಿಕೆಯೋ ಏನು?"

ಆ ಹುಡುಗ ಗೌಡರ ಮುಖವನ್ನೇ ದಿಟ್ಟಿಸುತ್ತಿದ್ದ.

"ಏನಿದ್ದರೂ ಚಿಂತಿಲ್ಲ. ಹೇಳಿಬಿಡು," ಎಂದರು ಗೌಡರು.

ಆಗ ಆ ಹುಡುಗನಿಗೆ ಧೈರ್ಯ ಬಂತು. ಸೋಮನಗೌಡನ ಹೇಳಿಕೆಯ

ಮೇರೆಗೆ ತಾವು ಆ ಯಂತ್ರವನ್ನೊಯ್ದು ಕೆರೆಯಲ್ಲಿ ಚೆಲ್ಲಿದ ಸಂಗತಿಯನ್ನೆಲ್ಲ ಸಾದ್ಯಂತವಾಗಿ ವಿವರಿಸಿ ಹೇಳಿದ. ನಾವು ಸೋಮನಗೌಡನ ಕಡೆಗೆ ದೃಷ್ಟಿ ಹೊರಳಿಸಿದೆವು. ಮಲೇರಿಯಾ ಚಳಿ ಬಂದಂತೆ ನಡುಗುತ್ತಿದ್ದನಾತ. ಗೌಡರಿಗಾದರೋ ಆಕಾಶವೇ ಕಳಚಿ ಬಿದ್ದಂತಾಗಿತ್ತು ತಲೆಯ ಮೇಲೆ.

ಪ್ರೋಲಿಗ್ಯಾಂಗಿನ ಇತರ ಹುಡುಗರೂ ಆ ಸಂಗತಿ ಸತ್ಯವೆಂದು ಒಪ್ಪಿಕೊಂಡರು.

"ಏನಂತೀ ಸೋಮನಗೌಡಾ ?"

ಅವನೇನೆನ್ನಬೇಕು ? ಬಾಯಿ ತೆರೆಯಲು ಯತ್ನಿಸಿದನಾತ. ಧ್ವನಿಯೇ ಹೊರಡಲಿಲ್ಲ.

"ಹೇಳು. ನಿನ್ನ ಅಂಬೋಣ ಏನು ?"

"ನನಗೇನೂ ಗೊ....ಗೊ....ಗೊತ್ತಿಲ್ಲ. ಇವರು ನ....ನ....ನ್ನ ಮ್ಯಾಲ ಸು....ಸು....ಸುಳ್ಳ ಹೇಳ್ತಾರ...." ಎಂದು ತೊದಲಿದ ಸೋಮನಗೌಡ.

"ಅವರ್‍ಯಾಕೆ ಸುಳ್ಳುಹೇಳಬೇಕು ? ಒಳ್ಳೇ ಮಾತಿಗೆ ತಪ್ಪು ಒಪ್ಪಿಕೊಳ್ಳೀಯೋ, ಇಲ್ಲಾ, ನಿಮಗೂ ಭರಮಪ್ಪನ ಪೂಜಾಮಾಡಬೇಕೋ ?" ಎನ್ನುತ್ತಾ ನಾನು ಅವನ ಧೋತರ ಬಿಚ್ಚ ತೊಡಗಿದಾಗ ಸೋಮನ ಗೌಡ ತನ್ನ ಅಪರಾಧವನ್ನೊಪ್ಪಿ ಕೊಂಡು ತಂದೆಯ ಕಾಲು ಹಿಡಿದು ಕೊಂಡ. ಅವರು ಅವನನ್ನು ಝಾಡಿಸಿ ಒದ್ದರು.

ಅಂತೂ ಕಳವು ಬಯಲಿಗೆ ಬಂದಿತು. ಈ ಪ್ರಕರಣದಲ್ಲಿ ನಿಜವಾಗಿ ಕಳವಿನ ಉದ್ದೇಶವಿರಲಿಲ್ಲ. ಸಿಂಪಿಗನಿಗೆ ನಷ್ಟ ಮಾಡುವ ಉದ್ದೇಶವಿತ್ತು. ಗೌಡರು ಮಾತನಾಡುವ ಸ್ಥಿತಿಯಲ್ಲಿರಲಿಲ್ಲ. ಆ ರಾತ್ರಿ ಎಲ್ಲರೂ ಅಲ್ಲೇ ಮಲಗಿಕೊಳ್ಳುವಂತೆ ವಿಧಿಸಿದೆವು. ಚಾವಡಿಯ ಹೊರಗಡೆ ಓಲೇಕಾರರು ಕಾವಲು ನಿಂತರು. ತಮ್ಮ ಮಗನನ್ನು ನಾವು ಬಂಧಿಸಿಕೊಂಡೊಯ್ಯುವುದು ಖಂಡಿತವೆಂದೇ ಗೌಡರು ತಿಳಿದುಕೊಂಡಿದ್ದರು. ಅವನ ಬಂಧನದೊಡನೆ ಅವರ ಸಮಸ್ತ ಮಾನಮರ್‍ಯಾದೆ ಹೋದಹಾಗೇ ಆಗುತ್ತಿತ್ತು.

ಮನೆಗೆ ಹೋಗಿ ಎರಡು ಸಾವಿರ ರೂಪಾಯಿ ತೆಗೆದುಕೊಂಡು ಬಂದು ಫೌಜದಾರನ ಕೈಗೆ ಹಾಕಿದರು. ಗೌಡರು ಮಗನನ್ನು ಬಿಟ್ಟುಬಿಡ ಬೇಕೆಂದು

ಅವರೇನೂ ಕೇಳಿಕೊಳ್ಳಲಿಲ್ಲ. ನಾವೂ ಆ ಮಾತು ತೆಗೆಯಲಿಲ್ಲ. ಎರಡು ಸಾವಿರ ರೂಪಾಯಿಗಳೇ ಎಲ್ಲ ಮಾತುಗಳನ್ನು ಮುಗಿಸಿಬಿಟ್ಟಿದ್ದುವು!

ಸಿಂಪಿಗನಿಗೂ ಗೌಡರು ಮೂರು ನೂರು ರೂಪಾಯಿ ಕೊಟ್ಟರು.

ಬೆಳಗಾಗುತ್ತಲೂ ಕೆರೆಯಲ್ಲಿ ಯಂತ್ರ ಹುಡುಕಿಸುವ ನಾಟಕ ನಡಸಲಾಯಿತು. ಮೊಖದ್ದಮೆ ನಡೆದಾಗ ಕೋರ್ಟಿನಲ್ಲಿ ಅದನ್ನು ಹಾಜರುಪಡಿಸುವಂತೆ ತಿಳಿಸಿ ಯಂತ್ರವನ್ನು ಸಿಂಪಿಗನ ವಶಕ್ಕೆ ಕೊಟ್ಟೆವು.

ಗೌಡರಿಂದ ದೊರೆತ ಮುನ್ನೂರು ರೂಪಾಯಿಗಳಲ್ಲಿ ಗೌರಿಯ ಮದುವೆ ಮಾಡಿ ಮುಗಿಸಿದುದಲ್ಲದೆ ಒಂದೆರಡು ಆಡುಗಳನ್ನೂ (ಮೇಕೆ) ಅವನು ಕೊಂಡುಕೊಂಡ. ಅವನ ಮಕ್ಕಳು ಸ್ವಲ್ಪ ಹಾಲು ಕಾಣುವಂತಾಯಿತು.

ಕಳವಾದ ಮಾಲು ಸಿಕ್ಕಿದರೂ ಆರೋಪಿಗಳ ಪತ್ತೆಯಾಗಲಿಲ್ಲವೆಂದು ನಾವು ವರದಿ ಮಾಡಿದೆವು.

ಒಂದೆರಡು ತಿಂಗಳುಗಳವರೆಗೆ ಗೌಡರು ಮನೆಬಿಟ್ಟು ಹೊರಗೇ ಬರಲಿಲ್ಲವಂತೆ. ಸೋಮನಗೌಡನೂ ಅಂದಿನಿಂದ ಸಭ್ಯನಾದನಂತೆ. ಅವನ ಗೆಳೆಯರೂ ಅವನ ಹತ್ತಿರ ಸೇರಲು ಹೆದರತೊಡಗಿದರು. ಅಂತೂ ಆದುದೆಲ್ಲವೂ ಒಳಿತಿಗಾಗೇ ಎಂದು ಸಮಾಧಾನವಾಯಿತು ನಮಗೂ.

ಗೌಡರಿಂದ ಬಂದ ಎರಡು ಸಾವಿರ ರೂಪಾಯಿಗಳ ಪೈಕಿ ಎಂಟು ನೂರನ್ನು ಸಾಹೇಬರ ಬಿಡಾರದ ಖರ್ಚಿನ ಬಾಬ್ತು ನನಗೆ ಕೊಟ್ಟರು ಫೌಜದಾರರು. ಇನ್ನುಳಿದ ಹನ್ನೆರಡುನೂರು ರೂಪಾಯಿಗಳಲ್ಲಿ ಎರಡುನೂರನ್ನು ಮಾತ್ರ ನನಗೆ ಕೊಟ್ಟು ಒಂದು ಸಾವಿರವನ್ನು ತಮಗಾಗಿ ಇಟ್ಟುಕೊಂಡರು.

" ಅದೂ ನನ್ನ ಹತ್ತರವೇ ಇರಲಿ ರಾವ್‌ಸಾಹೇಬರೆ," ಎಂದು ನಾನು ಹೇಳಿದೆ. ಅವರಿಗೆ ಆ ಮಾತಿನ ಅರ್ಥವಾಯಿತು.

" ಹಿಂದಿನ ಹಾಗೆ ಈ ಸಾರಿ ಮಾಡುವದಿಲ್ಲ ಶಿವಣ್ಣಾ."

ನಾನು ಅಲ್ಲಿ ಕುಳಿತಿದ್ದಾಗಲೇ ಹೆಂಡತಿಯನ್ನು ಕರೆದು ಆ ಸಾವಿರ ರೂಪಾಯಿಗಳನ್ನು ಅವಳ ಕೈಗೆ ಕೊಟ್ಟರು.

ಫೌಜದಾರರ ಕೈಗೆ ಹಣ ಬಂದಾಗಲೆಲ್ಲಾ ಅಡುಗೆಯ ಚೆನ್ನನಿಗೆ ಮದವೆಯ ಚಾಪಲ್ಯ ಕೆರಳುತ್ತಿತ್ತು. ತನ್ನ ಮದುವೆಯನ್ನಾದರೂ ಮುಗಿಸ

ಬೇಕು, ಸಂಬಳದ ಹಣವನ್ನಾದರೂ ಕೊಡಬೇಕು – ಎಂದು ಅವನು ಅಂದು ಹಟ ಹಿಡಿದು ಕುಳಿತಿದ್ದ.

ಫೌಜದಾರರು ನಗುತ್ತಾ,

“ ಈ ಮಗನಿಗೆ ಹತ್ತು ರೂಪಾಯಿ ಸಂಬಳವಿಲ್ಲ. ಮದುವೆಯಾಗುತಾನಂತೆ!” ಎಂದು ಹಾಸ್ಯ ಮಾಡಿದರು.

ಆದರೆ ಚೆನ್ನ ತನ್ನ ಹಟ ಬಿಡಲಿಲ್ಲ. ತನ್ನ ಸಂಬಳದ ಹಣವನ್ನೆಲ್ಲ ಕೊಟ್ಟುಬಿಡುವಂತೆ ಫೌಜದಾರರನ್ನು ಪೀಡಿಸತೊಡಗಿದ.

ನಾನು ಕೊಠಡಿಗೆ ಹೊರಡುತ್ತಲೂ ಅವನೂ ನನ್ನನ್ನು ಹಿಂಬಾಲಿಸಿ ಕೊಂಡು ಬಂದ.

“ ನೀವಾದರೂ ನನ್ನ ರೂಪಾಯಿ ಕೊಡಿಸಿ ಪುಣ್ಯಾ ಕಟ್ಟಿಕೊಳ್ಳಿರಪ್ಪ.”

“ ನಿನಗೆಷ್ಟು ರೂಪಾಯಿ ಬೇಕು ಚೆನ್ನಾ ?”

“ ಸಂಬಳದ ಮುನ್ನೂರು ರೂಪಾಯಿ ಕೊಡುವದಿದೆ ಫೌಜದಾರರು.”

“ ಅವನ್ನು ತೆಗೆದುಕೊಂಡೇನು ಮಾಡುವವ ?”

“ ಇವರ ಚಾಕರಿ ಸಾಕಾಗಿ ಹೋಯಿತು ನನಗೆ. ಗೊಬ್ಬೂರಿಗೆ ಹೋಗಿ ಖಾನಾವಳಿ ತೆಗೆದು ಸ್ವತಂತ್ರವಾಗಿ ದುಡಿದು ಇರುತ್ತೇನಿ.

“ ಇನ್ನೊಂದು ತಿಂಗಳು ತಡೆಯಪ್ಪಾ. ನಿನ್ನ ರೂಪಾಯಿ ನಿನಗೆ ಕೊಡಿಸುತ್ತೇನಿ.”

೩

# ಉಜ್ಜಪ್ಪನವರ ವ್ಯಾಪಾರ

ನನ್ನ ಕೈಗೆ ಬಂದಿದ್ದ ಸಾವಿರ ರೂಪಾಯಿಗಳನ್ನು ಟ್ರಂಕಿನಲ್ಲಿ ಹಾಕಿ ಕೊಳೆಯಿಸಲಿಷ್ಟಪಡದೆ ಉಜ್ಜಪ್ಪನವರ ಕೈಗೆ ಕೊಟ್ಟುಬಿಟ್ಟೆ. ವ್ಯಾಪಾರಿಗಳಾಗಿದ್ದ ಅವರಿಗೆ ಆಗ ಹಣದ ಅಗತ್ಯ ವಿಶೇಷವಾಗಿತ್ತು. ನಾನು ಕೊಟ್ಟ ಸಾವಿರ ರೂಪಾಯಿಗಳನ್ನು ಗೊಬ್ಬೂರಿನ ಅಂಗಡಿಯವರಿಗೆ ಕೊಟ್ಟು ಬಂಡಿ ತುಂಬಾ ಮಾಲು ಖರೀದಿ ಮಾಡಿ ತಂದು ಅಂಗಡಿಯಲ್ಲಿ ತುಂಬಿದ್ದರು.

ಕಾಲವಾಡದ ಸುತ್ತಮುತ್ತಲೂ ಐದಾರು ಮೈಲುಗಳ ಅಂತರವಲ್ಲಿ ಸುಮಾರು ಇಪ್ಪತ್ತೈದು ಹಳ್ಳಿಗಳಿದ್ದುವು. ಪ್ರತಿಯೊಂದು ಹಳ್ಳಿಯಲ್ಲೂ ಸರಾಸರಿ ನಾಲ್ಕು ಕಿರಾಣಿ ಅಂಗಡಿಗಳು, ಐದು ಚಹದಂಗಡಿಗಳು. ಈ ಎಲ್ಲಾ ಅಂಗಡಿಗಳವರೂ ತಮಗೆ ಅವಶ್ಯವಿರುವ ಸಾಮಾನುಗಳನ್ನು ಉಜ್ಜಪ್ಪನವರಲ್ಲೇ ಕೊಳ್ಳತೊಡಗಿದರು. ಹಾಗೆ ಉಜ್ಜಪ್ಪನವರ ವ್ಯಾಪಾರ ದಿನದಿಂದ ದಿನಕ್ಕೆ ಬೆಳೆಯತೊಡಗಿತು. ಅದಕ್ಕೆ ಸರಿಯಾಗಿ ಕೈತುಂಬಾ ಲಾಭವೂ ಬರತೊಡಗಿತು.

ಉಜ್ಜಪ್ಪನವರು ಅಷ್ಟಕ್ಕೇ ತೃಪ್ತರಾಗಲಿಲ್ಲ. ಹಳ್ಳಿಗರಿಂದ ಕುಸುಬೆ, ಹತ್ತಿ, ಮೆಣಸಿನಕಾಯಿ ಮೊದಲಾದುವುಗಳನ್ನು ಕೊಂಡುಕೊಂಡು ಚಕ್ಕಡಿಗಳಲ್ಲಿ ಗೊಬ್ಬೂರಿಗೆ ಸಾಗಿಸಿ ಅವರಿಂದಲೂ ಲಾಭ ದೊರಕಿಸತೊಡಗಿದರು. ಗೊಬ್ಬೂರಿಗೆ ಹೋಗಿ ದಲ್ಲಾಳಿಗಳ ಹತ್ತಿರ ಹಣಕ್ಕಾಗಿ ಬಾಯಿ ಬಾಯಿ ಬಿಡುವ ಪ್ರಸಂಗ ತಪ್ಪಿತೆಂದು ಹಳ್ಳಿಗರಿಗೂ ಸಮಾಧಾನ.

ಗೊಬ್ಬೂರಿನಲ್ಲಿನದೊಂದು ದೊಡ್ಡ ಎಣ್ಣೆಯ ಗಿರಣಿಯ ಒಡೆಯರೊಡನೆ ನನಗೆ ವಿಶೇಷ ಪರಿಚಯವಿತ್ತು. ಒಂದು ಬಾರಿ ನಾನು ಗೊಬ್ಬೂರಿಗೆ ಹೋಗಿ

ದ್ದಾಗ ಅವರನ್ನು ಕಂಡು ಉಜ್ಜಪ್ಪನವರ ವಿಷಯ ತಿಳಿಸಿ ಅವರಿಗೆ ಸಹಾಯ ಮಾಡಬೇಕೆಂದು ಕೇಳಿಕೊಂಡೆ. ಉಜ್ಜಪ್ಪನವರು ಎಷ್ಟು ಮಾಲು ತಂದರೂ ಒಡನೆಯೆ ಅದನ್ನು ತೂಕ ಮಾಡಿಸಿ ಎಲ್ಲಾ ಹಣವನ್ನೂ ಕೊಟ್ಟು ಬಿಡಲು ಗಿರಣಿಯವರು ಒಪ್ಪಿಕೊಂಡರು. ಹಾಗೆ ಮಾಡುವುದರಿಂದ ಅವರಿಗೂ ಲಾಭವೇ ಇತ್ತು. ಗಿರಣಿಗೆ ಬೇಕಾದ ಕಚ್ಚಾ ಮಾಲನ್ನು ಅವರಿಗೆ ಒದಗಿಸುತ್ತಿದ್ದವರು ದಲ್ಲಾಳಿಗಳು. ಈ ದಲ್ಲಾಳಿಗಳ ವ್ಯವಹಾರ ವಿಚಿತ್ರವಾದುದು. ಮಾರುವ ರೈತನಿಂದ ರೂಪಾಯಿಗೊಂದಾಣೆ, ಕೊಳ್ಳುವ ವ್ಯಾಪಾರಿಯಿಂದಲೂ ರೂಪಾಯಿಗೊಂದಾಣೆ ದಲ್ಲಾಳಿ ವಸೂಲು ಮಾಡುವುದಲ್ಲದೆ ಆ ಫಂಡು, ಈ ಫಂಡು, ಧರ್ಮಾದಾಯ, ಕಾಟಕಸರು, ಕೂಲಿ ಹಮಾಲಿ ಎಂದು ಏನೇನನ್ನೋ ಹೇಳಿ ಹಣ ಹೊಡೆಯುವುದು ದಲ್ಲಾಳಿಗಳ ನಿತ್ಯ ಕಾಯಕ. ತೂಕ-ಅಳತೆಗಳಲ್ಲಾಗುವ ಮೋಸ ಬೇರೆಯೇ. ರೈತರು ತಮ್ಮ ಮಾಲನ್ನು ನೇರವಾಗಿ ಗಿರಣಿಯವರ ಹತ್ತಿರ ಒಯ್ದರೆ ದಲ್ಲಾಳಿಗಳ ಮೋಸ ತಪ್ಪುತ್ತದೆ. ಆದರೆ, ಅವರು ಹಾಗೆ ಮಾಡದಿರಲು ಅನೇಕ ಕಾರಣಗಳಿರುತ್ತವೆ. ರೈತರಿಗೆ ಹಣದ ಅಡಚಣೆಯಿದ್ದಾಗ ಈ ದಲ್ಲಾಳಿಗಳನ್ನೇ ಅವರು ಮೊರೆ ಹೋಗುವುದುಂಟು. ಆ ಸಾಲ ತೀರಿಸಬೇಕಲ್ಲವೆ? ಸರಿ. ರೈತರ ಮಾಲು ದಲ್ಲಾಳಿಗಳ ಅಂಗಡಿಗಳಿಗೇ ಬಂದು ಬೀಳುತ್ತದೆ. ಸರಿಯಾದ ಧಾರಣೆ ಬಂದಾಗ ಅದನ್ನು ಮಾರಾಟ ಮಾಡಲು ತಿಳಿಸಿ ರೈತರು ಹೊರಟುಹೋಗುತ್ತಾರೆ. ದಲ್ಲಾಳಿಗಳಲ್ಲಿ ಬಿದ್ದ ಮಾಲಿನಲ್ಲಿ ಸ್ವಲ್ಪ ಭಾಗ ಇಲಿಗಳ ಹೊಟ್ಟೆಗೆ ಹೋದರೆ ಇನ್ನು ಸ್ವಲ್ಪ ಭಾಗ ಕೂಲಿಕಾರರ ಮಡಿಲಿಗೆ ಸೇರುತ್ತದೆ. ರೈತರಿಗೆ ದುಡ್ಡು ಅಗತ್ಯವೆನ್ನಿಸಿದಾಗ ಯಾವ ಧಾರಣೆಗಾದರೂ ಮಾಲು ಮಾರಿಬಿಡಬಹುದೆಂದು ದಲ್ಲಾಳಿಗಳಿಗೆ ತಿಳಿಸುತ್ತಾರೆ. ದಲ್ಲಾಳಿ ಯಾವ ಧಾರಣೆಗೆ ಮಾರಿದನೆಂಬುದು ಅಶಿಕ್ಷಿತರಾದ ರೈತರಿಗೆ ಗೊತ್ತಾಗುವುದಾದರೂ ಹೇಗೆ?

ದಲ್ಲಾಳಿಗಳು ರೈತರನ್ನು ಮೋಸಗೊಳಿಸುವುದು ಹೀಗೆ. ಮಾಲು ನೇರವಾಗಿ ಗಿರಣಿಗೆ ಹೋದರೆ ಈ ನಷ್ಟ ತಪ್ಪಿ ಹೋಗುತ್ತದೆ.

ಉಜ್ಜಪ್ಪನವರ ಮಾಲು ಗಿರಣಿಗೇ ಹೋಗುವಂತೆ ವ್ಯವಸ್ಥೆಮಾಡಿ ನಾನು ಕಾಲುವಾಡಕ್ಕೆ ಹಿಂದಿರುಗಿ ಬಂದೆ.

"ಎಣ್ಣೆಕಾಳಿನ ಧಾರಣೆ ಏರುತ್ತಾ ಇದೆ ಉಜ್ಜಪ್ಪನವರೆ. ಸಿಕ್ಕಿದಷ್ಟು

ಖರೀದಿ ಮಾಡಿ ನೆಟ್ಟಗೆ ಗಿರಣಿಗೊಯ್ದು ಮಾರಿಬಿಡಿರಿ. ರೈತರ ಚಕ್ಕಡಿ ಗಳಲ್ಲೇ ಮಾಲನ್ನು ಗೊಬ್ಬೂರಿಗೊಯ್ಯ ಬಹುದು."

ಅದೇ ದಿನವೆ ಉಜ್ಜಪ್ಪನವರು ಕಾಲಪಾಡದಲ್ಲಿದ್ದ ಕುಸುಬೆಯನ್ನೆಲ್ಲಾ ಖರೀದಿ ಮಾಡಿದರು. ಸುಮಾರು ಹತ್ತು ಸಾವಿರ ರೂಪಾಯಿ ಬೆಲೆಯ ಮಾಲು. ರೈತರಿಗೆ ಅಷ್ಟಿಷ್ಟು ಮುಂಗಡ ಹಣ ಕೊಟ್ಟು ಆ ರಾತ್ರಿಯೇ ಮಾಲನ್ನು ಗೊಬ್ಬೂರಿಗೆ ಸಾಗಿಸಲಾಯಿತು. ಅದೊಂದು ದಿನದ ವ್ಯವಹಾರದಲ್ಲೇ ಉಜ್ಜಪ್ಪ ನವರಿಗೆ ಎರಡು ಸಾವಿರ ರೂಪಾಯಿ ಲಾಭ ಬಂತು.

ಅವರು ಸುತ್ತ ಮುತ್ತಲಿನ ಹಳ್ಳಿಗಳಿಗೆ ಹೋಗಿ ಮಾಲು ಸಂಗ್ರಹಿಸಿ ಗಿರಣಿಗೆ ಕಳಿಸತೊಡಗಿದರು. ಒಂದು ತಿಂಗಳಿನೊಳಗಾಗಿ ಸುಮಾರು ಹತ್ತು ಸಾವಿರದವರೆಗೂ ಲಾಭವಾಯಿತು. ಅವರು ಮುಟ್ಟಿದ್ದೆಲ್ಲವೂ ಚಿನ್ನವಾಗುತ್ತಿತ್ತು.

....ಯಾವುದೋ ಒಂದು ಹಬ್ಬದ ದಿನ ಬಂತು. ಉಜ್ಜಪ್ಪನವರು ಅಂದು ತಮ್ಮ ಮನೆಯಲ್ಲಿ ಭೋಜನಕೂಟವನ್ನೇರ್ಪಡಿಸಲು ನಿರ್ಧರಿಸಿ ಫೌಜ ದಾರರಿಗೂ ಗೌಡರಿಗೂ ಆಮಂತ್ರಣವಿತ್ತರು. ನನಗೂ ಆಮಂತ್ರಣವಿದ್ದಿ ತೆಂದು ಹೇಳಬೇಕಾಗಿಲ್ಲವಷ್ಟೆ. ಊರಲ್ಲಿನ ಒಬ್ಬಿಬ್ಬರು ದೊಡ್ಡ ರೈತರನ್ನೂ ಆಮಂತ್ರಿಸಿದ್ದರು. ಅಪ್ಪಣ್ಣನಿಗೂ ಆಹ್ವಾನವಿತ್ತು. ಅಡುಗೆಯಲ್ಲಿ ನೆರವಾಗಲು ಚೆನ್ನನನ್ನು ಕಳಿಸಿಕೊಟ್ಟೆವು. ಫೌಜದಾರರ ಹೆಂಡತಿಯೂ ಅಲ್ಲಿಯೇ ಬಂದರು. ಬಾಸುಂದಿ – ಪೂರಿ ಊಟ. ಆ ಮಾತು ಈ ಮಾತು ಆಡುತ್ತಾ ಎಲ್ಲರೂ ಹೊಟ್ಟೆ ಬಿರಿಯುವಷ್ಟು ಬಾಸುಂದಿ ಬಿಗಿದೆವು.

"ನಮಗೆ ಚಲೋದಿನ ಬಂದದ್ದು ಶಿವಣ್ಣನವರಿಂದ," ಎಂದು ಉಜ್ಜಪ್ಪ ನವರು ಆರಂಭಿಸುತ್ತಲೂ ನಾನು ಅಷ್ಟಕ್ಕೇ ಅವರನ್ನು ತಡೆದು,

"ಮೊದಲು ಊಟ ಮುಗಿಯಲಿ. ಆಮೇಲೆ ಉಪನ್ಯಾಸ," ಎಂದು ಹೇಳಿದೆ. ಎಲ್ಲರೂ ಗೊಳ್ಳೆಂದು ನಕ್ಕರು.

ಉಜ್ಜಪ್ಪನವರೇನು ಸುಮ್ಮನಾಗಲಿಲ್ಲ.

"ಗೌಡರೂ ನನಗೆ ಬೇಕಾದಷ್ಟು ಸಹಾಯ ಮಾಡಿದಾರೆ. ಫೌಜ ದಾರರೂ ಮಾಡಿದಾರೆ."

"ನಾನೇನ್ರೀ ಮಾಡಿದ್ದು ?" ಎಂದರು ಗೌಡರು.

"ಹೊಲವನ್ನು ನೀವು ಕೊಳ್ಳದಿದ್ದರೆ ನನ್ನ ಮಗಳು ಈಗಲೂ ಇಲ್ಲೇ ಇರಬೇಕಾಗುತ್ತಿತ್ತು."

"ಎಲ್ಲಾ ದೇವರ ದಯೆ. ನಿಮ್ಮ ಹೊಲ ನಿಮಗೇ ಬೇಕಾದರೆ ಹೇಳಿರಿ. ಕೊಟ್ಟುಬಿಡ್ತೀನಿ," ಎಂದರು ಗೌಡರು.

ಉಜ್ಜಪ್ಪನವರೂ ಅದೇ ಯೋಚನೆಯಲ್ಲಿದ್ದ ಹಾಗಿತ್ತು. ಅವರ ಕೈಯಲ್ಲಿ ಆಗ ಹಣವಿತ್ತು. ಗೌಡರಿಗೆ ಹೊಲಗಳ ಕೊರತೆಯೇನೂ ಇರಲಿಲ್ಲ. ತಮ್ಮ ಹೊಲ ತಮ್ಮ ಕೈಗೇ ಬಂದರೊಳ್ಳೆಯದೆಂದು ಉಜ್ಜಪ್ಪನವರಿಗೆನ್ನಿಸುತ್ತಿದ್ದಿರಬೇಕು....

"ಏನೋ ನೀವು ದೊಡ್ಡ ಮನಸು ಮಾಡಿದರೆ...." ಎಂದು ಅವರು ಹೇಳುತ್ತಿದ್ದ ಹಾಗೇ ನಾನು ಅವರ ಬಯಕೆಯನ್ನು ಗುರುತಿಸಿಕೊಂಡು,

"ಬೇಕಾದರೆ ತಗೊಳ್ಳಿರೆಂದು ಗೌಡರೇ ಹೇಳಿಬಿಟ್ಟರಲ್ಲ ಉಜ್ಜಪ್ಪನವರೆ. ಅವರಿಗೂ ಆ ಹೊಲದ ಮೇಲೆ ಆಸೆಯೇನೂ ಇರಲಿಲ್ಲ. ನನ್ನ ಬಲವಂತದಿಂದಾಗಿ ತೆಗೆದುಕೊಂಡರಷ್ಟೆ," ಎಂದು ಹೇಳಿದೆ.

"ನಾನು ಆಗಲೆ ಹೇಳಿದೆನಲ್ಲ. ನಿಮ್ಮ ಹೊಲ ನೀವು ತೆಗೆದುಕೊಳ್ಳಬಹುದು," ಎಂದರು ಗೌಡರು.

"ಒಂದು ಸಾವಿರ ರೂಪಾಯಿ ಹೆಚ್ಚಾಗಿ ತೆಗೆದುಕೊಂಡು ಕೊಟ್ಟು ಬಿಡಬಹುದು!" ಎಂದರು ಫೌಜದಾರರು.

"ಛೆ. ಛೆ. ಹೆಚ್ಚು ಹಣ ಯಾಕೆ?" ಎಂದರು ಗೌಡರು.

"ನೀವು ಮಾಡಿದ ಸಹಾಯ ವ್ಯರ್ಥವಾಗಬಾರದು ಗೌಡರೆ."

ಹಾಗೆ, ಊಟದ ಸಮಯದಲ್ಲೇ ಹೊಲವನ್ನು ತಿರುಗಿಕೊಡುವ ಮಾತು ನಿಶ್ಚಿತವಾಯಿತು. ಮಾರನೆಯ ದಿನವೇ ಹೊಸ ಕಾಗದ ಪತ್ರಗಳಾದುವು. ಹೊಲ ಉಜ್ಜಪ್ಪನವರದಾಯಿತು. ಅದನ್ನು ಮಾಡುತ್ತಿದ್ದ ರೈತನೇ ಹೊಸ ಲಾವಣೀ ಪತ್ರ ಬರೆದು ಕೊಟ್ಟ.

ಈ ವಿಚಾರಗಳನ್ನೆಲ್ಲಾ ತಿಳಿಸಿ ಸುಮಿತ್ರೆಗೆ ಪತ್ರ ಹಾಕಿದೆವು. ಅವಳ ಗಂಡನಿಂದ ದೊರೆತ ಹಣದ ಸಹಾಯದಿಂದಲೇ ಇಷ್ಟೆಲ್ಲಾ ಆದುದೆಂದೂ ತಿಳಿಸಿದೆವು. ಮೂರುದಿನಗಳ ತರುವಾಯ ಅವಳಿಂದ ಉತ್ತರವೂ ಬಂದಿತು.

ಉಜ್ಜಪ್ಪನವರಿಗೆ ಸಂತೋಷ ಉಂಟುಮಾಡುವ ಮತ್ತೊಂದು ಸಮಾಚಾರವಿತ್ತು ಆ ಪತ್ರದಲ್ಲಿ.

ಸುಮಿತ್ರೆ ಗರ್ಭಿಣಿಯಾಗಿದ್ದಳು.

"ದೇವರು ಒಳ್ಳೇ ದಿನ ತಂದ!" ಎಂದು ಆನಂದದಿಂದ ಉದ್ಗಾರ ತೆಗೆದರು ಉಜ್ಜಪ್ಪನವರು.

"ಸುಮಿತ್ರೆ ಗಂಡು ಹಡೆದರೆ ಆ ಮಗುವನ್ನು ದತ್ತು ತೆಗೆದುಕೊಂಡು ಬಿಡೋಣ," ಎಂದಳು ಅವರ ಹೆಂಡತಿ.

"ಅದರಲ್ಲೇನು ಸಂಶಯ! ಅವಳು ಗಂಡೇ ಹಡೆಯುತ್ತಾಳೆ," ಎಂದರು ಉಜ್ಜಪ್ಪ.

ನಾನು ಚೇಷ್ಟೆಗಾಗಿ ಹೇಳಿದೆ:

"ನನ್ನನ್ನೇ ನೀವು ದತ್ತು ತೆಗೆದುಕೊಳ್ಳುವಿರಂತೆ. ಈಗ ನಿಮಗೆ ಮೊಮ್ಮಗನ ಮೇಲೆ ಪ್ರೀತಿ ಹುಟ್ಟಿತು. ಇನ್ನ್ಯಾಕೆ ನಾವು ನಿಮ್ಮ ಮನೆಗೆ ಬರಬೇಕು!"

ಗಂಡ ಹೆಂಡರಿಬ್ಬರೂ ಹೊಟ್ಟೆ ಹಿಡಿದುಕೊಂಡು ನಕ್ಕರು.

೪

## ಬಣವೆ ಸುಟ್ಟುಹೋದ ಪ್ರಕರಣ

"ಈ ಮೂಗರ್ಜಿಯ ಮಜಾ ನೋಡು ಶಿವಣ್ಣಾ," ಎನ್ನುತ್ತಾ ಒಂದು ಅರ್ಜಿಯನ್ನು ನನ್ನ ಕೈಗೆ ಕೊಟ್ಟರು ಈಶ್ವರಪ್ಪನವರು.

ನಿಜವಾಗಿಯೂ ಬಲು ಮೋಜಿನದಾಗಿತ್ತು ಆ ಅರ್ಜಿಯ ವಿಷಯ.

ಹತ್ತಿರದ ಹಳ್ಳಿ ಯೊಂದರಲ್ಲಿ ಒಬ್ಬಳು ಹೆಂಗಸು ಬಸಿರಾಗಿದ್ದಳು, ಅವಳು ವಿಧವೆ, ಅವಳ ಅಳಿಯನೇ ಆ ಬಸಿರಿಗೆ ಕಾರಣನಾಗಿದ್ದ, ಅವಳು ಗರ್ಭಪತನದ ಉಪಾಯ ಯೋಚಿಸುವುದರಲ್ಲಿದ್ದಳು – ಎಂದು ಬರೆಯಲಾಗಿತ್ತು ಆ ಅರ್ಜಿಯಲ್ಲಿ.

ಪೋಲೀಸರಾದ ನಮಗೆ ಇಂಥ ಸಂಗತಿಗಳಿಂದ ಆಶ್ಚರ್ಯವೇನೂ ಉಂಟಾಗುವುದಿಲ್ಲ. ಇಂಥ, ಇದಕ್ಕಿಂತ ವಿಚಿತ್ರವಾದ ಎಷ್ಟೋ ಸಂಗತಿಗಳನ್ನು ನಾವು ಕೇಳಿರುವುದುಂಟು. ನಮಗೆ ಅದೆಲ್ಲವೂ ಒಂದು ಮೋಜು, ಅಷ್ಟೆ. ಇಂಥ ಪ್ರಕರಣಗಳು ನಮ್ಮ ಕಡೆಗೆ ಬಂದಾಗ ಒಂದೈದು ನಿಮಿಷ ನಕ್ಕು. ಅನಂತರ, ಆ ವ್ಯಕ್ತಿಗಳಿಂದ ಹಣ ಸೆಳೆಯುವ ಉಪಾಯಗಳನ್ನು ಕುರಿತು ನಾವು ಯೋಚಿಸುವುದು ವಾಡಿಕೆ. ಎಂಥ ಅಪರಾಧ ನಡೆದರೂ ಚಿಂತೆಯಿಲ್ಲ, ನಮಗೆ ಹಣ ಸಿಕ್ಕಿದರಾಯಿತು !

ಆ ಹಳ್ಳಿಗೆ ಹೋಗಿ ಬಿಡಾರ ಹೂಡಿದುದಾಯಿತು ಆ ಹೆಂಗಸನ್ನು ಬರಮಾಡಿಕೊಂಡು ವಿಚಾರಣೆಗಾರಂಭಿಸಿದೆವು. ತಾನು ಬಸಿರಾದುದು ಶುದ್ಧ ಸುಳ್ಳೆಂದೇ ಅವಳು ಸಾಧಿಸ ತೊಡಗಿದಳು.

"ನಿನ್ನ ಆಟವೆಲ್ಲಾ ನಮ್ಮ ಮುಂದೆ ನಡೆಯುವದಿಲ್ಲ. ತಿಳಿಯಿತೇ?

ದವಾಖಾನೆಗೆ ಕಳಿಸಿ ತಪಾಸು ಮಾಡಿಸ್ತೀವಿ," ಎಂದು ಬೆದರಿಸಿದಾಗ ಅವಳು ತಣ್ಣಗಾಗಿ ಎಲ್ಲವನ್ನೂ ಒಪ್ಪಿಕೊಂಡಳು. ಅವಳ ಮಗಳು ಇನ್ನೂ ಚಿಕ್ಕವಳು. ಕಳೆದ ವರ್ಷವಷ್ಟೇ ಅವಳು ಋತುಮತಿಯಾಗಿದ್ದುದು. ಅವಳ ಅಳಿಯನಿಗೂ ಅವಳಿಗೂ ನಾಲ್ಕಾರು ವರ್ಷಗಳಿಂದಲೂ ಸಂಬಂಧವಿದ್ದಿತು.

"ಏನು ಮಾಡೂದು ರಾವ್‌ಸಾಬರೆ. ಆಗಬಾರದ್ದು ಆಗಿ ಹೊತು," ಎಂದು ಹೇಳುತ್ತಾ ಅವಳು ಕಂಬನಿಗರೆಯತೊಡಗಿದಳು.

"ಹೋಗಲಿ ಬಿಡು. ನೀನು ಬಸಿರು ಇಳಿಸಿಕೊಳ್ಳುವ ಹವ್ಯಾಸಕ್ಕೆ ಹೋಗದಿದ್ದರೆ ನಾನೇನೂ ಮಾಡುವದಿಲ್ಲ."

"ಇಲ್ಲರೀ. ನಾನ್ಯಾಕ ಅಂಥಾ ಕೆಲಸ ಮಾಡೇನು?"

ತಾನು ಗರ್ಭಪತನ ಮಾಡಿಕೊಳ್ಳುವುದಿಲ್ಲವಾಗಿ ಅವಳು ಹೇಳಿಕೆ ಕೊಟ್ಟಳು. ಅವಳ ಪ್ರಿಯಕರ ಅಳಿಯನೂ ಹಾಗೇ ಹೇಳಿಕೆ ಕೊಟ್ಟ. ಅವರಿಬ್ಬರನ್ನೂ ಕಂಡು ಕನಿಕರವೆನ್ನಿಸದಿರಲಿಲ್ಲ. ಅವರೇನು ಸಿರಿವಂತರಲ್ಲ. ಬಹಳ ಬಡವರು. ಅವರಿಗೆ ಮನೆಯ ಭೂಮಿಯೂ ಇರಲಿಲ್ಲ. ಬೇರೆಯವರ ಹೊಲಗಳಲ್ಲಿ ಕೂಲಿನಾಲಿ ಮಾಡಿ ಹೊಟ್ಟೆ ಹೊರೆಯ ಬೇಕಾಗುತ್ತಿತ್ತು. ಪಾಪ! ಅವರು ನಮಗೆ ಹಣ ಕೊಡುವುದೆಲ್ಲಿ ಸಾಧ್ಯ?

ಅವರ ಮೇಲೆ ಲಕ್ಷ್ಯವಿರಿಸಲು ಊರ ಗೌಡನಿಗೆ ಸೂಚನೆಯಿತ್ತು ಮುಂದಿನ ಹಳ್ಳಿಗೆ ಹೊರಡುವ ಸಿದ್ಧತೆಗೆ ತೊಡಗಿದ್ದಾಗಲೇ ಹತ್ತು ಮೈಲು ದೂರದಲ್ಲಿದ್ದ ಹಳ್ಳಿಯೊಂದರಿಂದ ಒಂದು ವರದಿ ಬಂದಿತು. ಅಲ್ಲಿಯ ಬತ್ತಪ ಬಣವೆಗಳಿಗೆ ಯಾರೋ ಬೆಂಕಿಯಿಟ್ಟು ಸುಟ್ಟು ಹಾಕಿದ್ದರು. ೧೦–೧೫ ಸಾವಿರ ದಷ್ಟು ನಷ್ಟವಾಗಿತ್ತು.

ನಾವು ತುಂಬಾ ಉತ್ಸಾಹದಿಂದ ಆ ಹಳ್ಳಿಗೆ ಹೊರಟೆವು. ನಮಗೆ ಹಣ ಸಿಗುವುದು ಇಂಥ ಪ್ರಕರಣಗಳಲ್ಲಿಯೇ!

ಆ ಹಳ್ಳಿಯಲ್ಲಿ–ಎಲ್ಲಾ ಹಳ್ಳಿಗಳಲ್ಲೂ ಇರುವ ಹಾಗೆ–ಎರಡು ಪಕ್ಷಗಳು. ಅವುಗಳಲ್ಲೊಂದು ಪಕ್ಷಕ್ಕೆ ಸೇರಿದ ಇಪ್ಪತ್ತು ಜನರ ಬಣವೆಗಳು ಮಾತ್ರ ಸುಟ್ಟು ಹೋಗಿದ್ದುವು. ಅರ್ಥಾತ್–ಅದು ಇನ್ನೊಂದು ಪಕ್ಷದವರ ಕಿಡಿಗೇಡಿತನವೆಂಬುದು ಸ್ಪಷ್ಟವಾಗೇ ಇತ್ತು. ಆದರೆ, ಅವರನ್ನು ಬಂಧಿಸುವುದು ಅಷ್ಟು ಸುಲಭವಲ್ಲ. ಸಾಕ್ಷಿ ಬೇಕು, ಪುರಾವೆ ಬೇಕು. ಬಣವೆಗಳ ಹತ್ತಿರ ಕಡ್ಡಿ

ಕೊರೆದು ಬೆಂಕಿ ಹೊತ್ತಿಸಿ ಓಡಿ ಹೋಗಿದ್ದ ಆ ಅಪರಾಧಿಗಳನ್ನು ಕಂಡು ಹಿಡಿಯುವ ಬಗೆ ಹೇಗೆ?

ಸುಟ್ಟು ಹೋಗಿದ್ದ ಬಣವೆಗಳ ರೈತರನ್ನೆಲ್ಲ ಕರೆಯಿಸಿಕೊಂಡೆವು. ಅವರಿಂದಲೂ ಹೆಚ್ಚಿನ ವಿಷಯ ತಿಳಿದು ಬರಲಿಲ್ಲ. ತಮ್ಮ ವಿರುದ್ಧ ಪಕ್ಷದವರೇ ಆ ಕೃತ್ಯ ಮಾಡಿರ ಬೇಕೆಂದು ಅವರೆಲ್ಲರೂ ಹೇಳಿದರಾದರೂ ಬೆಂಕಿ ಹೊತ್ತಿಸಿದ ವ್ಯಕ್ತಿಗಳನ್ನು ತಾವು ನೋಡಿಲ್ಲವೆಂದೇ ಹೇಳಿದರು.

ಬಣವೆಗಳ ಬಳಿಯಲ್ಲಿದ್ದ ಕೆಲವು ಮನೆಗಳವರನ್ನು ಕರೆಯಿಸಿ ವಿಚಾರಿಸಿದೆವು.

ಒಬ್ಬ ಹೇಳಿದ:

"ಅವತ್ತು ರಾತ್ರಿ ಸಾ ಹೊರಗಡೆ ಮಲಗಿದ್ದಿನಿ. ಕಾಲು ಸಪ್ಪಳದಿಂದ ಎಚ್ಚರಾಯ್ತು. ಒಬ್ಬ ಮನುಷ್ಯ ಕಂಬಳಿ ಹೊತ್ತುಕೊಂಡು ನಮ್ಮ ಮನೆಯ ಮುಂದೇ ಹಾದು ಬಣವೆಗಳ ಕಡೆಗೆ ಹೋದದ್ದು ಅಷ್ಟು ನೋಡಿದಿನಿ. ಆ ಮ್ಯಾಲ ಸ್ವಲ್ಪ ಹೊತ್ತಿಗೇ ಬೆಂಕಿ ಹತ್ತಿತು."

"ಆ ಮನುಷ್ಯ ಮತ್ತೆ ಊರಲ್ಲಿ ಬಂದನೋ ಇಲ್ಲೋ?"

"ಇಲ್ಲ. ಅವ ಬರಲಿಲ್ಲ. ಬೆಂಕಿ ಹಚ್ಚಿ ಹಾಂಗೇ ಓಡಿ ಹೋಗಿರ ಬೇಕು."

ಅಪರಾಧವನ್ನು ಶೋಧಿಸಲು ನಮಗೊಂದು ಆಧಾರ ಸಿಕ್ಕ ಹಾಗಾಯಿತು. ಆ ಹಳ್ಳಿಯವನೊಬ್ಬ ಬಣವೆಗಳಿಗೆ ಬೆಂಕಿಯಿಟ್ಟು ಬೇರೊಂದು ಊರಿಗೆ ಹೊರಟುಹೋಗಿರಬೇಕು. ಅಥವಾ, ಅವನು ಇಲ್ಲಿಯವನಾಗಿರದೆ ಬೇರೆ ಊರಿನವನೇ ಆಗಿರಬೇಕು. ಇಲ್ಲಿಯ ಜನರು ಅವನಿಗೆ ಹಣ ಕೊಟ್ಟು ಅವನಿಂದ ಆ ಕೆಲಸ ಮಾಡಿಸಿರಬೇಕು.

ಅಪರಾಧವನ್ನು ದಾಖಲು ಮಾಡಿಕೊಂಡು ಹಳ್ಳಿಯಲ್ಲಿ ವಿಚಾರಣೆಗಾರಂಭಿಸಿದೆವು.

ಆ ದಿನ ಬೇರೆ ಊರುಗಳಿಗೆ ಹೋಗಿದ್ದವರಾರು? ಹೋಗಿದ್ದ ಜನರೆಲ್ಲರೂ ಮರಳಿ ಬಂದಿರುವರೋ ಇಲ್ಲವೋ?

ನಮ್ಮ ಪ್ರಶ್ನೆಗಳಿಗೆ ಯಾರಿಂದಲೂ ಸಮರ್ಪಕ ಉತ್ತರ ಸಿಕ್ಕಲಿಲ್ಲ.

ಗೌಡರನ್ನು ಎದುರಿಗೆ ಕೂಡಿಸಿಕೊಂಡು ಹಳ್ಳಿಯಲ್ಲಿನ ಪ್ರತಿಯೊಂದು ಮನೆಯ ಜನರ ಲೆಕ್ಕ ತೆಗೆದುಕೊಂಡೆವು. ಒಟ್ಟಾರೆ ಹತ್ತು ಜನರು ಬೇರೆ

ಬೇರೆ ಊರುಗಳಿಗೆ ಹೋಗಿದ್ದುದು ಕಂಡು ಬಂದಿತು. ಅವರೆಲ್ಲರನ್ನೂ ಅದೇ ದಿನ ಊರಿಗೆ ಕರೆದು ತರಲು ಓಲೇಕಾರರನ್ನೂ ಕಳಿಸಲಾಯಿತು.

ಆ ಹತ್ತು ಜನರ ಮನೆಗಳ ಅಕ್ಕ ಪಕ್ಕದ ಮನೆಗಳವರನ್ನು ಕರೆಯಿಸಿ ಬೇರೂರಿಗೆ ಹೋದವರ ವಿಷಯವಾಗಿ ಪ್ರಶ್ನಿಸಿದೆವು. ಅವರು ಊರಿಗೆ ಹೋಗಿದ್ದ ದಿನ, ಸಮಯ ತಿಳಿದುಕೊಂಡೆವು. ನಾಲ್ಕೈದು ಜನರು ಅಂದಿನ ಸಾಯಂಕಾಲದವರೆಗೂ ಊರಿನಲ್ಲಿದ್ದ ಸಂಗತಿ ತಿಳಿದು ಬಂದಿತು. ಇವರಲ್ಲಿಯೆ ಯಾವನಾದರೊಬ್ಬ ಅಪರಾಧಿಯಾಗಿರಬೇಕೆಂದು ನಾವು ಊಹಿಸಿ, ಅವರ ಮನೆಯವರನ್ನು ಕರೆಯಿಸಿ ಅಡ್ಡತಿಡ್ಡ ಪ್ರಶ್ನೆ ಹಾಕಿ ಅವರ ಹೇಳಿಕೆ ಬರೆದು ಕೊಂಡೆವು.

ಅಂತೂ, ಮೂರು ಜನರ ಬಗೆಗೆ ನಮಗೆ ಬಲವಾದ ಅನುಮಾನವುಂಟಾಯಿತು. ಅವರು ಬರುವವರೆಗೆ ವಿಚಾರಣೆ ಸ್ಥಗಿತವಾಯಿತು.

ಮರುದಿನ ಅವರು ಮೂವರೂ ಬಂದರು. ಅವರನ್ನು ಮನೆಗೆ ಬಿಡದೆ, ಚಾವಡಿಯಲ್ಲೇ ಕೂಡಿಹಾಕಿ ಅವರ ಹೇಳಿಕೆಗಳನ್ನು ಬರೆದುಕೊಳ್ಳಲಾಯಿತು. ಅವರ ಮನೆಯವರ ಹೇಳಿಕೆಗಳಿಗೂ ಇವರ ಹೇಳಿಕೆಗಳಿಗೂ ವ್ಯತ್ಯಾಸ ಕಂಡು ಬರುತ್ತಿರಲಿಲ್ಲ.

ತಾವು ಇಂಥಿಂಥ ಊರುಗಳಿಗೆ ಹೋಗಿದ್ದುದಾಗಿ ಅವರು ಹೇಳಿದ್ದರಲ್ಲ; ಆ ಊರುಗಳಿಗೆ ಹೋಗಿ, ಅವರ ಹೇಳಿಕೆ ಸಟೆಯೋ ದಿಟವೋ ಎಂಬುದನ್ನು ಪರೀಕ್ಷಿಸುವುದೊಂದು ಉಳಿಯಿತು.

ಫೌಜದಾರರು ಒಂದು ಊರಿಗೂ, ನಾನು ಒಂದು ಊರಿಗೂ, ಅಪ್ಪಣ ಒಂದು ಊರಿಗೂ ಹೋಗುವುದೆಂದು ಗೊತ್ತಾಯಿತು.

ಕಂಬಳಿಯ ಮುಸುಕು ಹಾಕಿಕೊಂಡು ಹೋದ ವ್ಯಕ್ತಿ ಯಾರೆಂಬುದು ಗೊತ್ತಾಗಬೇಕಷ್ಟೆ? ಆ ಮೂವರೂ ಹಳ್ಳಿಗೆ ಹಿಂದಿರುಗಿದಾಗ ಯಾರ ಹತ್ತಿರವೂ ಕಂಬಳಿಯಿರಲಿಲ್ಲ. ಅರ್ಥಾತ್ – ಅದನ್ನು ಅವರು ಬಿಟ್ಟು ಬಂದಿರಬೇಕು. ಅದು ಸಿಕ್ಕಿದರೆ ಜಪ್ತಿ ಮಾಡಿ ತರಬೇಕೆಂದು ಸೂಚನೆಯಾಯಿತು.

ಸಂಶಯಿತ ವ್ಯಕ್ತಿಗಳನ್ನು ಗೌಡ – ಓಲೀಕಾರರ ಕಾವಲಿನಲ್ಲಿರಿಸಿ ನಾವು ಹೊರಟೆವು. ನಾನು ನಾಲ್ಕು ಮೈಲು ನಡೆದು ಒಬ್ಬ ಸಂಶಯಿತ ತಿಳಿಸಿದ್ದ ಊರಿಗೆ ಹೋಗಿ ಅವನು ಹೇಳಿದ್ದ ಮನೆ ಕಂಡು ಹಿಡಿದು, ಆ ಮನೆಯವರನ್ನೆಲ್ಲ

ಚಾವಡಿಗೆ ಕರೆಯಿಸಿ, ಅವನ ಬಗೆಗೆ ವಿಚಾರಿಸಿದೆ. ಆ ದಿನ ಮಧ್ಯರಾತ್ರಿಯ ಸಮಯಕ್ಕೆ ಅವನು ತಮ್ಮ ಮನೆಗೆ ಬಂದಿದ್ದನೆಂದೂ ಆ ಊರಿನ ಸಾಹುಕಾರನೊಬ್ಬನ ಹತ್ತಿರ ಸಾಲ ಕೇಳುವುದಕ್ಕೆಂದು ಅವನು ಅಲ್ಲಿಗೆ ಬಂದಿದ್ದನೆಂದೂ ಅವರು ಹೇಳಿದರು. ನಾನು ಆ ಸಾಹುಕಾರನನ್ನು ಕರೆಯಿಸಿದೆ. ಆ ಮನುಷ್ಯ ತನ್ನ ಹತ್ತಿರ ಬಂದಿರಲೇ ಇಲ್ಲವೆಂದು ಅವನು ಹೇಳಿದ.

ಬೆಂಕಿ ಹಚ್ಚಿದ ಆಸಾಮಿ ಅವನೇ ಎನ್ನುವುದು ಖಚಿತವಾಯಿತು. ಆ ಮನೆಯಲ್ಲಿ ಅವನ ಕಂಬಳಿಯೂ ದೊರೆಯಿತು. ಅದನ್ನು ಪಂಚರ ಸಮಕ್ಷಮದಲ್ಲಿ ಜಪ್ತಿ ಮಾಡಿಕೊಂಡು ನಮ್ಮ ಬಿಡಾರದ ಹಳ್ಳಿಗೆ ಮರಳಿದೆ. ಅಷ್ಟರಲ್ಲಿ ಫೌಜದಾರರೂ ಅಪ್ಪಣ್ಣನೂ ಬಂದಿದ್ದರು.

ಕಂಬಳಿಯವನ ಅಕ್ಕಪಕ್ಕದ ಮನೆಗಳವರಿಗೆ ಆ ಕಂಬಳಿ ತೋರಿಸಿ ಅದು ಅವನದೆಂದು ಖಚಿತಪಡಿಸಿಕೊಂಡೆವು. ಅವನೇ ಅಪರಾಧಿಯೆಂಬುದು ಯಾರಿಗಾದರೂ ಹೊಳೆಯುವಂತಿದ್ದಿತು. ಆದರೆ ಅವನೇ ಬೆಂಕಿಯಿಟ್ಟನೆಂದು ಸಿದ್ಧಗೊಳಿಸಲು ಸಾಕ್ಷಿಗಳಿರಲಿಲ್ಲ. ಕಂಬಳಿ ಸುತ್ತಿಕೊಂಡವನೊಬ್ಬನನ್ನು ರಾತ್ರಿ ನೋಡಿದುದಾಗಿ ಹೇಳಿದ ರೈತನನ್ನು ಕರೆಯಿಸಿ ಸಂಶಯಿತನನ್ನು ತೋರಿಸಿದೆವು. ತನ್ನ ದೃಷ್ಟಿಗೆ ಬಿದ್ದ ಆಸಾಮಿಯಾತನೇ ಎಂದು ಆ ರೈತನೂ ಹೇಳಲಿಲ್ಲ.

ಕಂಬಳಿಯವನಿಗೆ ಪ್ರಶ್ನೆ ಹಾಕಿದೆವು. ಅವನದು ಒಂದೇ ಉತ್ತರ: ತಾನೇನೂ ಮಾಡಿಲ್ಲ, ತನಗೇನೂ ಗೊತ್ತಿಲ್ಲ. ಒಳ್ಳೆಯ ಮಾತಿಗೆ ಅವನು ಹೇಳುವುದಿಲ್ಲವೆಂಬುದು ಖಾತ್ರಿಯಾಗುತ್ತಲೂ ಬೇರೆ ಉಪಾಯವಿಲ್ಲದೆ 'ಭರಮಪ್ಪ'ನ ಪ್ರಸಾದ ಕೊಡುವುದೆಂದು ಗೊತ್ತಾಯಿತು.

ರಾತ್ರಿಯಾಗುತ್ತಲೂ ಚಾವಡಿಯಲ್ಲಿ ಆತನನ್ನು ಕಟ್ಟಿ, 'ಭರಮಪ್ಪ'ನನ್ನು ಪ್ರಯೋಗಿಸತೊಡಗಿದೆವು. ಅವನು ಬಹಳ ಗಟ್ಟಿಗನೆಂದೇ ಹೇಳಬೇಕು. ನಾಲ್ಕು ಏಟು ಬಿದ್ದರಾಯಿತು, ಎಂಥವರಾದರೂ ಬಾಯಿ ತೆರೆಯುತ್ತಾರೆ. ಇವನಾದರೋ – ಹತ್ತು ಪೆಟ್ಟು ಹಾಕಿದರೂ ಹೂಂ ಅನ್ನದೆ ಚೂಂ ಅನ್ನದೆ ಬಿದ್ದುಕೊಂಡಿದ್ದ. ಪೆಟ್ಟು ಬಿದ್ದ ಸರತಿಗೊಮ್ಮೆ ಭಯಂಕರವಾಗಿ ಕೂಗಿಕೊಳ್ಳುತ್ತಿದ್ದುದೆಷ್ಟೋ ಅಷ್ಟೆ. ಅವನ ಆಕ್ರೋಶವನ್ನು ಕೇಳಿ ಹಳ್ಳಿಯೆಲ್ಲವೂ ಗಾಬರಿಗೊಂಡಿತ್ತು. ಎಷ್ಟೋ ಹೆಂಗಸರು ಹೆದರಿ ಅಳತೊಡಗಿದ್ದರು. ಅವನನ್ನು

ಹೊಡೆಯಲು ನಮಗೂ ಉತ್ಸಾಹವಿರಲಿಲ್ಲ. ಆದರೆ ಹೇಗಾದರೂ ಮಾಡಿ, ಅವನು ತನ್ನ ಅಪರಾಧವನ್ನೊಪ್ಪಿಕೊಳ್ಳುವಂತೆ ಮಾಡಬೇಕಿದ್ದಿತಲ್ಲ....

ಹೊಡೆದು ಹೊಡೆದು ಅಪ್ಪಣ್ಣನ ಕೈ ಸೋತುಹೋಯಿತು.

ಸ್ವಲ್ಪ ಹೊತ್ತು ನಿಲ್ಲಿಸಿ ಮತ್ತೆ ಆರಂಭಿಸಿದೆವು. ಅವನ ರಕ್ತನಾಳಗಳು ಉಬ್ಬಿ ಬಂದಿದ್ದುವು. ರಕ್ತದ ಚಲನವಲನಕ್ಕೆ ಆತಂಕವಾಗಿತ್ತು. ಚರ್ಮ ಊದಿಕೊಂಡಿತ್ತು. ಹೇಳಿ ಬಿಡಬೇಕೆಂದು ಅವನು ಯೋಚಿಸುತ್ತಿದ್ದಿರಬೇಕು. ಹೇಳಿದರೆ ಜೈಲಿಗೆ ಹೋಗಬೇಕಾಗುತ್ತದಲ್ಲಾ ಎಂದು ಹೆದರಿ, ಮತ್ತೆ ಸುಮ್ಮ ನಾಗುತ್ತಿದ್ದ. ಆದರೆ ಅವನೂ ಮನುಷ್ಯನಲ್ಲವೆ? ಹೊಡೆತ ತಡೆದುಕೊಳ್ಳು ವುದಕ್ಕೂ ಒಂದು ಮಿತಿಯಿಲ್ಲವೆ? ಅಪ್ಪಣ್ಣ ಮತ್ತೆ ಎರಡು ಏಟು ಬಿಡುತ್ತಲೂ ಆತ ಎಲ್ಲವನ್ನೂ ಹೇಳಲು ಒಪ್ಪಿಕೊಂಡ.

ಹೊಡೆಯುವುದನ್ನು ನಿಲ್ಲಿಸಿದ ಅಪ್ಪಣ್ಣ.

"ಹೂಂ. ಹೇಳು," ಎಂದರು ಫೌಜದಾರರು.

"ಜಿಂಕಿ ಹಚ್ಚಿದವ ನಾನೊಬ್ಬನೇ ಅಲ್ಲರೀ ರಾವಸಾಬರೆ."

"ಮತ್ತೆ ಯಾರ‍್ಯಾರು ಹೇಳು."

ನಾಲ್ಕು ಜನರ ಹೆಸರುಗಳನ್ನು ಅವನು ತಿಳಿಸುತ್ತಲೂ ಅವರನ್ನು ಕರೆಯಿಸ ಲಾಯಿತು. ಅವರು ಬರುವವರೆಗೂ ಇವನು ಹಾಗೇ ಬರಿಮೈಯಲ್ಲಿ ನಿಂತು ಕೊಂಡಿದ್ದ. ಅವನ ಕೈಗಳನ್ನು ಮೇಲಿನ ಕಂಬಕ್ಕೆ ಕಟ್ಟಲಾಗಿತ್ತು. ಕೆಳಗಡೆ ಕಾಲುಗಳನ್ನೂ ಕಟ್ಟಲಾಗಿತ್ತು. ಅವನ ಮುಖದ ಮೇಲೆ ಶವದ ಕಳೆ ಮೂಡಿ ಬಂದಿತ್ತು. ಅವನ ಅವಸ್ಥೆಯನ್ನು ಕಂಡು ಆ ನಾಲ್ವರೂ ಅಂಜಿಕೊಂಡಿರಲು ಸಾಕು.

ಅವನ ಕಟ್ಟುಗಳನ್ನು ಬಿಚ್ಚಿದೆವು. ಅವನ ಬಾಯಿಯೊಣಗಿ ದಾಹ ವಾಗಿತ್ತು. ಸ್ವಲ್ಪ ನೀರು ಕೊಟ್ಟೆವು. ಅವನು ಧಡಾರನೆ ಫೌಜದಾರರ ಕಾಲುಗಳ ಮೇಲೆ ಬಿದ್ದು ತನ್ನನ್ನುಳಿಸಬೇಕೆಂದು ಬೇಡಿಕೊಳ್ಳತೊಡಗಿದ.

ಆಗತಾನೆ ಕರೆಯಿಸಿದ ನಾಲ್ವರಲ್ಲೊಬ್ಬನನ್ನು ಕಟ್ಟಿ 'ಭರಮಪ್ಪ'ನ ಪ್ರಸಾದ ಕೊಡತೊಡಗಿದೆವು. ಎರಡು ಏಟುಗಳಿಗೇ ಅವನು ಸುಸ್ತಾಗಿ ಹೋಗಿ "ಸತ್ತೆನಪ್ಪಾ" ಎಂದು ಕಿರಿಚಿಕೊಳ್ಳತೊಡಗಿದ. ಅವನನ್ನು ಬಿಟ್ಟು, ಉಳಿದ

ಮೂವರಿಗೂ ಎರಡೆರಡು ಬಾರಿ 'ಭರಮಪ್ಪ'ನನ್ನು ಮುಟ್ಟಿಸಿದೆವು. ನಾಲ್ಕು ಜನರೂ ಮೆತ್ತಗಾಗಿ, ಎಲ್ಲವನ್ನೂ ಹೇಳಲು ಸಿದ್ಧರಾದರು.

ಈ ನಾಲ್ವರಲ್ಲೊಬ್ಬನಿಗೂ, ಸುಟ್ಟ ಬಣವೆಗಳ ರೈತರಲ್ಲೊಬ್ಬನಿಗೂ ದ್ವೇಷ ಬೆಳೆದು ಬಂದಿತ್ತು. ಇವನ ತಂಗಿಯನ್ನು ಬಣವೆಯವನು ಮಡಗಿ ಕೊಂಡಿದ್ದನಂತೆ. ಅದರ ಸೇಡು ತೀರಿಸಿಕೊಳ್ಳಲೆಂದು ಅವನ ಬಣವೆಯನ್ನು ಸುಟ್ಟುಬಿಡುವ ಯೋಚನೆ ಹೂಡಿದ್ದರು. ಈ ಐದು ಜನ ಸೇರಿ ಮಾಡಿದ 'ಮಸಲತ್ತು' ಅದು. ಕಂಬಳಿಯವನು ಬೆಂಕಿ ಹೊತ್ತಿಸಿ ಊರಿಗೆ ಹೋಗ ಬೇಕೆಂದೂ ಉಳಿದವರು ಅಲ್ಲೇ ಇದ್ದು ಬೆಂಕಿಯನ್ನಾರಿಸಲು ಜನರು ನೆರೆದಾಗ ತಾವೂ ಅವರೊಡನೆ ಕೂಡಿಕೊಂಡು ನೀರು ಉಗ್ಗುವ ನಾಟಕ ಮಾಡುವುದೆಂದೂ ಗೊತ್ತು ಮಾಡಿಕೊಂಡಿದ್ದರು. ಬೆಂಕಿಯಿಟ್ಟವನಿಗೆ ಪ್ರತಿಫಲವೆಂದು ಒಂದು ನೂರು ರೂಪಾಯಿ ಕೊಡುವ ಮಾತಾಗಿತ್ತು. ಅದರಂತೆ ಅಷ್ಟು ಹಣವೂ ಅವನಿಗೆ ಸಂದಾಯವಾಗಿತ್ತು.

ದ್ವೇಷಿಕರಿಬ್ಬರೂ ತಕ್ಕಮಟ್ಟಿಗೆ ಸುಸ್ಥಿತಿಯಲ್ಲಿದ್ದವರೇ. ಸಾಲ ಸೋಲ ಗಳಾವುವೂ ಇರಲಿಲ್ಲ. ಕೈಯಲ್ಲಿ ನಾಲ್ಕು ಕಾಸು ಕೂಡಿಬಿದ್ದಿತ್ತು. ಹಳ್ಳಿಯ ರೈತರ ಹತ್ತಿರ ಹತ್ತುರೂಪಾಯಿ ಇದ್ದರಾಯಿತು, ಅವುಗಳನ್ನು ಕಳೆದುಕೊಳ್ಳು ವವರೆಗೂ ಅವರಿಗೆ ತೃಪ್ತಿಯಿರುವುದಿಲ್ಲ. ಇಂಥ ಅಕೃತ್ಯವೇನಾದರೂ ನಡೆಯಲೇ ಬೇಕು. ಕೈಯಲ್ಲಿದ್ದ ಹಣ ವಕೀಲರಿಗೋ ನ್ಯಾಯಾಲಯಕ್ಕೋ ದಂಡಕ್ಕೋ ಹೋಗಲೇಬೇಕು. ಆಗ ಸಮಾಧಾನ ಅವರಿಗೆ. ಬೆಂಕಿ ಹಚ್ಚಿಸಿದ ಮಹಾಂತನೂ ಅಂಥ ರೈತರಲ್ಲೊಬ್ಬ. ಅವನು ಕಂಬಳಿಯ ಕಲ್ಲನಿಗೆ ಕೊಟ್ಟಿದ್ದ ನೂರು ರೂಪಾಯಿಗಳನ್ನು ಜಪ್ತು ಮಾಡಲಾಯಿತು. ಪಾಪ! ಕಲ್ಲನ ಪಾಡು ನಾಯಿ ಪಾಡು. ಹಣವೂ ಹೋಯಿತು, ಮಾನವೂ ಹೋಯಿತು, ಜೈಲಿಗೆ ಹೋಗಬೇಕಾದ ಪ್ರಸಂಗವೂ ಬಂತು. ಅವನಿಗೆ ತನ್ನ ಹೆಂಡರು ಮಕ್ಕಳ ಚಿಂತೆ. ದುಡ್ಡು ಹೋದರೆ ಹೋಗಲಿ, ಸೆರೆಮನೆಗೆ ಹೋಗುವುದನ್ನು ತಪ್ಪಿಸಿಕೊಳ್ಳ ಬೇಕೆಂದು ಮಹಾಂತನ ಯೋಚನೆ. ಮಹಾಂತನ ಮಾತು ಕೇಳಿ ಈ ಉಪ ದ್ವ್ಯಾಪಕ್ಕೆ ತೊಡಗಿದ್ದು ಮಹಾಮೂರ್ಖತನವಾಯಿತೆಂದು ಉಳಿದ ಮೂವರ ಯೋಚನೆ.

ಮಹಾಂತನ ತಂಗಿಯನ್ನಿಟ್ಟುಕೊಂಡಿದ್ದ ಬಸಪ್ಪನಿಗಾದರೋ – ನಾಲ್ಕು ದುಡ್ಡು ತನ್ನ ಕೈಬಿಟ್ಟರೂ ಚಿಂತೆಯಿಲ್ಲ – ಮಹಾಂತ ಜೈಲಿಗೆ ಹೋಗುವಂತೆ ಮಾಡಬೇಕೆಂಬ ಹಟ. ಅವರವರ ತಿಕ್ಕಾಟದಲ್ಲಿ ನಮಗೆ ಲಾಭವಾಗುವ ಸುವರ್ಣಸಂಧಿ. ತನ್ನನ್ನು ಬಿಟ್ಟುಕೊಟ್ಟರೆ ಸಾವಿರ ರೂಪಾಯಿ ಕೊಡುವುದಾಗಿ ಮಹಾಂತ ಹೇಳಿದ. ಫೌಜದಾರರೂ ಅವನನ್ನು ಬಿಡಲು ಸಿದ್ಧರಿದ್ದರು. ನಾನು ಬೇಡವೆಂದು ಹೇಳಿದೆ. ಇನ್ನುಳಿದ ಮೂವರು ಕೊನೆಯವರೆಗೂ ಸತ್ಯವನ್ನು ಹೇಳಲು ಒಪ್ಪುವುದಾದರೆ ತಲಾ ಒಂದೊಂದು ನೂರು ರೂಪಾಯಿ ಕೊಟ್ಟರೆ ಬಿಟ್ಟು ಬಿಡುವುದಾಗಿ ಹೇಳಿದೆವು. ಅವರು ಸಂತೋಷದಿಂದ ಒಪ್ಪಿಕೊಂಡರು. ಅವರಿಂದ ಹಣ ಬಂದ ತರುವಾಯ ಮ್ಯಾಜಿಸ್ಟ್ರೇಟರ ಬಳಿಗೆ ಅವರನ್ನು ಕಳಿಸಿ ಹೇಳಿಕೆ ಕೊಡಿಸಲಾಯಿತು. ಅವರು ಮೂವರೂ ಮಾಫೀ ಸಾಕ್ಷಿದಾರರಾದರು.

ಮಹಾಂತನಿಂದ ಸಾವಿರ ರೂಪಾಯಿ ತೆಗೆದುಕೊಂಡು ಫೌಜದಾರರು ಅವನನ್ನು ಬಿಡುಗಡೆ ಮಾಡಲಿರುವರೆಂಬ ಸುದ್ದಿ ಬಸಪ್ಪನಿಗೆ ಗೊತ್ತಾಗುತ್ತಲೂ ಅವನೇ ಅಷ್ಟು ಹಣ ಕೊಡಲು ಸಿದ್ಧನಾದ. ಸರಿ. ಅದೊಂದು ಸಾವಿರವೂ ಕೈಗೆ ಬಂತು.

ಮಹಾಂತನನ್ನು ಸೆರೆಮನೆಗೆ ಕಳಿಸುವುದಾದರೆ ತಾನು ನಿಜ ಹೇಳುವುದಾಗಿ ಕಲ್ಲ ಒಪ್ಪಿಕೊಂಡ. ಅವನನ್ನು ಬಂಧಿಸಿ ಮ್ಯಾಜಿಸ್ಟ್ರೇಟರ ಬಳಿಗೆ ಕಳಿಸಲಾಯಿತು. ಒಪ್ಪಿಕೊಂಡ ಮೇರೆಗೆ ನಡೆದ ಸತ್ಯಸಂಗತಿಯನ್ನೆಲ್ಲ ಅವನು ಹೇಳಿದ. ಮಹಾಂತ ಮಾತ್ರ ತನ್ನ ಮೇಲಿನ ಆಪಾದನೆಯನ್ನು ಅಲ್ಲಗಳೆದು ತನ್ನ ದ್ವೇಷಿಗಳು ವೃಥಾ ಆರೋಪ ಹೊರಿಸಿರುವರೆಂದೂ ತಾನು ನಿರಪರಾಧಿಯೆಂದೂ ಹೇಳಿಕೆ ಕೊಟ್ಟ.

ತಪಾಸಣೆಯ ಕೆಲಸವೆಲ್ಲವೂ ಮುಗಿಯಬೇಕಾದರೆ ನಾಲ್ಕು ದಿನ ಹಿಡಿಯಿತು. ನಾವು ಕಾಲವಾಡಕ್ಕೆ ಹಿಂದಿರುಗಿ ಬಂದೆವು. ಆ ಪ್ರಕರಣದಲ್ಲಿ ಕಲ್ಲನಿಗೆ ಶಿಕ್ಷೆಯಾಯಿತು. ಮಹಾಂತ ಹೇಗೋ ಉಳಿದುಕೊಂಡ. ಮೊಕದ್ದಮೆಗಾಗಿ ಎರಡು ಮೂರು ಸಾವಿರ ರೂಪಾಯಿಗಳು ಅವನ ಕೈಬಿಟ್ಟವು. ಅಂದಿನಿಂದ ಆ ಹಳ್ಳಿಯಲ್ಲಿ ಯಾವ ಗದ್ದಲವೂ ನಡೆಯಲಿಲ್ಲ.

೫

# ಹೊಸ ಫೌಜದಾರರು

ಈಶ್ವರಪ್ಪನವರಿಗೆ ಕಾಲವಾಡದಿಂದ ಬೇರೆ ಕಡೆಗೆ ವರ್ಗವಾಗಿ ಅವರು ಹೊರಟು ಹೋದರು. ನಾನು ಮಾತ್ರ ಅಲ್ಲಿಯೇ ಉಳಿದುಕೊಳ್ಳಬೇಕಾಯಿತು.

ಹೊಸದಾಗಿ ಬಂದ ಫೌಜದಾರರೂ ಬಲು ಒಳ್ಳೆಯವರು. ಅವರಿನ್ನೂ ಯುವಕರು. ಮದುವೆಯೂ ಆಗಿರಲಿಲ್ಲ. ಸುಶಿಕ್ಷಿತರಾದುದರಿಂದ ಅವರ ನಡವಳಿಕೆ ಉಚ್ಚತರಗತಿಯದಾಗಿತ್ತು. ಒಂದೆರಡು ದಿನಗಳಲ್ಲಿಯೆ ಅವರಿಗೂ ನನಗೂ ಸ್ನೇಹ ಬೆಳೆದು ಬಂದಿತು. ನನ್ನ ಕೆಲಸವನ್ನು ಅವರೂ ಮೆಚ್ಚಿಕೊಂಡರು. ಅಂಥವರೊಡನೆ ಕೂಡಿ ಕೆಲಸ ಮಾಡುವುದೆಂದರೆ ನನಗೂ ಹುರುಪು.

ಒಂದು ವಾರ ಕಳೆಯುವಷ್ಟರಲ್ಲಿ ಅವರ ಖಾಸಗಿ ಸಂಗತಿಗಳೂ ಕೂಡ ನನಗೆ ತಿಳಿದು ಬಂದುವು. ಇನ್ನು ಆರುತಿಂಗಳ ತರುವಾಯ ಅವರ ಫೌಜದಾರಿಕೆ ಕಾಯಂ ಆಗುತ್ತಲೂ ಅವರ ವಿವಾಹವೂ ಜರಗಲಿದ್ದಿತು.

ಅವರದು ಪ್ರೇಮವಿವಾಹ. ಅವರ ಭಾವೀ ವಧುವೂ ಅವರೂ ಹೈಸ್ಕೂಲಿನಲ್ಲಿ ಸಹಪಾಠಿಗಳಿದ್ದು ಒಂದೇ ವರ್ಷ ಮ್ಯಾಟ್ರಿಕ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದರು. ಶಾಲೆಯ ನಾಟಕಗಳಲ್ಲೂ ಅವರಿಬ್ಬರೂ ನಾಯಕ-ನಾಯಕಿಯರ ಪಾತ್ರ ವಹಿಸುತ್ತಿದ್ದರಂತೆ. ಹಾಗೆ ಬೆಳೆದು ಬಂದು ಸ್ನೇಹ ಪ್ರೇಮದಲ್ಲಿ ಪರಿಣಮಿಸಿತು. ಇನ್ನೇನು, ಮದುವೆಯಾಗುವುದೊಂದು ಉಳಿದಿದ್ದಿತಷ್ಟೆ.

ಫೌಜದಾರರು ಯಾವಾಗಲೂ ತಮ್ಮ ಪ್ರೇಯಸಿಯ ವರ್ಣನೆಯಲ್ಲೇ

ತೊಡಗಿಕೊಂಡಿರುತ್ತಿದ್ದರು. ಅವಳ ಸದ್ಗುಣಗಳನ್ನೆಷ್ಟು ಹೊಗಳಿದರೂ ತೃಪ್ತಿಯಾಗುತ್ತಿರಲಿಲ್ಲ ಅವರಿಗೆ. ನಾಲ್ಕು ದಿನಗಳಿಗೊಮ್ಮೆ ಅವಳಿಂದ ಕಾಗದ ಬರುತ್ತಿತ್ತು. ಅವಳ ಇಂಗ್ಲಿಷ್ ಚೆನ್ನಾಗಿತ್ತು. ಫೌಜದಾರರಿಗೆ ಮಾತ್ರ ಅಷ್ಟು ಚೆನ್ನಾಗಿ ಇಂಗ್ಲಿಷ್ ಬರೆಯಲು ಬರುತ್ತಿರಲಿಲ್ಲ. ನನ್ನ ಇಂಗ್ಲಿಷ್ ಚೆನ್ನಾಗಿದ್ದುದನ್ನು ಗಮನಿಸಿದ ಫೌಜದಾರರು ತಮ್ಮ ಪ್ರೇಯಸಿಗೆ ಪತ್ರ ಬರೆದು ಕೊಡುವ ಕೆಲಸವನ್ನೂ ನನಗೇ ಒಪ್ಪಿಸಿಬಿಟ್ಟರು. ಅವರು ಹೇಳುವುದು, ನಾನು ಬರೆಯುವುದು. ಅದೊಳ್ಳೆಯ ತಮಾಷೆಯ ಸಂಗತಿಯೇ ಆಗಿತ್ತು.

ಹಾಗೆ ಫೌಜದಾರರಿಗೂ ನನಗೂ ಸಲುಗೆ ಬೆಳೆಯಿತು. ಕಚೇರಿಯಲ್ಲಿದ್ದಾಗಲಷ್ಟೇ ಅವರು ಅಧಿಕಾರಿ, ನಾನು ಸಿಪಾಯಿ. ಮಿಕ್ಕ ಕಡೆಗಳಲ್ಲೆಲ್ಲ ನಾವು ಅಂತರಂಗದ ಗೆಳೆಯರು. ನನ್ನ ಗುಟ್ಟುಗಳೆಲ್ಲ ಅವರಿಗೆ ಗೊತ್ತಾಗಿದ್ದುವು. ಅವರ ಗುಟ್ಟುಗಳೆಲ್ಲ ನನಗೆ ಗೊತ್ತಾಗಿದ್ದುವು. ಫೌಜದಾರಿಕೆಯ ಕೆಲಸ ಅವರಿಗಿನ್ನೂ ಹೊಸದಾಗಿತ್ತು. ಕಾಲವಾಡಕ್ಕೆ ಬಂದ ಬಳಿಕವಷ್ಟೇ ಕಚೇರಿಯ ಪೂರ್ಣ ಜವಾಬ್ದಾರಿ ಅವರ ಮೇಲೆ ಬಿದ್ದುದು. ಅದುವರೆಗೂ ಅವರು ಪ್ರೊಬೇಶನರರಾಗಿದ್ದುಕೊಂಡು ಇನ್ನೊಬ್ಬ ಫೌಜದಾರರ ಕೈ ಕೆಳಗೆ ಕೆಲಸ ಮಾಡುತ್ತಿದ್ದರು.

ಅವರಿಗೊಬ್ಬ ಅಡುಗೆಯವನನ್ನು ಗೊತ್ತುಮಾಡಿ ಕೊಡಲಾಯಿತು. ಅವನೇ ನನಗೂ ಅಡುಗೆ ಮಾಡಿಕೊಡತೊಡಗಿದ. ಇಬ್ಬರೂ ಜತೆಯಾಗಿಯೆ ಊಟ ಮಾಡುವುದು, ಜತೆಯಾಗಿಯೇ ಚಹಾ ತೆಗೆದುಕೊಳ್ಳುವುದು. ನಮ್ಮಿಬ್ಬರ ಸಲುಗೆಯನ್ನು ಕಂಡು ಇತರ ಪೋಲೀಸರಿಗೆ ಸ್ವಲ್ಪ ಅಸೂಯೆಯಾಗಿದ್ದಿತೆಂದೇ ಹೇಳಬೇಕು.

ಈ ಮಧ್ಯೆ ನಡೆದ ಒಂದೆರಡು ಅಪರಾಧಗಳ ಪ್ರಕರಣಗಳಲ್ಲಿ ನೂರಾರು ರೂಪಾಯಿ ಸಿಕ್ಕಿದ್ದುವು. ತಮ್ಮ ಪ್ರೇಯಸಿಗೊಂದು ಬಂಗಾರದ ಸರ ಮಾಡಿಸಿ ಕಳಿಸಬೇಕೆಂದು ಫೌಜದಾರರು ಆಶಿಸಿದರು. ನಾನೇ ಗೊಬ್ಬೂರಿಗೆ ಹೋಗಿ ಸರ ಮಾಡಿಸಿ ತಂದುಕೊಟ್ಟೆ.

ನಾನು ಅಲ್ಲಿಂದ ಹೊರಡಬೇಕಾದ ದಿನ ಸಮೀಪಿಸುತ್ತಾ ಬಂದಿದ್ದಿತು. ಫೌಜದಾರರಿಗೆ ಆ ಸಂಗತಿಯೇ ಗೊತ್ತಿರಲಿಲ್ಲ. ನಾನು ಆ ವಿಚಾರ ತಿಳಿಸುತ್ತಲೂ ಅವರು ನೇರವಾಗಿ ಡಿ. ಎಸ್. ಪಿ. ಯವರ ಹತ್ತಿರ ಹೋಗಿ ನನ್ನನ್ನು

ಕಾಲವಾಡದಲ್ಲೇ ಇಡುವಂತೆ ಬಿನ್ನವಿಸಿಕೊಂಡರು. ಡಿ.ಎಸ್.ಪಿ. ಯವರಿಗೂ ನನ್ನ ವಿಷಯ ಚೆನ್ನಾಗಿ ಗೊತ್ತು. ನಾನು ಅಲ್ಲಿಯೇ ಇದ್ದರೊಳ್ಳೆಯದೆಂದು ಬಗೆದು ಅವರು ನನ್ನನ್ನು ಕಾಲವಾಡಕ್ಕೇ ಕಾಯಂ ಆಗಿ ವರ್ಗಮಾಡಿಬಿಟ್ಟರು. ಆ ಸಮಾಚಾರ ತಿಳಿದಾಗ ನನಗೆ ಬಲು ವ್ಯಸನವಾಯಿತು. ಗೊಬ್ಬೂರಿನ ನಮ್ಮ ಹಿರಿಯ ಫೌಜದಾರರು ನಮ್ಮ ಬಗೆಗೆ ಏನು ತಿಳಿದುಕೊಳ್ಳುವರೋ ಎಂದು ದಿಗಿಲಾಯಿತು.

" ಅವರೇನೂ ತಿಳಿದುಕೊಳ್ಳುವದಿಲ್ಲ. ಸುಮ್ಮನಿರಬಾರದೇ?" ಎಂದರು ಕಾಲವಾಡದ ಫೌಜದಾರರು.

" ನನಗಂತೂ ಸಮಾಧಾನವಿಲ್ಲ ಬಿಡಿರಿ."

" ನಾನೇ ಹೇಳಿಕೊಳ್ಳಲೇನು ಅವರಿಗೆ ?"

" ಹಾಗೆ ಮಾಡಿದರೊಳ್ಳೆಯದೇ."

ಸರಿ. ಇಬ್ಬರೂ ಫೌಜದಾರರಿಗೂ ನನ್ನ ಬಗೆಗೆ ಮಾತು ನಡೆಯಿತು. ಗೊಬ್ಬೂರಿನ ದೊಡ್ಡ ಫೌಜದಾರರೆಂದರು :

" ನೀವು ಶಿವಣ್ಣನನ್ನು ಮೆಚ್ಚಿಕೊಂಡಿದ್ದೀರಿ. ಅವನು ನನ್ನ ಶಿಷ್ಯ. ಅವನ ಅಭಿವೃದ್ಧಿಯನ್ನು ಕಂಡರೆ ನನಗೆ ಸಂತೋಷವಲ್ಲವೇನು ? ಆದರೂ ಅವನು ಎಷ್ಟುದಿನ ಅಂತ ಅಲ್ಲೇ ಇರಲಿಕ್ಕಾದೀತು ? ಇಂದಿಲ್ಲಾ ನಾಳೆ ಅವನಿಗೆ ಅಲ್ಲಿಂದ ವರ್ಗವಾಗಲೇಬೇಕಾಗುತ್ತದೆ. ಅವನಿಂದ ನಾಲ್ಕು ಮಂದಿ ಫೌಜದಾರರಿಗೆ ಸಹಾಯ ಸಿಕ್ಕರೆ ಸಾಕು. ಆದರೆ, ಅವನನ್ನು ಸರಿಯಾಗಿ ನೋಡಿಕೊಂಡು, ಅರ್ಥಮಾಡಿಕೊಂಡು ಹೋಗಿರಿ. ಪೋಲೀಸ್ ಖಾತೆಯಲ್ಲಿ ಲಂಚಕ್ಕೇನೂ ಕೊರತೆಯಿಲ್ಲ. ಅಪರಾಧ ಮಾಡಿದವನಿಂದ ಐದು ನೂರು ರೂಪಾಯಿ ತಿಂದು ಅವನನ್ನು ಬಿಡಬಾರದು. ಅಪರಾಧಿಯನ್ನು ಜೈಲಿಗೆಳೆದು ಶಿಕ್ಷೆ ಮಾಡಿಸಬೇಕು. ಫಿರ್ಯಾದಿಯಿಂದ ಐದು ರೂಪಾಯಿ ಸಂತೋಷದಿಂದ ಸಿಕ್ಕಿದೂ ಸಾಕು. ಅದು ದಕ್ಕುತ್ತದೆ. ನನ್ನ ಕೈಯಲ್ಲಿ ಪಳಗಿದ ಶಿವಣ್ಣನದೂ ಅದೇ ರೀತಿ. ನೀವು ಐದು ನೂರು ರೂಪಾಯಿಗಳ ಆಸೆಯಿಂದ ಅಪರಾಧಿಯನ್ನು ಬಿಡಹೋದರೆ ಶಿವಣ್ಣ ಒಪ್ಪಲಿಕ್ಕಿಲ್ಲ. ಆಗ ನಿಮಗೂ ಅವನಿಗೂ ಮತಭೇದವಾಗುವುದು. ನೀವು ಫೌಜದಾರರೆಂದು ಅವನ ಮಾತು ಅಲ್ಲಗಳೆದರೆ ಅವನು ನಿಮ್ಮ ವಿರುದ್ಧವಾಗಬಹುದು. ಆಗ ನೀವು ಅವನ ವಿರುದ್ಧ ರಿಪೋರ್ಟು ವಗೈರೆ

ಮಾಡಿದರೆ ನಡೆಯಲಾರದು. ಅವನು ನೆಟ್ಟಗೆ ಡಿ. ಎಸ್. ಪಿ. ಯವರ ಹತ್ತಿರ ಹೋಗಿ ಸತ್ಯಸಂಗತಿಯನ್ನು ತಿಳಿಸಿಬಿಡಬಹುದು. ಅವನು ತನ್ನ ಸದಸದ್ವಿವೇಕ ಬುದ್ಧಿಯಂತೆ ಕೆಲಸ ಮಾಡುವವ. ಅವನ ಸ್ವಭಾವ ತಿಳಿದುಕೊಂಡು ಹೋಗಿರಿ."

ದೊಡ್ಡ ಫೌಜದಾರರು ಹೇಳಿದುದೆಲ್ಲವನ್ನೂ ಕಾಲವಾಡದ ಫೌಜದಾರರೇ ನನಗೆ ಹೇಳಿ,

"ನಿಮ್ಮ ಬಗ್ಗೆ ಅವರಿಗೆ ಬಹಳ ಪ್ರೀತಿಯಪ್ಪ," ಎಂದರು.

"ಅವರು ನನ್ನನ್ನು ಮೊದಲಿನಿಂದಲೂ ಶಿಷ್ಯನಂತೆ ನೋಡಿಕೊಂಡಿದ್ದಾರೆ. ನನ್ನ ಸ್ವಭಾವವಂತೂ ನಿಮಗೆ ಗೊತ್ತಾಯಿತಲ್ಲ. ಈಗಲೇ ಚೆನ್ನಾಗಿ ವಿಚಾರ ಮಾಡಿರಿ. ನಿಮಗೆ ನಾನು ಬೇಡವಾದರೆ ಈಗಲೇ ಒಂದು ರಿಪೋರ್ಟು ಕಳಿಸಿರಿ. ನಾನು ಹೋಗಿ ವರ್ಗಮಾಡಿಸಿಕೊಳ್ಳುತ್ತೀನಿ," ಎಂದೆ.

"ವರ್ಗದ ಮಾತೇ ಬೇಡ. ನಿಮ್ಮನ್ನು ನಾನು ಚೆನ್ನಾಗಿ ಅರಿತು ಕೊಂಡಿದ್ದೀನಿ. ನಿಮ್ಮ ಸಹಾಯವೀಗ ನನಗೆ ಬೇಕಾಗಿದೆ. ಆರು ತಿಂಗಳು ನಾನು ಚೆನ್ನಾಗಿ ಕೆಲಸ ಮಾಡಿದರೆ ಡಿ. ಎಸ್. ಪಿ. ಯವರು ನನ್ನ ಫೌಜ ದಾರಿಕೆ ಕಾಯಂ ಮಾಡುವವರು. ಅದಾದ ಮೇಲೆ ನನ್ನ ಮದುವೆಯಾಗ ಬೇಕು. ನನ್ನ ಸ್ವಭಾವವೂ ನಿಮಗೆ ತಿಳಿದಿರಬೇಕು. ನಾನೆಂದೂ ಯಾರಿಗೂ ಅನ್ಯಾಯ ಮಾಡುವವನಲ್ಲ."

ನಾನು ಕಾಲವಾಡದಲ್ಲೇ ಕಾಯಂ ಆದ ವಾರ್ತೆ ಊರಿನ ಜನರಿಗೂ ಹರ್ಷವನ್ನುಂಟುಮಾಡಿತು. ಗೌಡರು ಒಂದು ಮೇಜವಾನಿಯನ್ನೇ ಏರ್ಪಡಿಸಿ ಬಿಟ್ಟರು. ಫೌಜದಾರರು ಮಾತ್ರ ಅದರಲ್ಲಿ ಭಾಗವಹಿಸಲು ಒಪ್ಪಲಿಲ್ಲ.

"ನಾವು ಪೋಲೀಸರು. ಖಾಸಗಿಯವರಲ್ಲಿ ಊಟಕ್ಕೆ ಹೋಗುವದು ಚಲೋದಲ್ಲ. ನಮ್ಮ ಗೆಳೆತನದ ದುರುಪಯೋಗ ಪಡೆಯಲು ಯತ್ನಿಸುತ್ತಾರೆ ಜನರು."

ಆ ಅಭಿಪ್ರಾಯವನ್ನು ನಾನು ಒಪ್ಪಲಿಲ್ಲ.

"ನಾವು ಸರಕಾರಿ ನೌಕರರೇನೋ ನಿಜ. ಆದರೆ ನಾವೂ ನಾಗರಿಕರೇ ಅಲ್ಲವೇನು? ನಮಗೆ ಜಡ್ಡಾದರೆ, ನಮ್ಮಲ್ಲಿ ಮದುವೆ ಮುಂಜಿಗಳಾದರೆ, ಯಾರಾದರೂ ಸತ್ತರೆ ಜನರು ಬರಬೇಕಲ್ಲವೇ? ಜನರನ್ನು ಬಿಟ್ಟು ನಾವೇ

ಒಂದು ಜಾತಿಯಾಗಿ ಇರಲು ಬರುತ್ತದೆಯೆ? ನಮ್ಮ ಸರಕಾರವೇ ಇಂಗ್ಲೆಂಡಿನಿಂದ ಬಂದು ನಮ್ಮ ಮದುವೆ ಮುಂಜಿಗಳಲ್ಲಿ ಭಾಗವಹಿಸುವದೇ?"

"ಅದೇನೋ ಸರಿ. ಆದರೂ...."

"ಇವತ್ತು ನಾವು ಗೌಡರಲ್ಲಿ ಊಟಕ್ಕೆ ಹೋದ ಮಾತ್ರಕ್ಕೆ ನಾಳೆ ಅವರೇನಾದರೂ ಅಪರಾಧ ಮಾಡಿದರೆ ಅವರನ್ನು ಬಿಟ್ಟುಬಿಡಬೇಕಾಗುವದೆಂದೇನೂ ಇಲ್ಲವಲ್ಲ. ಗೌಡರೂ ಹಾಗೆ ಹೇಳಲಾರರು. ನಾವೂ ಜನರ ಸಂಗಡ ಬೆರೆತು ಅವರ ಪ್ರೇಮ ವಿಶ್ವಾಸ ಗಳಿಸಿಕೊಂಡರೆ ನಮ್ಮ ಕೆಲಸಗಳೂ ಸುಲಭವಾದಾವು. ಅಧಿಕಾರಿಗಳು ಅಂತ ಜಂಬದಿಂದ ನಾವು ದೂರದೂರ ಇದ್ದು ಬಿಟ್ಟರೆ ಜನರೂ ದೂರದೂರವೇ ಇರುತ್ತಾರೆ. ನಮಗೇನಾದರೂ ಕಠಿಣ ಪ್ರಸಂಗ ಬಂದಾಗ ಯಾರೂ ನಮ್ಮತ್ತ ಸುಳಿಯಲಿಕ್ಕಿಲ್ಲ. ನನ್ನ ವಿಷಯವನ್ನೇ ತೆಗೆದುಕೊಳ್ಳಿರಿ. ನಾನಿಲ್ಲಿಗೆ ಬಂದು ಆರುತಿಂಗಳಾಗುತ್ತಾ ಬಂತು. ಇಲ್ಲಿ ಖಾನಾವಳಿಯಿಲ್ಲ. ಆದರೂ ನಾನು ಊಟಕ್ಕೆ ತೊಂದರೆಪಟ್ಟುಕೊಳ್ಳಬೇಕಾಗಿಲ್ಲ. ನಾನು ಕೈಲಿಂದ ಅಡಿಗೆ ಮಾಡಿಕೊಳ್ಳುವ ಪ್ರಸಂಗವೂ ಬಂದಿಲ್ಲ. ನನಗೆ ವರ್ಗವಾಗುವದೆಂದರೆ ಜನರಿಗೆ ದುಃಖವಾಗುತ್ತದೆ. ಅವರೊಡನೆ ಅಷ್ಟು ಆತ್ಮೀಯತೆಯಿದೆಯೆಂದೇ ಈ ಭಾಗದಲ್ಲಿ ನಡೆದ ಅಪರಾಧಗಳನ್ನೆಲ್ಲಾ ಬಯಲಿಗೆಳೆಯುಲು ಸಾಧ್ಯವಾಗಿದೆ. ಜನರ ಪ್ರೇಮ ಸಹಕಾರವಿಲ್ಲದೆ ಅದು ಸಾಧ್ಯವಾಗುತ್ತಿರಲಿಲ್ಲ."

ಫೌಜದಾರರು ಮತ್ತೆ ವಾದ ಬೆಳೆಸಲಿಲ್ಲ. ಕೋಟು ತೊಟ್ಟುಕೊಂಡು ಊಟಕ್ಕೆದ್ದರು. ಗೌಡರ ಮನೆಯಲ್ಲಿ ಊಟ ನಡೆದಿದ್ದಾಗ ಅವರು ವ್ಯಕ್ತಗೊಳಿಸಿದ ಪ್ರೀತಿ-ವಿಶ್ವಾಸಗಳನ್ನು ಕಂಡು ಫೌಜದಾರರೂ ಮುಗ್ಧರಾದರು.

ಊಟ ಮುಗಿದು ನಾವಿಬ್ಬರೂ ಮನೆಗೆ ಮರಳಿದ ತರುವಾಯ ಫೌಜದಾರರೆಂದರು:

"ನೀವು ಹೇಳಿದ್ದೇ ಸರಿ. ಇಲ್ಲಿಯ ಜನರೆಲ್ಲಾ ಬಹಳ ಒಳ್ಳೆಯವರು. ಕಪಟ ಸ್ವಲ್ಪವೂ ಇಲ್ಲ. ಬಹಳ ಸರಳ ಮಂದಿ. ನಮ್ಮ ಕಡೆಯ ಜನರು ಹೀಗಲ್ಲ. ಒಳಗೊಂದು ಇಟ್ಟುಕೊಂಡು ಹೊರಗೊಂದು ಮಾತಾಡಿ ಕೂದಲಿನಿಂದ ಕುತ್ತಿಗೆ ಕೊಯ್ಯುವ ಮಂದಿ ಅವರು."

"ಹಳ್ಳಿಯವರಲ್ಲಿಯ ಸರಳತನ ಪಟ್ಟಣದವರಲ್ಲಿ ಸಿಗಲಾರದು ರಾವ್ ಸಾಹೇಬರೆ."

"ಅದೂ ನಿಜವೇ. ಪಟ್ಟಣಿಗರದೆಲ್ಲಾ ಕೃತ್ರಿಮ ಜೀವನ – ಹಣವೊಂದು ಆದರೆ ಸಾಕು, ಅವರಿಗಿನ್ನೇನೂ ಬೇಡ."

"ಈಗ ಹಳ್ಳಿಗರಿಗೂ ಸ್ವಲ್ಪ ಸ್ವಲ್ಪ ಹಾಗೇ ಆಗಿದೆಯೆನ್ನುವದೂ ನಿಜ, ಪಟ್ಟಣಿಗರ ಸಹವಾಸದ ಪರಿಣಾಮ. ನಾವೂ ಹಾಗೇ ಅಲ್ಲವೇನು?"

"ಈ ಕಾಲವೇ ಹಾಗೆ. ಇಂದಿನ ಜನರೆಲ್ಲಾ ಬಂಗಾರದ ಜಿಂಕೆಯ ಹಿಂದೆ ಓಡುತ್ತಿದ್ದಾರೆ. ಎಲ್ಲರಿಗೂ ಹಣ ಬೇಕು, ಬಂಗಾರ ಬೇಕು, ಆಸ್ತಿ ಬೇಕು. ಅದೆಲ್ಲಾ ಇದ್ದವರಿಗೇ ಮಾನ ಮರ್ಯಾದೆ, ಸುಖ, ಭರವಸೆ. ಸಮಾಜದ ವ್ಯವಸ್ಥೆಯೇ ಹಾಗಿರುವಾಗ ಪೋಲೀಸರಾದ ನಾವೂ ಆ ಪ್ರಕಾರವೇ ನಡೆದುಕೊಳ್ಳುವದು ಸ್ವಾಭಾವಿಕ. ಅಲ್ಲವೇ?"

"ಹೌದು. ಪೋಲೀಸರೆಂದರೂ ಸಮಾಜದ ಅಂಗಗಳೇ ಅಲ್ಲವೇನು? ನಾವೇನು ಆಕಾಶದಿಂದ ಬಂದ ದೇವತೆಗಳಲ್ಲವಲ್ಲ?"

"ನಾವು ದೇವತೆಗಳಂತೆ ಇರಬೇಕಂತ ಜನ ಅಪೇಕ್ಷಿಸುತ್ತಾರೆ."

"ತಾವು ಮಾತ್ರ ದೆವ್ವಗಳಂತಿದ್ದರೂ ನಾವು ಮಾತ್ರ ದೇವತೆಗಳಂತಿರಬೇಕೆಂದು ಬಯಸಿದರೆ ಹುಚ್ಚುತನವಷ್ಟೆ. ಅವರಿದ್ದಂತೇ ನಾವೂ."

೬

# ರೋಶನ್ ಮತ್ತು ಅಮೀನಾರೊಡನೆ

ಕಾಲವಾಡಕ್ಕೇ ನನಗೆ ಕಾಯಂ ಆಗಿ ವರ್ಗವಾದುದರಿಂದ ಗೊಬ್ಬೂರಿನ ಪೋಲೀಸ್‌ವಠಾರದಲ್ಲಿನ ನನ್ನ ಕೋಣೆಯನ್ನು ತೆರವು ಮಾಡಿ ಅಲ್ಲಿನ ಸಾಮಾನುಗಳನ್ನೂ ಇಲ್ಲಿಗೆ ಸಾಗಿಸಬೇಕಾಗಿದ್ದಿತು. ಇಲ್ಲಿಯ ನನ್ನ ಕೊಠಡಿ ತೀರ ಚಿಕ್ಕದು. ಸಾಮಾನುಗಳನ್ನಿಡಲು ಸ್ಥಳಾವಕಾಶವಿರಲಿಲ್ಲ. ಅಂತೆಯೆ ಬೇರೆ ಮನೆ ಹುಡುಕಿಕೊಳ್ಳಲೇಬೇಕಾದ ಪ್ರಸಂಗ ಬಂದಿತು.

ಉಜ್ಜಪ್ಪನವರೆದುರಿಗೆ ಆ ವಿಚಾರ ಹೇಳಿದಾಗ ಅವರು,

" ನೀವು ಬೇರೆ ಕಡೆ ಯಾಕೆ ಇರಬೇಕು? ನಮ್ಮಲ್ಲೇ ಇದ್ದುಬಿಡಿರಲ್ಲ!" ಎಂದರು.

" ಛೆ. ನಿಮುಗ್ಯಾಕೆ ತೊಂದರೆ?"

" ತೊಂದರೆಯೇನು ಬಂತು? ನೀವೂ ನಮ್ಮವರೇ ಅಲ್ಲವೆ? ನಮುಗಾಗಿ ನೀವು ಎಷ್ಟು ತೊಂದರೆಪಟ್ಟುಕೊಂಡಿಲ್ಲ?"

ತಮ್ಮ ಮನೆಯಲ್ಲಿ ಬಿದಿರಿನ ತಡಿಕೆಯೊಂದನ್ನು ಬಿಗಿದು ನನಗಾಗಿ ಪ್ರತ್ಯೇಕ ಭಾಗವೊಂದನ್ನು ಏರ್ಪಡಿಸಿಕೊಟ್ಟರು – ಅವರ ಮನಸ್ಸನ್ನು ನೋಯಿಸಿ ನಾನು ಬೇರೆ ಜಾಗ ನೋಡಿಕೊಳ್ಳುವಂತಿರಲಿಲ್ಲ. ಕಾಲವಾಡದಲ್ಲಿರುವವರೆಗೆ ಅಲ್ಲಿಯೆ ಇದ್ದುಬಿಡುವುದೆಂದು ನಿಶ್ಚಯಿಸಿ ಎರಡು ದಿನಗಳ ಮಟ್ಟಿಗೆ ರಜ ಪಡೆದುಕೊಂಡು ಗೊಬ್ಬೂರಿಗೆ ಬಂದೆ. ದೊಡ್ಡ ಫೌಜದಾರರನ್ನು ಕಂಡು,

" ನಾಲ್ಕು ತಿಂಗಳ ಮಟ್ಟಿಗೆ ಅಂತ ನೀವು ನನ್ನನ್ನು ಕಾಲವಾಡಕ್ಕೆ

ಕಳಿಸಿದ್ದೇ ತಪ್ಪಾಯಿತು ನೋಡಿರಿ. ನಾನು ಅಲ್ಲೇ ಕೊಳೆಯಬೇಕಾಯಿತು," ಎಂದೆ.

"ಸರಕಾರಿ ನೌಕರರ ಸ್ಥಿತಿಯೇ ಹೀಗೆ ಶಿವಣ್ಣಾ. ಎಷ್ಟೋ ಸಾರಿ ವರ್ಗವಾಗಿ ಹೋಗಬೇಕಾಗುತ್ತದೆ. ಆತ್ಮೀಯರನ್ನು ಬಿಟ್ಟು ಹೊರಡುವಾಗ ಸಹಜವಾಗೇ ದುಃಖವಾಗುತ್ತದೆ. ಅದನ್ನೆಲ್ಲಾ ಮರೆತು, ಹೋದ ಕಡೆಗಳಲ್ಲೆಲ್ಲಾ ನಾಲ್ಕು ಮಂದಿಯ ಸಂಗಡ ಚೆನ್ನಾಗಿದ್ದು ಒಳ್ಳೆಯವನೆನಿಸಿಕೊಂಡರೆ ಸಾಕು. ಅದೇ ದೊಡ್ಡದು," ಎಂದರು ಫೌಜದಾರರು.

ನಾನು ಪೋಲೀಸ್ ವಠಾರಕ್ಕೆ ಬಂದು ಮುಟ್ಟಿದಾಗ ಸಾಯಂಕಾಲದ ಸಮಯ. ಕೊಠಡಿಯಲ್ಲಿದ್ದ ಲಾಟಾನಿನಲ್ಲಿ ಎಣ್ಣೆಯಿರಲಿಲ್ಲ. ಕಡ್ಡಿ ಕೊರೆದು ದೀಪವನಂಟಿಸಲು ಯತ್ನಿಸಿದಾಗ ಅಲ್ಲಾವುದ್ದೀನನ ಮಾಯಾದೀಪದಂತೆ ಕುಣಿಯಿತು ಲಾಟಾನು. ಇನ್ನು ಅದಕ್ಕೆ ಎಣ್ಣೆ ಹಾಕಿಸಬೇಕು. ಅಂಗಡಿಯವರೆಗೆ ಹೋಗುವುದಕ್ಕೆ ನನಗೆ ಬೇಜಾರು. ಹಿತ್ತಿಲು ಬಾಗಿಲು ತೆಗೆದು ಜಮಾದಾರರ ಮನೆಗೆ ಹೋಗಿ ಅವರನ್ನು ಕೂಗಿದೆ. ನನ್ನ ಧ್ವನಿಯನ್ನು ಗುರುತಿಸಿ ಅವರು ಸಂಭ್ರಮದಿಂದ ಬಂದು ಬಾಗಿಲು ತೆಗೆದರು. ರೋಶನ್ ಮತ್ತು ಅಮಿನಾಸರ ಮುಖಗಳೂ ಕಾಣಿಸಿಕೊಂಡುವು.

"ಇವರಿಬ್ಬರೂ ಯಾವಾಗ ಬಂದರು ?"

"ಎರಡು ಮೂರು ದಿವಸ ಆಯ್ತು. ನಾವೇ ಕರೆದುಕೊಂಡು ಬಂದಿದ್ದೇವೆ ಒಂದೆರಡು ವಾರ ಅರಾಮ ಇರಲಿ ಅಂತ. ನೀವು ಯಾವಾಗ ಬಂದಿರಿ? ಕಾಲವಾಡದ ಸಹವಾಸ ಮುಗಿಯಿತಷ್ಟೆ ?"

"ಮುಗಿಯಲಿಲ್ಲ. ಮತ್ತೆ ಗಂಟು ಬಿತ್ತು. ಸಾಮಾನು ಒಯ್ಯಲು ಬಂದಿದ್ದೇನೆ."

"ನೀವು ಇಂದು ಬರುತ್ತೀರಿ ನಾಳೆ ಬರುತ್ತೀರಿ ಅಂತ ಕಾಯುತ್ತಿದ್ದೆವು. ನೀವು ಅಲ್ಲಿಗೇ ಕಾಯಂ ಹೊರಟುಬಿಟ್ಟಿರಲ್ಲ!" ಎಂದರು ಜಮಾದಾರರು. ಅವರೆಲ್ಲರಿಗೂ ಬಹಳ ವ್ಯಸನವಾಯಿತು.

"ಏನು ಮಾಡುವದು ಹೇಳಿರಿ. ಹೇಳಿ ಕೇಳಿ ಸರಕಾರಿ ಚಾಕರಿ."

ಲಾಟಾನಿನ ಗ್ಲಾಸು ತೆಗೆದು, ಬೂದಿ ಹಾಕಿ ಉಜ್ಜಿ, ಬಟ್ಟೆಯಿಂದೊರೆ

ಸಿದಳು ರೋಶನ್. ಎಣ್ಣೆಯ ಸೀಸೆ ತಂದು ಲಾಟೀನಿಗೆ ಎಣ್ಣೆ ತುಂಬಿದಳು ಅಮೀನಾ. ಕಡ್ಡಿ ಕೊರೆದು ದೀಪ ಹಚ್ಚಿದ ಕರೀಮ್.

ರೋಶನಳ ತಾಯಿ ಹೇಳುತ್ತಿದ್ದಳು :

"ಅಮೀನಾ ಸುಖವಾಗಿದ್ದಾಳೆ ಗಂಡನ ಮನೆಯಲ್ಲಿ. ತಮ್ಮ ಮನೆಗೆ ಇವಳು ಭಾಗ್ಯಲಕ್ಷ್ಮಿಯ ಹಾಗೆ ಬಂದಳೆಂತ ಇವಳ ಮಾವ ಹೇಳುತ್ತಿರುತ್ತಾರೆ. ಅದು ನಿಜವೂ ಹೌದು. ಅವರ ಮನೆಗೆ ಇವಳು ಕಾಲಿಟ್ಟಂದಿನಿಂದ ಅವರ ವ್ಯಾಪಾರದಲ್ಲಿ ಎರಡು ಮೂರು ಪಟ್ಟು ಲಾಭವಾಗುತ್ತಾ ಇದೆ. ಅವರೆಲ್ಲಾ ಅಮೀನಳನ್ನು ಪ್ರೀತಿಸುತ್ತಾರೆ. ಹಣವನ್ನೆಲ್ಲಾ ಇವಳ ಕೈಯಲ್ಲೇ ಕೊಡುತ್ತಾರೆ. ಇವಳೂ ಅದನ್ನೆಲ್ಲಾ ಜೋಪಾನವಾಗಿಡುತ್ತಾಳೆ. ಅಂತೂ ನಿಮ್ಮಿಂದಾಗಿ ನನ್ನ ಮಗಳು ಸುಖದ ದಿನ ಕಾಣುವಂತಾಯಿತು ಭಾಯಿಜಾನ್."

ಅಮೀನಾ ಸುಖಿಯಾಗಿದ್ದಳೆಂಬುದನ್ನು ಅವಳ ಮುಖವೇ ಸಾರಿ ಹೇಳುತ್ತಿತ್ತು; ಪ್ರಕಾಶಮಾನವಾಗಿದ್ದ ಅವಳ ಕಣ್ಣುಗಳೇ ಹೇಳುತ್ತಿದ್ದುವು. ಮದುವೆಗೆ ಮೊದಲಿನ ಚಂಚಲತೆ ಮಾಯವಾಗಿ ಅದಕ್ಕೆ ಬದಲಾಗಿ ಗಾಂಭೀರ್ಯ ಅವಳನ್ನಾವರಿಸಿಕೊಂಡಿತ್ತು. ಅವಳ ಮೈ ಕೈಗಳೂ ತುಂಬಿಕೊಂಡು ಆರೋಗ್ಯವನ್ನು ಸಾರುತ್ತಿದ್ದುವು.

"ಗಂಡನ ಮನೆಯಲ್ಲಿ ತಿಂದು ತಿಂದು ಎಮ್ಮೆಯಂತೆ ಉಬ್ಬಿದ್ದಾಳೆ. ಒಂದು ದಿನವೂ ನಮ್ಮನ್ನು ಊಟಕ್ಕೆ ಕರೆಯಲಿಲ್ಲ. ನನ್ನ ಹೆಂಡತಿ ಬಂದ ಮೇಲೆ ನಾನೇನು ಇವಳನ್ನು ಊಟಕ್ಕೆ ಕರೆಯುವದಿಲ್ಲ," ಎಂದು ನಾನು ತಮಾಷೆಗಾಗಿ ಹೇಳಿದೆ.

ಅಮೀನಾ ಘಾಟಿ. ಅವಳು ನಗುನಗುತ್ತಾ ಹೇಳಿದಳು :

"ನಿಮ್ಮನ್ನಾರು ಕೇಳುತ್ತಾರೆ ಆಗ? ಅದು ನಮ್ಮಕ್ಕನ ಮನೆಯಾಗುವುದು. ನಾವು ಬಂದು ಚೆನ್ನಾಗಿ ಮೇದು ಬಂದಿರುವು."

"ಅವಳಿಗೂ ನಿಮಗೂ ಕೂಡೇ ಗಾಡಿಗೆ ಟಿಕೀಟು ಕೊಡಿಸಬೇಕಾಗುವುದು."

"ಹಿಂದಿನ ಗಾಡಿಗೇ ನೀವೂ ಬರಬೇಕಾಗುವದು!" ಎಂದಳು ಅಮೀನಾ.

ಎಲ್ಲರೂ ನಗತೊಡಗಿದರು.

ರೋಶನ್ ಮಾತ್ರ ಅಮೀನಳಷ್ಟು ಸುಖಿಯಾಗಿರಲಿಲ್ಲ. ತಾನು ಕಲಿತವ

ನೆಂಬ ಜಂಬದಲ್ಲೇ ಇರುತ್ತಿದ್ದ ಅವಳ ಗಂಡ. ಅವರ ಓಣಿಯಲ್ಲಿ ಅವನಷ್ಟು ಓದಿದವರು ಬೇರೆ ಯಾರೂ ಇರಲಿಲ್ಲವಾದುದರಿಂದ ಅವನಿಗಿಷ್ಟು ಅಹಂಕಾರ. ಓಣಿಯಲ್ಲಿನ ಜನರನ್ನೆಲ್ಲ ತುಚ್ಛತೆಯಿಂದ ಕಾಣುವುದು ಅವನ ಚಟವಾಗಿತ್ತು. ತಂದೆತಾಯಿಗಳೊಡನೆಯೂ ಒರಟಾಗಿ ವರ್ತಿಸಿ ಅವರ ಮನಸ್ಸು ನೋಯಿಸುತ್ತಿದ್ದ. ಒಬ್ಬ ಮಗನೆಂಬ ವಾತ್ಸಲ್ಯದಿಂದಾಗಿ ಅವರು ಎಲ್ಲವನ್ನೂ ಸಹಿಸಿಕೊಂಡು ಸುಮ್ಮನಿದ್ದರು. ಅವರ ಮನೆಯಲ್ಲಿ ಬೀಡಿ ಕಟ್ಟುವುದು ಬಹಳ ವರ್ಷಗಳಿಂದ ನಡೆದು ಬಂದಿದ್ದ ಉದ್ಯೋಗ. ಅವನ ತಂದೆತಾಯಿಗಳಿಬ್ಬರೂ ಆ ಉದ್ಯೋಗ ಕೈಗೊಂಡು ನಿತ್ಯವೂ ನಾಲ್ಕು ರೂಪಾಯಿ ಸಂಪಾದಿಸುತ್ತಿದ್ದರು. ಸರಕಾರಿ ನೌಕರನಾದ ತನ್ನ ತಂದೆತಾಯಿಗಳು ಬೀಡಿ ಕಟ್ಟುವಂಥ ಕೀಳುತನದ ಕೆಲಸ ಮಾಡುವುದು ತನ್ನ ಮರ್ಯಾದೆಗೆ ಕುಂದು ಎಂದೇ ಅವನ ಭಾವನೆ. ಆ ಕೆಲಸವನ್ನು ಬಿಟ್ಟುಬಿಡಬೇಕೆಂದು ಅವನು ಎಷ್ಟು ಬಾರಿ ಹೇಳಿದರೂ ಅವರು ಬಿಟ್ಟಿರಲಿಲ್ಲ. ಅದರಿಂದಾಗಿ ದಿನವೂ ಮನೆಯಲ್ಲಿ ರಾದ್ಧಾಂತವಿದ್ದೇ ಇರುತ್ತಿತ್ತು. ಕಚೇರಿಯಲ್ಲಿಯೂ ಅವನದು ಅಂಥ ವರ್ತನೆಯೇ. ಅವನನ್ನು ಕಂಡರೆ ಯಾರಿಗೂ ಆಗುತ್ತಿರಲಿಲ್ಲ. ಇತರರನ್ನು ಕಂಡರೆ ಅವನಿಗೂ ಆಗುತ್ತಿರಲಿಲ್ಲ. ಅವನ ಸೊಕ್ಕಿನ ನಡತೆಯನ್ನು ಗಮನಿಸಿದ ಅಧಿಕಾರಿಗಳು ಒಳಗೊಳಗೇ ಉರಿಯುತ್ತಿದ್ದರು. ಒಂದಿಲ್ಲೊಂದು ದಿನ ಅವನ ಮೇಲೆ ಯಾವುದಾದರೊಂದು ಗಂಭೀರ ಸ್ವರೂಪದ ಆರೋಪ ಬಂದು ಅವನಿಗೆ ತೊಂದರೆಯಾಗುವುದೆಂದು ರೋಶನಳ ಚಿಂತೆ. ಅವಳನ್ನು ಅವನು ಸರಿಯಾಗಿ ಬಾಳಿಸುತ್ತಿರಲಿಲ್ಲ. ಅನಾವಶ್ಯಕವಾಗಿ ರೇಗುವುದು, ಕೂಗುವುದು, ಬಯ್ಯುವುದು, ಹೊಡೆಯುವುದು. ಇವನ ಮ್ಯಾಟ್ರಿಕ್ ಮೋಹಕ್ಕೆ ಕಟ್ಟು ಬೀಳದೆ ತನ್ನ ತಂದೆ, ಸುಸ್ವಭಾವಿಯಾದ ಬಡವನೊಬ್ಬನಿಗೆ ತನ್ನನ್ನು ಮದುವೆಮಾಡಿಕೊಟ್ಟಿದ್ದರೆ ತಾನು ಸುಖಿಯಾಗಿರಬಹುದಾಗಿತ್ತು ಎಂದು ಅವಳು ಯೋಚಿಸಿದ್ದುದು ಅನೇಕ ಬಾರಿ. ಅದೇ ಚಿಂತೆಯಲ್ಲಿಯೇ ಅವಳು ಕೊರಗಿ ಸೊರಗಿದ್ದಳು. ಅಮಿನಾಳ ಹಾಗೆ ಬಣ್ಣ ಬಂದಿರಲಿಲ್ಲ ಇವಳ ಮೈ ಮೇಲೆ. ಅವಳಷ್ಟು ಉತ್ಸಾಹವೂ ಇರಲಿಲ್ಲ.

ಅಕ್ಕತಂಗಿಯರಿಬ್ಬರೂ ನನ್ನ ಕೊಠಡಿಗೆ ಹೋಗಿ ಅದನ್ನು ಸ್ವಚ್ಛಗೊಳಿಸಿ ಬಂದರು. ಅವರ ಮನೆಯಿಂದಲೇ ಊಟವೂ ಬಂದಿತು.

"ನಾನು ನಿನಗೆ ಬಹಳ ಅನ್ಯಾಯ ಮಾಡಿದೆ ರೋಶನ್," ಎಂದೆ.

"ಏನು ಅನ್ಯಾಯ?"

"ಅಂಥ ಗಂಡನಿಗೆ ನಿನ್ನನ್ನು ಕಟ್ಟಿದೆವಲ್ಲ. ಅಲ್ಲಿ ನಿಮಗೆ ಸ್ವಲ್ಪವೂ ಸುಖವಿಲ್ಲ."

"ಅವರಿಗೆ ಸ್ವಲ್ಪ ದುರಭಿಮಾನ. ಆದರಿಂದಾಗಿ ಏನಾದರೂ ಕಠಿಣ ಪ್ರಸಂಗ ಬಂದೀತು ಅಂತ ಚಿಂತೆ ಅಷ್ಟೆ."

"ಅದಕ್ಕೆಲ್ಲಾ ಚಿಂತೆ ಮಾಡಬಾರದು ರೋಶನ್. ಆಗುವದು ಆಗುತ್ತದೆ. ಎಲ್ಲಾ ಎದುರಿಸಬೇಕು."

ನಾನು ಊಟ ಮುಗಿಸುವುದರೊಳಗಾಗಿ ಅವರ ಮನೆಯಿಂದಲೇ ಎಲೆ ಅಡಿಕೆ ಬಂದಿತು. ರೋಶನ್, ಅಮೀನಾ, ಕರೀಮ ಮೂವರೂ ಸೇರಿ ನನ್ನ ಸಾಮಾನುಗಳನ್ನು ಕಟ್ಟತೊಡಗಿದರು. ಹೆಚ್ಚು ಸಾಮಾನುಗಳೂ ಇರಲಿಲ್ಲ. ಈಚೆಗೆ ಕೆಲವು ಪಾತ್ರೆ ಪಡಗ ಕೊಂಡಿದ್ದೆನಷ್ಟೆ. ಅವುಗಳನ್ನೆಲ್ಲ ಗೋಣಿ ಚೀಲ ವೊಂದರಲ್ಲಿ ತುಂಬಿ ಹಗ್ಗ ಬಿಗಿದುದಾಯಿತು. ಗಂಟುಗದಡಿ ಕಟ್ಟಿದುದಾಯಿತು.

ಮಾರನೆಯ ದಿನ ಪೇಟೆಗೆ ಹೋಗಿ ನನಗಾಗಿ ಕೆಲವು ಬಟ್ಟೆಗಳನ್ನೂ, ಕನ್ನಡಿ, ಗಂಧದೆಣ್ಣೆ, ಸಬಕಾರಗಳನ್ನೂ ಕೊಂಡುಕೊಂಡೆ. ರೋಶನ್ ಮತ್ತು ಅಮೀನರಿಗಾಗಿ ಒಂದೊಂದು ಜರಿಯಂಚಿನ ಖಣ, ಒಂದೊಂದು ರೇಶಿಮೆಯ ಬ್ಲೌಜ್‌ಪೀಸ್, ಕರೀಮನಿಗಾಗಿ ಕೋಟು – ಶರ್ಟು – ಪಾಯಿಜಾಮಾ ಬಟ್ಟೆ, ಅವನ ತಾಯಿಗಾಗಿ ಒಂದು ರೇಶಿಮೆಯ ಖಣ ಖರೀದಿ ಮಾಡಿ ಮನೆಗೆ ಬಂದೆ.

ಮಧ್ಯಾಹ್ನ ಜಮಾದಾರರೊಡನೆ ಕುಳಿತು ಅವರಲ್ಲಿಯೇ ಊಟ ಮಾಡಿದೆ. ಊಟ ಮುಗಿಯುತ್ತಲೂ ಬಟ್ಟೆಯ ಗಂಟು ಬಿಚ್ಚಿ ಎಲ್ಲರನ್ನೂ ಕರೆದು ಅವರವರಿಗಾಗಿ ತಂದಿದ್ದ ಬಟ್ಟೆಗಳನ್ನು ಒಂದೊಂದಾಗಿ ತೆಗೆದು ಕೊಟ್ಟೆ. ಜಮಾದಾರರಿಗೂ ಅವರ ಹೆಂಡತಿಗೂ ತುಂಬಾ ಆಶ್ಚರ್ಯವಾಗಿತ್ತು. ನಾನು ತಂದಿದ್ದ ಬಟ್ಟೆಗಳಿಗೆ ನೂರು ರೂಪಾಯಿಗಳ ವರೆಗೂ ಬೆಲೆಯಾಗುತ್ತಿತ್ತು.

"ಇದೆಲ್ಲಾ ಯಾಕೆ ತಂದಿರಿ? ಬೇಡ ಬೇಡ," ಎಂದರು ಜಮಾದಾರರು.

"ಇದನ್ನೇನು ನಾನು ನನ್ನ ಸಂಬಳದ ಹಣದಿಂದ ತಂದಿಲ್ಲ. ಅದು ಸಾಧ್ಯವೂ ಇಲ್ಲ. ಹರಾಮದ ರೊಕ್ಕ. ನಿಮಗೆ ನಗರದಲ್ಲಿ ದುಡ್ಡು ಸಿಗುವುದು ಕಡಮೆ. ಕಾಲವಾಡದಲ್ಲಿ ಲಂಚಕ್ಕೆ ಕೊರತೆಯೇ ಇಲ್ಲ. ನನಗೆ ಸಿಕ್ಕರೇನು, ನಿಮಗೆ ಸಿಕ್ಕರೇನು, ಎಲ್ಲಾ ಒಂದೇ ಅಲ್ಲವೇನು?"

ಜಮಾದಾರರು ಮುಂದೆ ಮಾತನಾಡಲಿಲ್ಲ.

ನಾನು ಕರೀಮನ ಬಟ್ಟೆಗಳನ್ನು ಹೊರಕ್ಕೆ ತೆಗೆಯಲಿಲ್ಲ. ಅವನನ್ನು ಕೊಂಚ ಕೆರಳಿಸಿ ತಮಾಷೆ ನೋಡುವದೆಂದುಕೊಂಡು,

" ಈ ವರ್ಷದ ಪರೀಕ್ಷೆಯಲ್ಲಿ ಮೊದಲನೇ ನಂಬರ್ ಬಂದರೆ ಮಾತ ಕರೀಮನಿಗೆ ಅವನ ಅರಿವೆ," ಎಂದು ಹೇಳಿದೆ.

ಅವನ ಕಣ್ಣುಗಳಲ್ಲಿ ನೀರೂರಿತು.

" ಹೋದ ವರ್ಷ ನಾನು ಮೊದಲನೇ ನಂಬರ್ ಬಂದಿದ್ದೀನಿ ಮಾಮಾ. ನನಗೆ ಫೀ ಮಾಫೀ ಆಯಿತು. ಸ್ಕಾಲರ್‌ಶಿಪ್ಪು ಬರುತ್ತಾಯಿದೆ," ಎಂದ ಕರೀಮ.

ಅವನನ್ನು ಅಳಿಸಿ ನಗಿಸುವುದೆಂದರೆ ನನಗೆ ಸಂತೋಷ. ಅವನು ಒಳ್ಳೆಯ ಹುಡುಗ. ಬುದ್ಧಿವಂತ. ಸ್ಕಾಲರ್‌ಶಿಪ್ ಹಣವನ್ನು ತಂದು ತಂದೆಯ ಕೈಗೆ ಕೊಡುತ್ತಿದ್ದ. ಚೆನ್ನಾಗಿ ಅಭ್ಯಾಸಮಾಡಿ ವರ್ಗಕ್ಕೆ ಮೊದಲನೆಯವನಾಗಿ ಉತ್ತೀರ್ಣನಾಗಿದ್ದ. ಚಿಕ್ಕ ಬಾಲಕರಿಗೆ ಸಹಜವಾದ ಬಟ್ಟೆಬರೆಗಳ ಮೋಹ. ಆದರೆ, ತಂದೆ ಬಡವರೆಂಬುದು ಅವನಿಗೆ ಗೊತ್ತು. ಅಂತೆಯೆ, ಬಟ್ಟೆಗಳಿಗಾಗಿ ಅವರನ್ನೆಂದೂ ಅವನು ಪೀಡಿಸಿರಲಿಲ್ಲ. ಅಂದು ನನ್ನಿಂದಲಾದರೂ ಆ ಆಸೆ ಪೂರಯಿಸಬಹುದೆಂದು ಅವನ ಭಾವನೆ. ಅಳುತ್ತಿದ್ದ ಅವನನ್ನು ಹತ್ತಿರ ಕರೆದು, ಮೈದಡವಿ; ಸಂತೈಸಿ ಅವನಿಗಾಗಿ ತಂದ ಬಟ್ಟೆಗಳನ್ನು ಅವನ ಕೈಯಲ್ಲಿಟ್ಟಾಗ ಅಳು ಮಾಯವಾಗಿ ಸಂತಸದ ನಗು ನರ್ತಿಸತೊಡಗಿತು ಅವನ ಕಣ್ಣುಗಳಲ್ಲಿ.

ಜಮಾದಾರರು ಕಚೇರಿಗೆ ಹೋದರು. ನಾನೂ ಕೊಠಡಿಗೆ ಬಂದು ಮಲಗಿಕೊಂಡೆ.

ನಾಲ್ಕು ಗಂಟೆಯ ಸಮಯಕ್ಕೆ ಜಮಾದಾರರ ಹೆಂಡತಿ ಬಂದು ನನ್ನನ್ನು ಎಬ್ಬಿಸಿದರು.

" ಏಳ್ರಿ. ಚಹಾ ತಂದಿದ್ದೀನಿ."

ನಾನು ಎದ್ದು, ಮುಖ ತೊಳೆದುಕೊಂಡು ಬಂದು ಚಹಾ ಸೇವಿಸ ತೊಡಗಿದೆ.

" ನಮ್ಮ ಜಾತಿಯಲ್ಲಿ ಒಬ್ಬ ಗಂಡಸು ಮೂರು ನಾಲ್ಕು ಮಂದಿ ಹೆಂಡ ರನ್ನಾದರೂ ಲಗ್ನವಾಗಬಹುದು. ನೀವೂ ನಮ್ಮ ಜಾತಿಯವರೇ ಆಗಿದ್ದರೆ...."

ಎಂದು ಹೇಳಿ ಅಷ್ಟಕ್ಕೇ ಮಾತು ನಿಲ್ಲಿಸಿದರು ಜಮಾದಾರರ ಹೆಂಡತಿ.

"ಆಗಿದ್ದರೇನು ?" ಎಂದು ನಗುತ್ತಾ ಪ್ರಶ್ನಿಸಿದೆ.

"ಆಗಿದ್ದರೆ, ರೋಶನ್ ಅಮಿನಾ ಇಬ್ಬರನ್ನೂ ನಿಮಗೇ ಕೊಟ್ಟು ಮದುವೆ ಮಾಡಿಬಿಡುತ್ತಿದ್ದೆವು."

ನಾನು ತಬ್ಬಿಬ್ಬಾದೆ. ರೋಶನ್ ಮತ್ತು ಅಮಿನರೊಡನೆ ನನಗಿದ್ದ ಗುಪ್ತಸಂಬಂಧದ ಸಂಗತಿ ಅವರ ತಾಯಿಗೆ ತಿಳಿದು ಬಂದಿರಲಾರದಷ್ಟೆ ?

"ನೀವೇನಾದರೂ ಹಾಗೆ ಮಾಡಿದ್ದರೆ ಅವರಿಬ್ಬರೂ ನನ್ನನ್ನು ಜಂಗಲಿಗೆ ಅಟ್ಟುತ್ತಿದ್ದರು," ಎಂದು ನಾನು ಹೇಳುತ್ತಿದ್ದ ಹಾಗೇ ಅಕ್ಕತಂಗಿಯರಿಬ್ಬರೂ ಕೊಠಡಿಗೆ ನುಗ್ಗಿದರು.

"ಏನದು ? ಜಂಗಲಿಗೆ ಯಾರು ಅಟ್ಟುತ್ತಿದ್ದರು ?" ಎಂದಳು ರೋಶನ್.

"ನೀನು ಮತ್ತು ನಿನ್ನ ತಂಗಿ."

"ಯಾರನ್ನು ?"

"ನನ್ನನ್ನು."

"ಇಶ್ಶ್ !" ಎಂದವಳೆ ಅಮಿನಾ ಕೊಠಡಿಯಿಂದ ಓಡಿಹೋದಳು. ರೋಶನ್ ನಗುತ್ತಾ ನನ್ನ ಹಾಸಿಗೆಯನ್ನು ಸುತ್ತಿ ಕಟ್ಟತೊಡಗಿದಳು.

೭

# ಸಾವಿತ್ರಿಯನ್ನು ಕಂಡ ಬಳಿಕ-

ನಾಗರಪಂಚಮಿಯ ಹಬ್ಬವೆಂದರೆ ನಮ್ಮ ಭಾಗದಲ್ಲೆಲ್ಲಾ ದೊಡ್ಡ ಹಬ್ಬ. ಶ್ರಾವಣಮಾಸದ ಉದ್ದಕ್ಕೂ ಆ ಹಬ್ಬವನ್ನು ಬಹಳ ಉತ್ಸಾಹದಿಂದ ಆಚರಿಸುತ್ತಾರೆ. ಈ ಹಬ್ಬದ ವೈಶಿಷ್ಟ್ಯ ಎಂದರೆ ಉಂಡೆ. ತೀರಾ ಬಡವರಾಗಿದ್ದರೂ ಉಂಡೆಗಳನ್ನು ತಯಾರಿಸದಿರುದಿಲ್ಲ.

ಬ್ರಹ್ಮಚಾರಿ ಅಪ್ಪಣ್ಣನಿಗೆ ಆ ಬಾರಿ ಉಂಡೆ ತಿನ್ನುವ ಬಯಕೆಯಾಯಿತು. ನನಗೇನೂ ಉಂಡೆಗಳ ಕೊರತೆಯಾಗುವಂತಿರಲಿಲ್ಲ. ಉಜ್ಜಪ್ಪನವರಲ್ಲಿ ಬೇಕಾದಷ್ಟು ದೊರೆಯುತ್ತಿದ್ದುವು.

"ನಿನಗೆಷ್ಟು ಬೇಕು ಉಂಡೆ? ಬಾ ಉಜ್ಜಪ್ಪನವರ ಮನೆಗೆ. ಕುತ್ತಿಗೆಯ ವರೆಗೂ ತಿಂದು ತೇಗಬಹುದು."

"ಛೆ. ಒಂದೇ ಮನೆಯಲ್ಲಿ ತಿನ್ನುವದರಲ್ಲೇನು ಮಜಾ?"

"ಮತ್ತೆ?"

"ಊರಲ್ಲಿಯ ಎಲ್ಲಾ ಮನೆಯಲ್ಲಿಯ ಉಂಡೆ ರುಚಿ ನೋಡಬೇಕಪ್ಪಾ!" ಎಂದ ಅಪ್ಪಣ್ಣ.

"ಅಂದರೇನು? ಎಲ್ಲರ ಮನೆಗೂ ಊಟಕ್ಕೆ ಹೋಗುವ ಅನ್ನುತ್ತೀಯಾ?"

"ಊಟಕ್ಕೆ ಯಾರು ಹೋದಾರು. ಪಂಚಮಿಯ ಸೋಗು ಹಾಕೋಣ," ಎಂದ ಅಪ್ಪಣ್ಣ.

ಗಂಡಸರು ಸ್ತ್ರೀವೇಷ ಧರಿಸಿ ಮನೆ ಮನೆಗೆ ಹೋಗಿ ಉಂಡೆಗಳನ್ನೆತ್ತುವುದು ಪಂಚಮಿ ಹಬ್ಬದ ಇನ್ನೊಂದು ವೈಶಿಷ್ಟ್ಯ.

ಮೋಜು ನೋಡೋಣವೆಂದು ನಿಶ್ಚಯಿಸಿ ನಾವಿಬ್ಬರೂ ಸೀರೆಗಳನ್ನುಟ್ಟು ಕೊಂಡು, ಕುಬುಸ ತೊಟ್ಟುಕೊಂಡು ಹೊರಟೆವು. ಕೈಯಲ್ಲೊಂದು ಪುಟ್ಟ ಬುಟ್ಟಿ ಹಿಡಿದುಕೊಂಡಿದ್ದ ಅಪ್ಪಣ್ಣ. ಒಬ್ಬ ಓಲೇಕಾರನ ಮಗನನ್ನು ಜತೆಗೆ ಕರೆದು ಕೊಂಡು ಪ್ರತಿಯೊಂದು ಮನೆಯ ಯಜಮಾನಿಯ ಹೆಸರು ತಿಳಿದುಕೊಳ್ಳುತ್ತಾ ಬೀದಿಗುಂಟ ನಡೆದೆವು.

"ಉಂಡೀ ನೀಡೇ ನಮ್ಮವ್ವಾ!" ಎನ್ನುವುದು.

ಪ್ರತಿಯೊಂದು ಮನೆಯೆದುರಿಗೂ ಅದೇ ಕೂಗು. ಹೆಂಗಸರಿಗೆಲ್ಲಾ ಅದೊಂದು ಮೋಜಿನ ವಿಷಯವಾಯಿತು. ಭಿಕ್ಷುಕರನ್ನೂ ನಾಚಿಸುವಂತೆ ನಾವು ಕೂಗುತ್ತಿದ್ದೆವು. ನಮ್ಮ ವೇಷ ನೋಡಿ ಎಲ್ಲರೂ ನಗುವವರೇ. ಐದು ನಿಮಿಷ ಗಳಲ್ಲೇ ಅಪ್ಪಣ್ಣನ ಬುಟ್ಟಿ ಉಂಡೆಗಳಿಂದ ತುಂಬಿಹೋಯಿತು. ಸೀರೆಗಳ ಸೆರಗಿನಲ್ಲೂ ಉಂಡೆಗಳನ್ನು ಕಟ್ಟಿಕೊಂಡೆವು. ಹಾಗೆ ಊರಲ್ಲೆಲ್ಲ ಸುತ್ತಿದ ತರುವಾಯ ಗೌಡರನ್ನೂ ಉಜ್ಜಪ್ಪನವರನ್ನು ಕರೆದುಕೊಂಡು ಅಪ್ಪಣ್ಣನ ಕೊಠಡಿಯಲ್ಲಿ ಸೇರಿದೆವು. ಇತರ ಪೋಲೀಸರೂ ಬಂದರು. ಫೌಜದಾರರನ್ನೂ ಬರಮಾಡಿಕೊಂಡೆವು. ಅವರಿವರ ಮನೆಗಳಿಂದ ಸಾಕಷ್ಟು ತುಪ್ಪ ಬಂತು. ಆ ಮಾತು ಈ ಮಾತು ಆಡುತ್ತಾ ನಮ್ಮ ಸೊಗಸನ್ನು ನೆನೆಸಿಕೊಂಡು ನಗುತ್ತಾ ಯಥೇಚ್ಛವಾಗಿ ಉಂಡೆ ತಿಂದೆವು.

"ಅಬ್ಬಾ! ಈಗ ನನಗೆ ಸಂತೋಷ!" ಎನ್ನುತ್ತಾ ಹೊಟ್ಟೆಯ ಮೇಲೆ ಕೈಯಾಡಿಸುತ್ತಿದ್ದ ಅಪ್ಪಣ್ಣ.

ನಾವು ಸ್ತ್ರೀವೇಷ ಧರಿಸಿ ಉಂಡೆ ಎತ್ತಿದ ವಿಷಯ ಎಂಟು ಹತ್ತು ದಿನಗಳ ವರೆಗೂ ಚರ್ಚಿಸಲ್ಪಡುತ್ತಿತ್ತು ಊರಿನಲ್ಲಿ. "ಪೋಲೀಸರೆಂದಾದರೂ ಸೋಗು ಹಾಕುವರೇ! ಇವರಿಬ್ಬರು ವಿಚಿತ್ರ ಪೋಲೀಸರು!" ಎನ್ನುವವರೇ ಎಲ್ಲರೂ.

ನಾವು ವೇಷ ಹಾಕಿದ ದಿನ ಇನ್ನೊಂದು ವಿಶೇಷ ನಡೆಯಿತು.

ಅದೊಂದು ರೈತರ ಮನೆ. ಒಬ್ಬ ಯುವತಿಯ ಹೊರತು ಇನ್ನಾರೂ ಮನೆಯಲ್ಲಿರಲಿಲ್ಲ. ಹೊಲಕ್ಕೆ ಹೋಗಿದ್ದರು, ಎಲ್ಲರೂ. ನಾವು ಆ ಮನೆ ಯೆದುರಿಗೆ ನಿಂತು ಕೂಗಿದಾಗ ಆ ಯುವತಿ ಹೊರಕ್ಕೆ ಬರಲು ಸಂಕೋಚ ವಾಯಿತೇನೋ, ಅವಳು ಒಳಗೇ ನಿಂತುಕೊಂಡು ಮನೆಯಲ್ಲಿ ಯಾರೂ ಇಲ್ಲ

ವೆಂದು ಹೇಳಿದ್ದಳು. ಅಲ್ಲಿಯೂ ಉಂಡೆ ಸಿಕ್ಕಲೇಬೇಕೆಂಬ ಹಟವೇನೂ ನಮ ಗಿರಲಿಲ್ಲ. ಹೇಳಿಕೇಳಿ ಮೋಜಿನ ಭಿಕ್ಷುಕರು ನಾವು. ಹಾಗೇ ಮುಂದೆ ಸಾಗಿದೆವು. ನಮಗೆ ನೀಡಲು ಆಗಲಿಲ್ಲವಲ್ಲಾ ಎಂಬ ಕೊರಗು ಮಾತ್ರ ಆ ಯುವತಿಯನ್ನು ಬಿಡಲಿಲ್ಲ. ಸಂಜೆಗೆ ತನ್ನ ತಂದೆತಾಯಿ ಹೊಲದಿಂದ ಬರುತ್ತಲೂ ಅವಳು ಅಂದು ನಡೆದುದನ್ನೆಲ್ಲ ಹೇಳಿದ್ದಳು. ಅವರಿಗೂ ಬಹಳ ವ್ಯಸನವಾಗಿತ್ತು. ಅವರ ವಿಚಾರವಾಗಿ ನಾವು ಏನು ಭಾವಿಸಿದೆವೋ ಎಂದು ಯೋಚಿಸಿ ತುಂಬಾ ನೊಂದು ಕೊಂಡಿದ್ದರು. ನಮಗೆ ಮಾತ್ರ ಅವರ ನೆನಪು ಕೂಡ ಇರಲಿಲ್ಲ.

ಅದಾದ ಎರಡು ದಿನಗಳ ತರುವಾಯ ಆ ಮನೆಯ ಯಜಮಾನ ರುದ್ರಪ್ಪ ಉಜ್ಜಪ್ಪನವರಲ್ಲಿಗೆ ಬಂದು ನನ್ನನ್ನು ಕಂಡು, ತಮ್ಮ ಮನೆಗೆ ಊಟಕ್ಕೆ ಬರಬೇಕೆಂದು ಕೇಳಿಕೊಂಡಾಗ ನನಗೆ ಅಚ್ಚರಿಯೆನ್ನಿಸದಿರಲಿಲ್ಲ. ಅವನು ಎಲ್ಲ ವನ್ನೂ ವಿವರಿಸಿ ಹೇಳುತ್ತಲೂ ನನಗೆ ನಗುವನ್ನು ತಡೆದುಕೊಳ್ಳಲಾಗಲಿಲ್ಲ.

"ಅಯ್ಯೋ! ಇಷ್ಟೇ ಅಲ್ಲವೇನು! ಅದಕ್ಕೇನಂತೆ. ಬರುತ್ತೀನಿ, ನಡೆಯಿರಿ. ಉಜ್ಜಪ್ಪನವರೂ ಬರಬೇಕು, ಅಷ್ಟೆ."

"ಅವರನ್ನೂ ನಿಮ್ಮನ್ನೂ ಕರೆದೊಯ್ಯಲು ಬಂದಿದ್ದೀನಿ."

ಮಧ್ಯಾಹ್ನ ರುದ್ರಪ್ಪನ ಮನೆಗೆ ಹೋದೆವು. ಹಳೆಯಕಾಲದ ದೊಡ್ಡ ಮನೆಯದು. ಕಾಳು ಕಡ್ಡಿ, ದನಕರುಗಳಿಂದ ತುಂಬಿದ ಮನೆ. ಕಟ್ಟೆಯ ಮೇಲೆ ಹಾಸಿದ್ದ ಜಮಖಾನದ ಮೇಲೆ ನಾವು ಕುಳಿತುಕೊಂಡೆವು. ಸ್ವಲ್ಪ ಹೊತ್ತು ಹರಟೆ ಸಾಗಿತು. ಅಷ್ಟರಲ್ಲಿ ಅಡುಗೆ ಸಿದ್ಧವಾದ ಸೂಚನೆ ಬಂದಿತು.

ಬಿಳಿಯ ಜೋಳಗ ರೊಟ್ಟಿ, ಚಟ್ನಿ, ಎಣ್ಣೆಗಾಯಿ ಬದನೇಕಾಯಿ, ಕೆನೆ ಮೊಸರು, ಬೆಣ್ಣೆ. ರೊಟ್ಟಿಯನ್ನು ಮುಗಿಸುತ್ತಲೂ ಬಗೆ ಬಗೆಯ ಉಂಡೆ ಗಳನ್ನು ನೀಡಿದರು. ಅದರೊಡನೆ ಸಾಕಷ್ಟು ತುಪ್ಪ. ಅನಂತರ ಅನ್ನ, ಸಾರು, ಹಾಲು ಮೊಸರು, ಮಜ್ಜಿಗೆ. ಬಲು ಸೊಗಸಾದ ಊಟವಾಯಿತು.

ನಾವು ಊಟಕ್ಕೆದ್ದಾಗ ಕೈ ತೊಳೆದುಕೊಳ್ಳಲು ನೀರು ಕೊಟ್ಟದ್ದವಳು ಅದೇ ಯುವತಿ; ರುದ್ರಪ್ಪನ ಮಗಳು. ಅವಳ ಮುಖವನ್ನು ನಾನು ನೋಡ ಲಿಲ್ಲ. ಒಬ್ಬರ ಮನೆಗೆ ಅತಿಥಿಯಾಗಿ ಹೋಗಿದ್ದಾಗ ಅಲ್ಲಿಯ ಹೆಣ್ಣುಮಕ್ಕಳ ಮುಖ ನೋಡುತ್ತಾ ನಿಲ್ಲುವುದು ಅಸಭ್ಯತನವಲ್ಲವೆ? ಮುಖವನ್ನು ನೋಡ ದಿದ್ದರೂ ಅವಳ ಕೈಗಳನ್ನು ನೋಡಿದ್ದೆ, ಕಾಲುಗಳನ್ನು ನೋಡಿದ್ದೆ. ಲಿಂಬೆ

ಹಣ್ಣಿನ ಬಣ್ಣದ ಅಂದವಾದ ಕೈಕಾಲುಗಳು. ಅವುಗಳಿಗೆ ತಕ್ಕ ಹಾಗೇ ಮುಖವೂ ಇರಬಹುದೆಂದು ಭಾವಿಸಿಕೊಂಡಿದ್ದೆ. ಯಾರಿಗೂ ಗೊತ್ತಾಗದಂತೆ ಒಂದುಬಾರಿ ಆ ಮುಖವನ್ನು ನೋಡಿಬಿಡೋಣವೆಂಬ ಯೋಚನೆ ಬಂದಿದ್ದಿತಾದರೂ ಉಜ್ಜಪ್ಪನವರು ಪಕ್ಕದಲ್ಲೇ ಇದ್ದರಾದುದರಿಂದ ಅನುಕೂಲವಾದ ಸಂದರ್ಭ ಒದಗಿಬಂದಿರಲಿಲ್ಲ. ದೃಷ್ಟಿಯನ್ನು ನೆಲದ ಮೇಲೇ ನೆಟ್ಟು ಊಟ ಮಾಡುತ್ತಿದ್ದೆವು. ಒಂದೆರಡು ಬಾರಿ ಅವಳು ಬಂದಿದ್ದಳು ತುಪ್ಪ ಬಡಿಸಲೆಂದು. ಆಗಲೂ ಅವಳನ್ನು ದೃಷ್ಟಿಸಲು ಸಂಕೋಚವಾಗಿತ್ತು. ಅಡುಗೆಯ ಮನೆಯತ್ತ ಕೆಳನೋಟ ಹರಿಸಿದಾಗ ಅವಳ ಪಾದಗಳು ಕಾಣಿಸುತ್ತಿದ್ದುವು. ಬಾಗಿಲಲ್ಲಿ ನಿಂತುಕೊಂಡು ಅವಳು ನನ್ನನ್ನೇ ನೋಡುತ್ತಿರಬಹುದೇ ಎಂದು ಯೋಚನೆ ನನಗೆ. ಮರುಕ್ಷಣವೇ ನನಗೆನ್ನಿಸಿತು: ಛೀ! ಹಾಗಿರಲಾರದು. ಅವಳೇಕೆ ನೋಡಬೇಕು ನನ್ನನ್ನು? ನಾನೇನು ಅಂಥ ಮನ್ಮಥನೇ ಲೋಕದ ಹೆಣ್ಣುಗಳೆಲ್ಲ ನನ್ನನ್ನು ನೋಡಲು! ನಮಗೆ ಮತ್ತೇನಾದರೂ ಬೇಕಾಗಿದೆಯೇನೋ ಎಂದು ನೋಡುವುದಕ್ಕಾಗಿ ಅವಳು ನಿಂತುಕೊಂಡಿರಬಹುದು ಬಾಗಿಲಲ್ಲಿ. ನನಗೆ ಮಾತ್ರ ದುಷ್ಟ ವಿಚಾರವೆ!



ನಾನು ಮಾಡುತ್ತಿದ್ದುದು ಅನುಚಿತಕೃತ್ಯವೆಂಬುದರ ಅರಿವಿದ್ದರೂ ಮನಸ್ಸಿನ ಮೇಲೆ ಹಿಡಿತವಿಟ್ಟುಕೊಳ್ಳಲು ಸಾಧ್ಯವಾಗಲಿಲ್ಲ. ಅವಳ ಮುಖವನ್ನು ನೋಡಿಯೇತೀರಬೇಕೆಂಬ ಬಯಕೆ ಅದಮ್ಯವಾಗಿತ್ತು. ಬಾಗಿಲಲ್ಲಿ ನಿಂತಿದ್ದ ಆ ಯುವತಿಯೂ ಅಲ್ಲಿಂದ ಕದಲಲಿಲ್ಲ.

"ಇನ್ನೊಂದಿಷ್ಟು ಉಂಡೀ ನೀಡು ಸಾವಿತ್ರೀ!" ಎಂದಳು ಅವಳ ತಾಯಿ.

ಅವಳ ಹೆಸರು ಸಾವಿತ್ರಿಯೆಂಬುದು ಗೊತ್ತಾಗುತ್ತಲೂ ನನ್ನ ಮನಸ್ಸು ಇನ್ನೂ ಮುದಗೊಂಡಿತು. ಸಾವಿತ್ರಿ....ಬಲು ಸುಂದರವಾದ ಹೆಸರು. ಅದನ್ನೇ ಎರಡು ಮೂರು ಬಾರಿ ನಾಲಗೆಯ ಮೇಲೆ ಚಪ್ಪರಿಸಿದೆ. ಹೆಸರಿಗೆ ತಕ್ಕಹಾಗೆ ಅವಳೂ ಸುಂದರಿಯಾಗಿಯೇ ಇರಬಹುದು....

ಸಾವಿತ್ರಿ ನನ್ನ ತಟ್ಟೆಯಲ್ಲಿ ಎರಡು ಉಂಡೆ ಹಾಕುತ್ತಿದ್ದ ಹಾಗೆ, "ಬೇಡ ಬೇಡ. ಸಾಕು," ಎಂದು ಹೇಳುತ್ತಾ ನಾನು ಎಡಗೈ ಮುಂದೆ ಚಾಚಿದೆ. ಅವಳ ಬಲಗೈಗೆ ನನ್ನ ಎಡಗೈ ತಾಕಿತು. ಅದರೊಡನೆ ಅವಳ ಕೈ ಕಂಪಿಸಿದ ಹಾಗೆ ತೋರಿತು. ನಾನು ಮುಖ ಮೇಲಕ್ಕೆತ್ತಿ ಸಹಜವಾಗಿಯೇ ಅವಳನ್ನು ದಿಟ್ಟಿಸಿ

ನೋಡಿದೆ. ಅವಳು ಲಜ್ಜಿತಳಾದಳು. ಮುಖದ ತುಂಬಾ ಮುಗುಳ್ನಗು ಪಸರಿಸಿತ್ತು. ಮುಂದೆ ಊಟವೇ ರುಚಿಸದಂತಾಯಿತು ನನಗೆ. ನನ್ನ ಹಸಿವೆಯನ್ನೆಲ್ಲಾ ಕೊಚ್ಚಿಕೊಂಡು ಹೋಗಿತ್ತು ಅವಳ ಆ ನಗು – ಅವಳ ರೂಪು.

ಮನೆಗೆ ಅತಿಥಿಗಳು ಬರುವರೆಂದು ಅವಳು ಅಂದು ಚೆನ್ನಾಗಿ ತಲೆ ಬಾಚಿಕೊಂಡಿದ್ದ ಹಾಗಿತ್ತು. ಮುಂಗೈಗಳಲ್ಲಿ ಎರಡೆರಡು ಬಂಗಾರದ ಬಳೆಗಳಿದ್ದುವು. ರೇಶಿಮೆಯಂಚಿನ ತೋಪು ತೆನೆ ತಿರುವಿದ ಸೀರೆಯುಟ್ಟುಕೊಂಡಿದ್ದಳು. ಮಾಟವಾದ ಮೈಕಟ್ಟು, ಮೋಹಕ ಬಣ್ಣ, ಮುದ್ದಾದ ಮುಖ ಮುದ್ರೆ. ಅವಳ ಆ ಮುಗುಳ್ನಗೆಯೋ ತಿಂಗಳ ಬೆಳಕಿನಂತೆ. ನಾನು ಸೌಂದರ್ಯ ಪ್ರೇಮಿ. ಸುಂದರ ವಸ್ತುಗಳನ್ನು ಕಂಡೊಡನೆ ಮೋಹಿತನಾಗುವುದು ನನ್ನ ಸ್ವಭಾವ. ಊಟ ಮುಗಿಯುವುದರೊಳಗಾಗಿ ಎರಡು ಮೂರು ಬಾರಿಯಾದರೂ ನಮ್ಮಿಬ್ಬರ ದೃಷ್ಟಿ ಮಿಲನವಾಗಿರಬಹುದು. ಪ್ರತಿಸಲವೂ ಅವಳು ಲಜ್ಜಿತಳಾಗಿ ಮುಖ ಹೊರಳಿಸಿ ಹೊರಟುಹೋಗಿದ್ದಳು. ಮುಖವನ್ನು ಓರೆ ಮಾಡುವಾಗಿನ ಅವಳ ಆ ಮೋಹಕಭಂಗಿ ನನ್ನ ಚಿತ್ತವನ್ನು ಭೇದಿಸಿತ್ತು.

ಊಟ ತೀರಿಸಿಕೊಂಡು ಮತ್ತೆ ಕಟ್ಟೆಗೆ ಬಂದು ಕುಳಿತುಕೊಂಡೆವು. ಎಲೆ ಅಡಕೆಯ ತಟ್ಟೆ ಹಿಡಿದುಕೊಂಡು ಬಂದಳು ಸಾವಿತ್ರಿ. ಮತ್ತೆ ನಮ್ಮಿಬ್ಬರ ದೃಷ್ಟಿಗಳು ಒಂದುಗೂಡಿದುವು.

ತಟ್ಟೆಯನ್ನು ನಮ್ಮೆದುರು ಇಟ್ಟು ಸಾವಿತ್ರಿ ಹೊರಟುಹೋದಳು. ಅವಳ ತಂದೆಯೂ ಒಳಗೇ ಇದ್ದ. ಕುತೂಹಲವನ್ನು ತಡೆದುಕೊಳ್ಳಲಾರದೆ ನಾನು ಉಜ್ಜಪ್ಪನವರನ್ನು ಕೇಳಿದೆ:

"ಹುಡುಗಿ ಯಾರ್ರೀ?"

"ಗೊತ್ತಾಗಲಿಲ್ಲವೇನು? ಅವಳು ರುದ್ರಪ್ಪನ ಮಗಳು."

"ಮತ್ತೆ? ಇಲ್ಲಿ ಯಾಕೆ? ಪಂಚಮಿಯ ಹಬ್ಬಕ್ಕೆ ಬಂದಿರುವಳೋ ಏನು?"

"ಪಾಪ! ಅವಳಿಗೆಲ್ಲಿಯ ಹಬ್ಬ! ಅವಳು ವಿಧವೆ."

ನನಗೆ ವ್ಯಸನವೂ ಆಯಿತು, ಸಂತೋಷವೂ ಆಯಿತು. ಇಂಥವರು ಜನ್ಮನದಲ್ಲಿ ವಿಧವೆಯಾಗಿರಬೇಕಲ್ಲಾ ಪಾಪ! ಎಂದು ಮರುಕ. ಅವಳು

ಹಾಗಿರುವಳೆಂದೇ ನಾನು ಅವಳನ್ನು ವಶಪಡಿಸಿಕೊಳ್ಳಲು ಅನುಕೂಲವಾಯಿತೆಂದು ಸಂತೋಷ.

ಉಜ್ಜಪ್ಪನವರು ಹೇಳುತ್ತಿದ್ದರು :

"ಪಾಪ! ಆ ಹುಡುಗಿಯ ಕಷ್ಟ ನೋಡಿದರೆ ಕರುಳು ಮರುಗುತಾವೆ. ನಮ್ಮ ಸುಮಿತ್ರೆಯದು ಒಂದು ರೀತಿಯ ಕಷ್ಟವಾದರೆ ಇವಳದು ಇನ್ನೂ ಭಯಂಕರ. ಇವಳಿನ್ನೂ ಹನ್ನೊಂದು ವರ್ಷದಾಕೆಯಿದ್ದಾಗಲೇ ಲಗ್ನವಾಗಿತ್ತು. ಇಲ್ಲೇ ಒಂದು ಹಳ್ಳಿಯ ಗೌಡರ ಮನೆಗೆ ಕೊಟ್ಟಿತ್ತು. ಹುಡುಗನೂ ಚಂದಾಗಿದ್ದ ನೋಡುವದಕ್ಕೆ. ಮದುವೆಯಾದ ಮರುವರ್ಷವೇ ಆ ಊರಲ್ಲಿ ಕಾಲರಾ ಜೇನೆಯೆದ್ದು ಆ ಹುಡುಗನೂ ಅದಕ್ಕೆ ಬಲಿಯಾಗಿ ಹೋದ. ಗಂಡ ಸತ್ತ ವರ್ಷವೇ ಇವಳು ಋತುಮತಿಯಾದಳು. ಆ ಮಾತಿಗೆ ಮೂರುವರ್ಷವಾಯಿತು. ಗಂಡನ ಮನೆ ಕಾಣುವ ಮೊದಲೇ ವಿಧವೆಯಾದಳು ಪಾಪ."

"ಇನ್ನೊಂದು ಮದುವೆ ಮಾಡಿಕೊಡಬಹುದಲ್ಲಾ ?"

"ಹೌದು. ಮಾಡಿಕೊಡಬಹುದು. ರುದ್ರಪ್ಪನೂ ಅದೇ ವಿಚಾರದಲ್ಲಿದಾನೆ. ಇವಳಿಗೆ ಸರಿಯಾದ ವರ ಸಿಕ್ಕಬೇಕಲ್ಲಾ. ವಯಸ್ಸಾದವರು, ಮಕ್ಕಳಿದ್ದವರು ಇವಳನ್ನು ಕೇಳಿದ್ದರು. ರುದ್ರಪ್ಪ ಒಪ್ಪಲಿಲ್ಲ. ಅವಳ ಮದುವೆಯದೂ ಒಂದು ಚಿಂತೆ ಅವನಿಗೆ. ನೀವಾದರೂ ಅವಳಿಗೊಂದು ಯೋಗ್ಯವರ ಹುಡುಕಿ ಕೊಡಿರಿ."

ಆ ವೇಳೆಗೆ ಹೊರಗಡೆ ಬಂದ ರುದ್ರಪ್ಪನೂ,

"ಅಷ್ಟು ಮಾಡಿ ಪುಣ್ಯಾ ಕಟ್ಟಿಕೊಳ್ಳಿರಪ್ಪಾ!" ಎಂದು ಹೇಳಿದ.

ನಾವು ಮನೆಗೆ ಹೊರಟಾಗ ಸಾವಿತ್ರಿ ಹೊರಬಾಗಿಲಿನ ಒಳಮಗ್ಗುಲಲ್ಲಿ ನಿಂತುಕೊಂಡಿದ್ದಳು. ಅವಳ ಮುಖ ಕಾಣಿಸುತ್ತಿರಲಿಲ್ಲ.

ದಾರಿಯುದ್ದಕ್ಕೂ ನನ್ನ ತಲೆಯಲ್ಲಿ ಅವಳ ಯೋಚನೆಯೇ.

"ಏನು, ಉಜ್ಜಪ್ಪನವರೆ, ನಾನೇನು ವಧೂವರವನ್ನು ನೋಡಿಕೊಡುವ ಏಜಂಟ್ ಅಂತ ತಿಳಿದೀರಾ ?"

ಅವರು ನಗುತ್ತಾ ಹೇಳಿದರು.

"ಏಜಂಟ್ ಆದರೂ ಏನಂತೆ! ಅದೇನು ಪಾಪದ ಕೆಲಸವಲ್ಲಾ !

ಪುಣ್ಯವೇ ಬಂದೀತು ನಿಮಗೆ. ನನ್ನ ಸುಮಿತ್ರೆಯನ್ನೊಂದು ದಾರಿಗೆ ಹಚ್ಚಿದಿರಿ. ಇನ್ನೊಂದೆರಡು ವರ್ಷ ಹೋಗಿದ್ದರೆ ಎಂಥಾ ಪ್ರಸಂಗ ಬರುತ್ತಿತ್ತೋ...."

"ಸಾಕು, ಸಾಕು. ಯಾವ ಮಾತೂ ಹೊರಟರೂ ನೀವು ಸುಮಿತ್ರೆಯನ್ನು ಎಳೆದು ತರುತ್ತೀರಿ."

"ಸರಿ ಸುಮಿತ್ರೆಯ ಮಾತು ಬೇಡ. ಸಾವಿತ್ರಿಯ ಲಗ್ನವಾಗುವಂತೆ ಮಾಡಿ ನೀವು ಪುಣ್ಯ ಕಟ್ಟಿಕೊಳ್ಳಬೇಕು. ನಿಮಗೆ ಎಷ್ಟೋ ಮಂದಿ ಗೆಳೆಯರಿದಾರೆ, ಕಲಿತವರಿದಾರೆ. ಸಾವಿತ್ರಿಯೂ ಚೆಲುವೆ. ಗುಣವತಿ. ಅವಳಿಗೆ ಅನುರೂಪನಾದ ವರನನ್ನು ನೋಡುವದು ನಿಮಗೇನು ಕಷ್ಟವಲ್ಲ. ಇವಳ ಕಲ್ಯಾಣವಾದರೆ ನನ್ನ ಸುಮಿತ್ರೆಗೂ ಬಹಳ ಆನಂದವಾದೀತು. ಇವರಿಬ್ಬರಿಗೂ ಬಹಳ ಗೆಳತಿಯರು. ಸುಮಿತ್ರೆ ಇಲ್ಲಿದ್ದಾಗಲೆಲ್ಲಾ ಸಾವಿತ್ರಿ ನಮ್ಮಲ್ಲಿಗೆ ಬರುತ್ತಿದ್ದಳು. ಅವಳು ಗಂಡನ ಮನೆಗೆ ಹೋದಂದಿನಿಂದ ಬರುವದನ್ನು ಬಿಟ್ಟಿದ್ದಾಳೆ."

ಸಾವಿತ್ರಿಯೆದುರಿಗೆ ಸುಮಿತ್ರಾ ನನ್ನನ್ನು ಹೊಗಳಿರಬಹುದೋ ಏನೊ. ಸುಮಿತ್ರೆಗಂತೂ ನಾನೆಂದರೆ ಅಚ್ಚುಮೆಚ್ಚು. ಜೀವದ ಗೆಳತಿಯಾದ ಸಾವಿತ್ರಿಯ ಮುಂದೆ ನನ್ನ ವಿಚಾರವಾಗಿ ಅವಳು ಸಾಕಷ್ಟು ಮಾತನಾಡಿರಬೇಕು. ನಾವು ಊಟಕ್ಕೆ ಕುಳಿತಿದ್ದಾಗ ಸಾವಿತ್ರಿ ನನ್ನನ್ನು ಹಾಗೆ ನೋಡಲು ಅದೇ ಕಾರಣವೊ ಏನೊ. ಹಾಗೆ ಯೋಚಿಸುತ್ತಾ ಮನೆ ಸೇರಿ ಹಾಸಿಗೆಯುರುಳಿಸಿ ಬಿದ್ದುಕೊಂಡೆ. ದೃಷ್ಟಿಯೆದುರಿಗೆ ಸಾವಿತ್ರಿಯ ಮುಖವೇ. ಅವಳನ್ನು ಮತ್ತೆ ನೋಡಬೇಕು, ಅವಳೊಡನೆ ಮಾತನಾಡಬೇಕು, ಸರಸವಾಡಬೇಕು....

ಅವಳು ನನಗೆ ಸಿಕ್ಕಬಹುದೇ? ಆ ವಿಚಾರ ಸುಮಿತ್ರೆಗೆ ಗೊತ್ತಾದರೆ ನನ್ನ ಬಗೆಗೆ ಗೌರವವಿಟ್ಟುಕೊಂಡಿರುವ ಆಕೆಗೇನೆನ್ನಿಸೀತು? ಅವಳು ನನ್ನನ್ನು ತಿರಸ್ಕಾರದಿಂದ ಕಾಣುವಂತಾಗುವುದೋ ಏನೊ....

ದಿನವಿಡೀ ಅದೇ ಯೋಚನೆ. ಸಾವಿತ್ರಿಯ ಹಂಬಲು.

ರಾತ್ರೆ ನಿದ್ದೆ ಬರಲಿಲ್ಲ. ಬೆಳಿಗ್ಗೆ ಎದ್ದಾಗ ಕಣ್ಣುಗಳೆರಡೂ ಉರಿಯುತ್ತಿದ್ದುವು. ತಲೆ ಸಿಡಿಯುತ್ತಿತ್ತು. ಮೈ ಭಾರವಾಗಿತ್ತು.

ನನ್ನ ಸ್ಥಿತಿಯನ್ನು ಗಮನಿಸಿ ಉಜ್ಜಪ್ಪನವರು ಗಾಬರಿಯಾದರು.

"ಏನಾಯ್ತು ಶಿವಣ್ಣನವರೆ? ನಿನ್ನಿನ ಊಟ ಅತಿಯಾಗಿ ಅಜೀರ್ಣವಾಯಿತೋ ಏನೊ. ಹರಳೆಣ್ಣೆ ತೆಗೆದುಕೊಳ್ಳುತ್ತೀರೇನು?"

ಹಾಸಿಗೆ ಬಿಟ್ಟು ಏಳಲಾಗಲಿಲ್ಲ. ಮೈಯಲ್ಲಿ ಸಣ್ಣಗೆ ಜ್ವರ ಕುದಿಯುತ್ತಿತ್ತು. ಕ್ವಿನೈನ್ ಮಾತ್ರೆ ನುಂಗಿ, ಕಾಫಿ ಕುಡಿದು ಮಲಗಿಕೊಂಡೆ.

ಫೌಜದಾರರೂ ಬಂದು, ಮೈ ಮುಟ್ಟಿ ನೋಡಿ, ಗಾಬರಿಗೊಂಡು,

"ಒಮ್ಮಿಂದೊಮ್ಮೆಲೆ ಹ್ಯಾಗೆ ಜ್ವರ ಬಂತು? ಏನಾಯಿತು?" ಎಂದರು.

"ಏನಿಲ್ಲ. ಮಲೇರಿಯಾ ಇರಬಹುದು. ಇದೆಂಥಾ ಜ್ವರ ಬಿಡಿರಿ!"

ಫೌಜದಾರರಿಗೆ ಸಮಾಧಾನವಾಯಿತು. ಅವರು ನಗುತ್ತಾ,

"ಚಳಿಜ್ವರವೋ? ಕಾಮಜ್ವರವೋ?" ಎಂದರು.

"ಎರಡೂ ಇರಬಹುದು," ಎಂದು ಹೇಳಿ ನಾನೂ ನಕ್ಕುಬಿಟ್ಟೆ.

ಹೊಲಕ್ಕೆ ಹೋಗುವ ಮೊದಲು ಉಜ್ಜಪ್ಪನವರ ಅಂಗಡಿಗೆ ಬಂದಿದ್ದ ರುದ್ರಪ್ಪ ನನ್ನ ಜ್ವರದ ಸಮಾಚಾರ ತಿಳಿದು ಹೊರಗಡೆ ಬಂದು ಯೋಗಕ್ಷೇಮ ವಿಚಾರಿಸಿದ. ಆ ವಾರ್ತೆ ಅವರ ಮನೆಗೂ ಮುಟ್ಟಿತು, ಊರಲ್ಲೆಲ್ಲ ಹರಡಿತು. ಗೌಡರೂ ಬಂದು ನನ್ನನ್ನು ನೋಡಿಕೊಂಡು ಹೋದರು. ಅಪ್ಪಣ್ಣನೂ ಇನ್ನಿತರ ಪೋಲೀಸರೂ ಬಂದರು.

"ಗೊಬ್ಬೂರಿಗೆ ಹೋಗಿ ಔಷಧ ತಗೊಂಡು ಬರ್‍ತೀನ್ರಿ," ಎಂದ ಅಪ್ಪಣ್ಣ.

"ಬೇಡ ಬೇಡ. ಇದೆಂಥಾ ಜ್ವರ! ಇದಕ್ಕ್ಯಾಕೆ ಔಷಧ? ಒಂದು ದಿವಸ ವಿಶ್ರಾಂತಿ ತೆಗೆದುಕೊಂಡರೆ ಹೊರಟು ಹೋಗುತ್ತದೆ," ಎಂದು ಹೇಳಿ ಅವನನ್ನು ತಡೆದು ನಿಲ್ಲಿಸಬೇಕಾಯಿತು.

ಮಧ್ಯಾಹ್ನ ಊಟ ಬೇಡವೆನ್ನಿಸಿತು. ಸ್ವಲ್ಪ ಕಾಫಿ ಸೇವಿಸಿ ಮಲಗಿಕೊಳ್ಳಬೇಕೆಂದು ಯೋಚಿಸಿಕೊಂಡಿದ್ದೆ.

ರುದ್ರಪ್ಪ ಗಾಬರಿಗೊಂಡ. ಹಿಂದಿನ ದಿನ ನಾನು ಅವರ ಮನೆಯಲ್ಲಿ ಊಟ ಮಾಡಿದುದರಿಂದಲೇ ಜ್ವರ ಬಂದಿರಬಹುದೆಂದು ಅವನ ಕಲ್ಪನೆ. ನಾವು ಕೋಮಲ ಪ್ರಕೃತಿಯ ಜನರು, ಆ ಭಾರಿ ಊಟವನ್ನು ಜೀರ್ಣಿಸಿಕೊಳ್ಳಲು ಅಸಮರ್ಥರಾಗಿರಬಹುದು, ಪರಿಣಾಮವಾಗಿ ಜ್ವರವೇರಿರಬಹುದು ಎಂದು ಅವನ ತರ್ಕ. ನನ್ನನ್ನು ನೋಡಿಕೊಳ್ಳುವವರಾರು? ಉಜ್ಜಪ್ಪನವರ ಹೆಂಡತಿಯೊಬ್ಬಳೇ ಮನೆಯಲ್ಲಿ. ಅವಳೂ ವಯಸ್ಸಾದ ಮುದುಕಿ. ಕಾಯಿಲೆಯವರ

ಆರೈಕೆ ಮಾಡುವುದು ಅವರಿಂದಾಗಲಾರದು. ಹಾಗೆಲ್ಲ ಯೋಚಿಸಿ, ಸಾವಿತ್ರಿಯನ್ನು ಕರೆದುಕೊಂಡು ಬಂದು ಉಜ್ಜಪ್ಪನವರಲ್ಲಿ ಬಿಟ್ಟು ಹೋದ, ರುದ್ರಪ್ಪ.

ಮಧ್ಯಾಹ್ನ ನಾನು ಕಾಫಿ ಕೇಳುತ್ತಲೂ ಕೈಯಲ್ಲಿ ಕಪ್ಪು ಹಿಡಿದುಕೊಂಡು ಕೊಠಡಿಯಲ್ಲಿ ಪ್ರವೇಶಿಸಿದಳು ಸಾವಿತ್ರಿ. ನನ್ನ ಜ್ವರ ಒಮ್ಮೆಲೆ ಏರಿದಂತಾಗಿ ಕಣ್ಣಿಗೆ ಕತ್ತಲೆ ಕವಿಯಿತು. ಕಾಫಿಯ ಕಪ್ಪನ್ನು ಕೆಳಗಿಟ್ಟು ನಾಚುತ್ತ ನಾಚುತ್ತ ಹೋದಳು ಸಾವಿತ್ರಿ. ನಾನು ಕಾಫಿಯನ್ನು ಮರೆತು ಹಾಗೆಯೇ ಬಿದ್ದುಕೊಂಡಿದ್ದೆ. ಅದು ಆರಿಹೋಗುತ್ತಿದ್ದುದರ ಅರಿವೂ ನನಗಿರಲಿಲ್ಲ.

ಐದು ನಿಮಿಷಗಳ ತರುವಾಯ ಕಪ್ಪನ್ನು ತೆಗೆದುಕೊಂಡೊಯ್ಯಲು ಮತ್ತೆ ಬಂದಳು ಸಾವಿತ್ರಿ. ನಾನು ಅವಳನ್ನೇ ದಿಟ್ಟಿಸುತ್ತಲಿದ್ದೆ. ಕಾಫಿ ಹಾಗೇ ಇದ್ದುದನ್ನು ಕಂಡು ಅವಳಿಗೆ ಅಚ್ಚರಿಯಾಗಿರಬೇಕು. ಮಾತನಾಡಲು ನಾನು ಬಾಯಿ ತೆರೆಯುತ್ತಿದ್ದ ಹಾಗೇ ಅವಳು ಹೊರಟುಹೋದಳು.

ಒಂದು ನಿಮಿಷ ಕಳೆಯುವುದರೊಳಗಾಗಿ ಉಜ್ಜಪ್ಪನವರ ಪತ್ನಿ ಗಂಗವ್ವ ಬಂದಳು.

"ಯಾಕ್ರೀ, ಕಾಫೀ ಕುಡಿಯಲಿಲ್ಲ?"

"ನಾಲಗೆಯ ರುಚಿಯೇ ಕೆಟ್ಟುಹೋಗಿದೆ. ಸ್ವಲ್ಪ ನೀಲಗಿರಿ ಎಣ್ಣೆಯನ್ನಾದರೂ ತರಿಸಿಕೊಡಿರಿ. ತಲೆ ಬಹಳ ಹೊಡೀತಾ ಇದೆ."

"ಈಗ ಕಳಿಸಿಕೊಡ್ತೀನಿ. ನಿಮ್ಮ ಜ್ವರವಿಳಿಯಲು ಸ್ವಲ್ಪ ಕಷಾಯವನ್ನು ಮಾಡುತೀನಿ," ಎಂದು ಹೇಳಿ ಗಂಗವ್ವ ಹೊರಟುಹೋದಳು.

ಅಂಗಡಿಯಿಂದ ನೀಲಗಿರಿಯೆಣ್ಣೆ ಬಂತು. ಗಂಗವ್ವ ಸಾವಿತ್ರಿಯನ್ನು ಕೂಗಿ ನನ್ನ ತಲೆಗೆ ಎಣ್ಣೆ ಹಚ್ಚಿ ತಿಕ್ಕುವಂತೆ ಹೇಳಿದಳು. ಸಾವಿತ್ರಿ ಸಂಕೋಚಪಟ್ಟುಕೊಳ್ಳುತ್ತಾ ಬಂದು ಎಣ್ಣೆಯನ್ನು ತನ್ನ ಕೈಗೆ ಬಳಿದುಕೊಂಡು ನನ್ನ ಹಣೆಗೆ ಹಚ್ಚತೊಡಗಿದಳು. ಅವಳ ಕೈ ನಡುಗುತ್ತಿತ್ತು. ಮುಖದ ಮೇಲೆ ಬೆವರು ಹನಿಯೊಡೆಯುತ್ತಿತ್ತು. ನಾನು ಒಳಗೊಳಗೇ ನಗುತ್ತಾ ಅವಳ ಕೈ ಹಿಡಿದು ಹಣೆಗೊತ್ತಿಕೊಂಡೆ. ಆ ಭಾಗದಲ್ಲಿ ನೋವು ವಿಶೇಷವಾಗಿರಬಹುದೆಂದು ಅವಳಿಗೆನ್ನಿಸಿರಬೇಕು. ಇನ್ನಷ್ಟು ಎಣ್ಣೆ ಹಚ್ಚಿ ಚೆನ್ನಾಗಿ ತಿಕ್ಕಿದಳು.

ಗಂಗವ್ವ ಕಷಾಯದೊಡನೆ ಬಂದಳು. ಅದನ್ನು ಕುಡಿಯುತ್ತಲೂ ಸ್ವಲ್ಪ ಹಾಯೆನ್ನಿಸಿತು.

"ಆರಾಮಾಯ್ತು. ನೀವಿನ್ನು ಹೋಗಬಹುದು."

ಸಾವಿತ್ರಿ ಎದ್ದು ನನ್ನನ್ನು ದಿಟ್ಟಿಸುತ್ತಲೇ ಕೊಠಡಿಯಿಂದ ನಡೆದಳು. ನಾನು ರಗ್ಗನ್ನು ಮುಖದ ಮೇಲೆಳೆದು ಬಿದ್ದುಕೊಂಡೆ.

ಆ ರಾತ್ರೆ ಭಯಂಕರ ಜ್ವರ. ನನಗೂ ಗಾಬರಿಯಾಗದಿರಲಿಲ್ಲ. ಸಾವಿತ್ರಿ ನನ್ನ ಹತ್ತಿರವೇ ಕುಳಿತುಕೊಂಡು ನನ್ನನ್ನು ನೋಡಿಕೊಳ್ಳುತ್ತಿದ್ದಳು. ಉಜ್ಜಪ್ಪ, ಗಂಗವ್ವ ಯಾರಿಗೂ ನಿದ್ದೆ ಬರಲಿಲ್ಲ.

ಬೆಳಿಗ್ಗೆ ಫೌಜದಾರರು ಬಂದು ಥರ್ಮಾಮೀಟರ್ ಇಟ್ಟು, ಜ್ವರವನ್ನು ಅಳೆದು ನೋಡಿದರು. ೧೦೨ ಡಿಗ್ರಿ. ಎಂಥ ಜ್ವರವೋ ಎಂದು ಅವರಿಗೂ ಭಯ.

"ಡಾಕ್ಟರನ್ನು ಕರೆಸಲೇ ಶಿವಣ್ಣಾ ?"

"ಬೇಡ ರಾವ್‌ಸಾಹೇಬರೆ."

"ಇದು ಮಲೇರಿಯಾ ಇದ್ದೀತು ಅಂತ ನನಗನಿಸುವದಿಲ್ಲ. ಏನಿದೆಯೋ ಹ್ಯಾಗೆ ಗೊತ್ತಾದೀತು ? ಡಾಕ್ಟರನ್ನು ಕರೆಸುವದೊಳ್ಳೆಯದು."

"ಇದೊಂದು ದಿನ ನೋಡೋಣ. ಇವತ್ತು ರಾತ್ರಿಗೂ ಇಳಿಯದಿದ್ದರೆ ನಾಳೆ ಡಾಕ್ಟರಿಗೆ ಹೇಳಿಕಳಿಸಬಹುದು."

ರಾತ್ರೆಯಾದರೂ ಇಳಿಯಲಿಲ್ಲ ಜ್ವರ. ಗಂಟೆಗಳುರುಳಿದಂತೆ ಅದರ ಬಿಸಿಯೂ ಹೆಚ್ಚುತ್ತಿತ್ತು. ಮಧ್ಯರಾತ್ರಿಯ ವೇಳೆಗೆ ೧೦೪ ಡಿಗ್ರಿಗಳವರೆಗೂ ಏರಿತ್ತು. ಆಗ ಮಾತ್ರ ಎಲ್ಲರೂ ಗಾಬರಿಗೊಂಡರು. ಕಾಮಜ್ವರವಿರಬಹುದೆಂದು ಚೇಷ್ಟೆ ಮಾಡಿದ ಫೌಜದಾರರ ಮುಖವೂ ಸಪ್ಪೆಯಾಗಿತ್ತು. ನನ್ನ ತಾಯಿ ತಮ್ಮಂದಿರಿಗೆ ಸುದ್ದಿ ತಿಳಿಸುವ ಮಾತು ನಡೆಯತೊಡಗಿತು. ಆ ವಿಚಾರ ಗೊತ್ತಾಗುತ್ತಲೂ ನಾನೇ ಬೇಡವೆಂದು ಹೇಳಿದೆ. ನನಗೆ ಅರ್ಧ ಎಚ್ಚರ, ಅರ್ಧ ಮಂಪರು. ನೆರೆದವರ ಮನಸ್ಸಿನಲ್ಲಿಯ ಚಿಂತೆ, ಭಯ ಎಲ್ಲವೂ ಅರ್ಥವಾಗುತ್ತಿತ್ತು. ಅವರನ್ನು ಸಮಾಧಾನಪಡಿಸಲು ನಾನೇ ಯತ್ನಿಸಬೇಕಾಯಿತು. ಅದು ಅರ್ಥವಿಲ್ಲದ ಬಡಬಡಿಕೆಯ ರೂಪ ತಳೆದಿರಲು ಸಾಕು.

ಮಾರನೆಯ ದಿನ ಗೊಬ್ಬೂರಿನಿಂದ ಡಾಕ್ಟರು ಬಂದು ದೇಹ ಪರೀಕ್ಷೆ ಮಾಡಿದರು. ೧೦೪ ಡಿಗ್ರಿ ಜ್ವರವಿತ್ತು ಆಗಲೂ. ಅದು 'ಟೈಫಾಯಿಡ್' ಎಂದೂ ಗೊತ್ತಾಯಿತು. ಆ ಜ್ವರ ಬಂದರೆ ಮನುಷ್ಯ ಉಳಿಯುವುದೇ ಇಲ್ಲವೆಂದು ಹಳ್ಳಿಗರ ಸಾಮಾನ್ಯವಾದ ಭಾವನೆ. ಯೋಗ್ಯ ಆರೈಕೆ – ಔಷಧಿ

ಸಕಾಲದಲ್ಲಿ ದೊರೆಯದಿದ್ದಲ್ಲಿ ವಿಷಮಜ್ವರದಿಂದ ಬಾಧಿತರಾದವರ ಜೀವ ಉಳಿಯುವುದಿಲ್ಲವೆಂಬ ಮಾತೂ ನಿಜವೇ.

ಗಂಗವ್ವ ಸಾವಿತ್ರಿ ಇಬ್ಬರೂ ರೋದಿಸುತ್ತಿದ್ದರು. ಉಜ್ಜಪ್ಪನವರ ಕಣ್ಣು ಗಳಲ್ಲೂ ನೀರೂರಿತ್ತು. ಫೌಜದಾರರು ಅವರನ್ನೆಲ್ಲ ಸಂತೈಸಿ ನನಗೂ ಸಮಾಧಾನ ಹೇಳಿದರು.

ಇನ್ನು ಮೂರು ದಿನಗಳಲ್ಲಿ ಜ್ವರವಿಳಿಯದಿದ್ದಲ್ಲಿ ನನ್ನನ್ನು ಗೊಬ್ಬೂರಿಗೇ ಸಾಗಿಸಬೇಕೆಂದು ಹೇಳಿ, ಡಾಕ್ಟರು ಹೊರಟುಹೋದರು. ಉಜ್ಜಪ್ಪನವರಿಗೆ ಮಾತ್ರ ನನ್ನ ಬಗ್ಗೆ ಆಸೆಯೇ ಉಳಿದಿರಲಿಲ್ಲವಂತೆ. ನನ್ನ ಕಾಹಿಲೆಯ ಸಮಾ ಚಾರವನ್ನು ಅವರು ಸುಮಿತ್ರೆಗೂ ತಿಳಿಸಿದ್ದರು.

ಅದು ನಾಲ್ಕನೆಯ ದಿನ. ಜ್ವರ ಹಾಗೇ ಇತ್ತು. ನನಗೆ ಪ್ರಜ್ಞೆಯೂ ಇರಲಿಲ್ಲ. ಯಾರೋ ಬರುತ್ತಿದ್ದರು; ನನ್ನ ಹಣೆ, ಕೈಕಾಲು ಮುಟ್ಟುತ್ತಿದ್ದರು. ನಾನು ನರಳುತ್ತಿದ್ದೆ. ಏನೇನೋ ಕನಸುಗಳು. ಒಮ್ಮೆ ಸ್ವರ್ಗದ ದೃಶ್ಯ. ಒಮ್ಮೆ ನರಕದ ದೃಶ್ಯ.

ಅಂದು ಸಂಜೆ ಸುಮಿತ್ರಾ ತನ್ನ ಗಂಡನ ಜೊತೆಗೆ ಬಂದಿಳಿದಳು. ನಾನು ಅವಳನ್ನು ಗುರುತಿಸಿದುದೆಷ್ಟೊ ಅಷ್ಟೆ. ಮುಂದೆ ಅವಳೂ ಕಾಣದಾದಳು. ಮೈಯಲ್ಲಿ ೧೦೫ ಡಿಗ್ರಿ ಜ್ವರ. ನಾನು ಒಂದೇಸಮನೆ "ಅವ್ವಾ, ಅವ್ವಾ," ಎಂದು ಕನವರಿಸುತ್ತಿದ್ದೆ. ಫೌಜದಾರರ ಗಡಿಬಿಡಿ ಹೇಳತೀರದು. ನನ್ನನ್ನು ಬಿಟ್ಟು ಅವರು ಅತ್ತಿತ್ತ ಕದಲಿರಲಿಲ್ಲ.

ಆರನೆಯ ದಿನವೂ ಜ್ವರ ಕಡಮೆಯಾಗಲಿಲ್ಲ. ನನ್ನ ಹಣೆಯ ಮೇಲೆ ಮಂಜುಗಡ್ಡೆಯನ್ನಿಡಲಾಯಿತು. ಅದರಿಂದಾಗಿ ಹೊಸದೊಂದು ಸಮಸ್ಯೆಯುದ್ಭ ವಿಸಿತು. ಒಮ್ಮಿಂದೊಮ್ಮೆಲೆ ನನಗೆ ಶೀತವಾಗಿ 'ನ್ಯೂಮೋನಿಯಾ' ರೋಗದ ಆಳಿಕೆಗಾರಂಭವಾಯಿತು. ಡಾಕ್ಟರರು ಗಾಬರಿಗೊಂಡು, ನನ್ನನ್ನು ಆಸ್ಪತ್ರೆಗೆ ಸಾಗಿಸಿದರೆ ಮಾತ್ರ ನಾನು ಉಳಿಯಬಹುದೆಂದು ಹೇಳಿದರು. ಅಂಥ ಸ್ಥಿತಿಯಲ್ಲಿ ನನ್ನನ್ನು ಸಾಗಿಸುವುದು ಅಪಾಯಕಾರಕವೆಂಬ ಸಂಗತಿ ಅವರಿಗೂ ಗೊತ್ತಿದ್ದುದೇ ಆಗಿತ್ತು. ಅದೊಂದು ಪೀಕಲಾಟದ ಪ್ರಸಂಗವೇ ಸರಿ.

ನನ್ನನ್ನು ಅಲ್ಲಿಂದ ಕದಲಿಸುವುದಕ್ಕೆ ಫೌಜದಾರರು ಒಪ್ಪಲಿಲ್ಲ. ಡಾಕ್ಟರರನ್ನು ಅಲ್ಲಿಯೆ ನಿಲ್ಲಿಸಿಕೊಂಡರು. ಅವರೂ ಆಸೆಯನ್ನು ಬಿಟ್ಟ ಹಾಗೇ

ಆಗಿತ್ತು. ನಾನು ಕೊನೆಯುಸಿರು ಹಾಕುತ್ತಲೂ ನನ್ನ ಮನೆಯವರಿಗೆ ತಂತೀ ವಾರ್ತೆ ಕಳಿಸುವ ಸಿದ್ಧತೆ ನಡೆದಿತ್ತು. ಗೊಬ್ಬೂರಿನಿಂದ ದೊಡ್ಡ ಫೌಜದಾರರೂ ಬಂದಿದ್ದರು. ಯಾರಿಗೂ ಆಸೆಯುಳಿದಿರಲಿಲ್ಲ.

ಬಂದು ಹೋಗುವ ಜನರಿಂದಾಗಿ ನನಗೆ ತೊಂದರೆಯಾಗಬಾರದೆಂದು ನನ್ನನ್ನು ಯಾರೂ ಕಾಣಲು ಬರಬಾರದೆಂದು ಡಾಕ್ಟರರ ಕಟ್ಟಪ್ಪಣೆಯಾಯಿತು.

ಅದು ಎಂಟನೆಯ ದಿನ. ಅಂದು ಬೆಳಿಗ್ಗೆ ನನಗೆ ಸ್ವಲ್ಪ ನಿದ್ದೆ ಬಂದಿತು. ಎರಡು ಗಂಟೆಗಳ ಕಾಲ ನಿದ್ರಿಸುತ್ತಿದ್ದವನು ಎಚ್ಚರಗೊಳ್ಳುತ್ತಲೂ "ನೀರು, ನೀರು," ಎಂದು ಕೂಗಿಕೊಂಡೆ.

ನನಗೆ ನಿದ್ರೆ ಹತ್ತಿದ ಅವಧಿಯಲ್ಲಿ ಫೌಜದಾರರೂ ಮತ್ತಿತರರೂ ಅನೇಕ ಬಾರಿ ನನ್ನ ಬಳಿ ಬಂದು ನಾನು ಉಸಿರಾಡಿಸುತ್ತಿರುವೆನೋ ಇಲ್ಲವೋ ಎಂದು ನೋಡಿಕೊಂಡು ಹೋಗಿದ್ದರಂತೆ. ಅದನ್ನು ಕಂಡು ಡಾಕ್ಟರರಿಗೆ ನಗು. ವಿಷಮಜ್ವರಗ್ರಸ್ತರೋಗಿಗೆ ನಿದ್ರೆ ಅವಶ್ಯವೆಂದು ಅವರ ಅಭಿಪ್ರಾಯ. ಆ ನಿದ್ದೆ ಯಿಂದಲೇ ಕಾಯಿಲೆ ಇಳಿಯಬಹುದೆಂದು ಅವರಿಗೆನ್ನಿಸಿತ್ತು.

ನನಗೆ ನೀರು ಕೊಡಲಾಗುತ್ತಿರಲಿಲ್ಲ. ದಿನವೂ ಒಂದು ಸೇರು ಹಾಲು ಕಾಯಿಸಿ, ಅದರಲ್ಲಿ ಒಂದು ನಿಂಬೇ ಹಣ್ಣಿನ ರಸ ಕೂಡಿಸುತ್ತಿದ್ದರು, ಹಾಲು ಒಡೆಯುತ್ತಲೂ ಅದನ್ನು ಬಟ್ಟೆಯಲ್ಲಿ ಸೋಸಿ ತೆಗೆದು ಸ್ನಿಗ್ಧ ಪದಾರ್ಥವನ್ನು ಬಿಸುಟು ಉಳಿದ ನೀರನ್ನು ನನಗೆ ಕುಡಿಯಲು ಕೊಡುತ್ತಿದ್ದರು.

ನಿದ್ರೆಯಿಂದ ಎಚ್ಚರವಾದಾಗ ನನ್ನ ಮೈ ಬೆವತುಕೊಂಡಿತ್ತು. ಅದನ್ನು ಅಂಗವಸ್ತ್ರದಿಂದ ಒರೆಸಿ ತೆಗೆದರು ಫೌಜದಾರರು. ನಾನು ಅವರ ಕೈ ಹಿಡಿದು ಕೊಂಡೆ. ಅವರ ಮುಖ ಹರ್ಷಭರಿತವಾಗಿತ್ತು.

ಡಾಕ್ಟರರು ಬಂದು ಜ್ವರವನ್ನಳೆದರು. ಸ್ವಲ್ಪ ಇಳಿದುಹೋಗಿತ್ತು. ಮತ್ತೊಂದು ಇಂಜಕ್ಶನ್ ಕೊಟ್ಟು ಡಾಕ್ಟರರು ಹೊರಗೆ ಹೋದರು. ಇನ್ನು ಕ್ರಮೇಣವಾಗಿ ಜ್ವರ ಇಳಿಯುವುದೆಂದು ಅವರಿಗೆನ್ನಿಸಿತ್ತು. ರೋಗ ಹಿಡಿತಕ್ಕೆ ಬಂದಿತೆಂದು ಅವರು ಹೇಳಿದಾಗ ಎಲ್ಲರಿಗೂ ಸಮಾಧಾನವಾಯಿತು.

ಆ ದಿನದ ಸಂಜೆಯೊಳಗಾಗಿ ೧೦೧ ಡಿಗ್ರಿಗಳಿಗಿಳಿದಿತ್ತು ಜ್ವರ. ಮರು ದಿನ ಬೆಳಿಗ್ಗೆ ಬರುವುದಾಗಿ ಹೇಳಿ ಡಾಕ್ಟರರು ಗೊಬ್ಬೂರಿಗೆ ಹೊರಟುಹೋದರು. ಅಂದು ರಾತ್ರಿಯಲ್ಲೂ ಸಾಕಷ್ಟು ನಿದ್ದೆ ಬಂತು.

ಮೂರನೆಯ ದಿನ ಜ್ವರವಿರಲಿಲ್ಲ. ನೆರೆದವರ ಗುರುತೂ ತಿಳಿಯ ತೊಡಗಿತು. ಎಲ್ಲರನ್ನೂ ಮಾತನಾಡಿಸಿದೆ.

ಫೌಜದಾರರೂ ಬಂದರು.

"ನನ್ನ ಮೇಲೆ ನಿಮ್ಮ ಉಪಕಾರ ಬಹಳವಾಯಿತು ರಾವ್‌ಸಾಹೇಬರೆ."

ಅವರು ಮಾತನಾಡಲಿಲ್ಲ. ಮೃದುವಾಗಿ ನನ್ನ ಕೈ ಹಿಡಿದು ಅದುಮಿದರು. ಒಂಭತ್ತು ದಿನಗಳ ಬವಣೆಯನ್ನೆಲ್ಲಾ ನಿಧಾನವಾಗಿ ವಿವರಿಸಿ ಹೇಳಿದರು.

"ನನ್ನ ಮೇಲೆ ಸಿಟ್ಟು ಮಾಡಿಕೊಂಡು ಹೊರಟು ಬಿಟ್ಟಿದ್ದಿರಿ ನೀವು. ದೇವರಿಗೆ ಅಪೀಲು ಮಾಡಿ ನಿಮ್ಮನ್ನುಳಿಸಿಕೊಂಡೆ!" ಎಂದು ಗೌಡರು ನಗೆಯಾಡಿದರು.

ಡಾಕ್ಟರು ಬಂದು, ಪರೀಕ್ಷಿಸಿ ನೋಡಿದರು. ಮತ್ತೊಮ್ಮೆ ಇಂಜಕ್ಶನ್ ಔಷಧಿಕೊಟ್ಟು, ಹಸಿವಾದಾಗ ಮೋಸಂಬಿಯ ರಸ ಕೊಡುವಂತೆ ಹೇಳಿ ಹೊರಟುಹೋದರು.

ಷಣ್ಮುಖಪ್ಪನೂ ಶಿವಮೊಗ್ಗೆಗೆ ಹೊರಟುನಿಂತ.

"ನೀವು ನೆಟ್ಟಗಾದಿರಿ – ದೇವರ ದಯದಿಂದ. ಅಂಗಡಿಯನ್ನು ಬಿಟ್ಟು ಬಹಳ ದಿನ ಇರುವಂತಿರಲಿಲ್ಲ. ನಾನು ಹೋಗುತ್ತೀನಿ. ಸುಮಿತ್ರೆಯ ಬಾಣಂತಿತನ ಇಲ್ಲೇ ಆಗುತ್ತದೆ. ಅವಳೂ ಇಲ್ಲೇ ಇರುತ್ತಾಳೆ."

ಅವನು ಹೊರಟುಹೋದ.

ಎಲ್ಲರೂ ನನ್ನೊಡನೆ ಮಾತನಾಡಿದರಾದರೂ ಸಾವಿತ್ರಿ ಮಾತ್ರ ಸುಮ್ಮನಿದ್ದಳು. ನಾನೇ ಅವಳನ್ನು ಕೂಗಿ ಮಾತನಾಡಿಸಿದೆ.

"ಏನು ಸಾವಿತ್ರೀ, ನೀನು ಇಷ್ಟು ದಿವಸ ಇಲ್ಲೇ ಇದ್ದಿಯಾ? ಮನೆಗೆ ಹೋಗಲೇ ಇಲ್ಲವೇನು? ನನ್ನಿಂದಾಗಿ ಬಹಳ ತೊಂದರೆಯಾಗಿರಬೇಕು ನಿನಗೆ. ಎಷ್ಟು ರಾತ್ರೆ ನಿದ್ದೆ ಮಾಡಿಲ್ಲವೋ ಏನೊ. ನನಗೀಗ ನೆಟ್ಟಗಾಯಿತಲ್ಲ. ನೀನು ಮನೆಗೆ ಹೋಗು. ನಿದ್ದೆಮಾಡು."

ಸಾವಿತ್ರಿ ಮರುಮಾತನಾಡಲಿಲ್ಲ. ಅವಳಿಗೆ ಅಳುವುಕ್ಕಿ ಬಂದಿತ್ತು. ನನಗೆ ಆಶ್ಚರ್ಯ. ಇವಳೇಕೆ ಅಳುತ್ತಿರುವಳು? ಇವಳ ಮನ ನೋಯುವಂಥ ಮಾತನ್ನೇನಾದರೂ ನಾನು ಆಡಿದೆನೇ ಹೇಗೆ?

"ಯಾಕೆ ಅಳುತ್ತೀ ಸಾವಿತ್ರೀ? ನನ್ನಿಂದ ಏನಾದರೂ ತಪ್ಪಾಗಿದೆಯೇ?"

ಅವಳ ಅಳು ನಿಲ್ಲಲಿಲ್ಲ.

"ಸಾವಿತ್ರೀ, ಇಲ್ಲಿ ಬಾ."

ಅವಳು ನನ್ನ ಬಳಿ ಬಂದಳು. ಕೈ ಹಿಡಿದು ನನ್ನ ತಲೆಯ ಹತ್ತಿರ ಕೂಡಿಸಿದೆ. ಅವಳ ಕಣ್ಣ ಹನಿಯೊಂದು ಜಾರಿ ನನ್ನ ಹಣೆಯ ಮೇಲೆ ಬಿತ್ತು. ತನ್ನ ಸೀರೆಯ ಸೆರಗಿನಿಂದ ಅದನ್ನೊರೆಸಿದಳು ಸಾವಿತ್ರಿ.

ನಾನು ತೀರಾ ನಿಶ್ಯಕ್ತನಾಗಿದ್ದೆ. ಕೈಯನ್ನು ಮೇಲಕ್ಕೆತ್ತಲು ಸಹ ಆಗುತ್ತಿರಲಿಲ್ಲ. ಅಂಥ ಸ್ಥಿತಿಯಲ್ಲಿ ಕೈಯೆತ್ತಿ ಸಾವಿತ್ರಿಯ ಕಂಬನಿಗಳನ್ನೊರೆಸಲು ಯತ್ನಿಸಿದೆ. ಅವಳು ನನ್ನ ಕೈಯನ್ನು ಕೆಳಗಿರಿಸಿ ತಾನೇ ಕಂಬನಿ ಮಿಡಿದುಕೊಂಡಳು.

"ಅಳಬೇಡ ಸಾವಿತ್ರೀ. ಅಳುವವರನ್ನು ಕಂಡರಾಗದು ನನಗೆ. ಎಲ್ಲರೂ ನಗುತ್ತಿದ್ದರೇ ನನಗೆ ಸಂತೋಷ."

ಸಾವಿತ್ರಿಯ ಮುಖಚರ್ಯೆಯಲ್ಲಿ ಬದಲಾವಣೆ ಕಾಣಿಸಿಕೊಂಡಿತು. ಅವಳ ತುಟಿಗಳ ಮೇಲೆ ಕ್ಷೀಣವಾದ ನಗು ಹರಿದಾಡತೊಡಗಿತು.

"ನೀವು ಉಳಿಯುವದೇ ಇಲ್ಲ ಅಂತ ತಿಳಿದಿದ್ದೆವು ನಾವೆಲ್ಲ."

"ಒಂದು ವೇಳೆ ನಾನು ಸತ್ತು ಹೋಗಿದ್ದರೂ ಏನಾಗುತಿತ್ತು? ಎಲ್ಲರೂ ಒಂದಿಲ್ಲೊಂದು ದಿನ ಸಾಯಲೇಬೇಕಲ್ಲವೆ? ಅದಕ್ಕೇಕೆ ಚಿಂತೆ? ಈಗ ನನಗೆ ನೆಟ್ಟಗಂತೂ ಆಯಿತಲ್ಲ. ಮತ್ತೇಕೆ ಅಳು ನಿನಗೆ?"

"ಯಾಕೋ ಗೊತ್ತಿಲ್ಲ. ನೀವು ಮಾತಾಡಿಸಿದ ಕೂಡಲೆ ಅಳು ಬಂತು. ನೀವು ಜ್ವರದಿಂದ ಚಡಪಡಿಸುತ್ತಿದ್ದಾಗಲೆಲ್ಲಾ ನನಗೆ ಅಳುವಂತೆ ಆಗುತ್ತಿತ್ತು. ಕಣ್ಣೀರು ಬರುತಿರಲಿಲ್ಲ. ಈಗ ಮಾತ್ರ ಬಂತು ಕಣ್ಣೀರು."

ಅವಳ ಕೈ ಬೆರಳುಗಳು ನನ್ನ ಕೈ ಬೆರಳುಗಳೊಡನೆ ಹೆಣೆದುಕೊಂಡಿದ್ದುವು. ನನ್ನ ಮನಸ್ಸಿಗೆ ಬಲು ಸಮಾಧಾನವೆನ್ನಿಸಿತ್ತು. ಅವಳ ಮುಖವನ್ನೇ ದಿಟ್ಟಿಸಿ ನೋಡಿದೆ. ಯಾವುದೋ ಗಹನ ಯೋಚನೆಯಲ್ಲಿ ತಲ್ಲೀನಳಾದ ಹಾಗಿತ್ತು ಸಾವಿತ್ರಿ. ನಾನು ಹಾಗೇ ದೃಷ್ಟಿ ಹೊರಳಿಸಿದಾಗ ಬಾಗಿಲಲ್ಲಿ ಸುಮಿತ್ರಾ ನಿಂತುಕೊಂಡಿದ್ದುದು ಕಾಣಿಸಿತು. ನಡೆದುದೆಲ್ಲವನ್ನೂ ಅವಳು ನೋಡಿರಬೇಕು, ನಮ್ಮ ಮಾತುಗಳನ್ನೂ ಆಲಿಸಿರಬೇಕು.

ಸುಮಿತ್ರೆಯನ್ನು ನೋಡುತ್ತಲೂ ಸಾವಿತ್ರಿ ಗಾಬರಿಗೊಂಡು ಎದ್ದುಬಿಟ್ಟಳು.

"ಏಳುತ್ತೀ ಯಾಕೆ? ಕೂತುಕೋ," ಎಂದಳು ಸುಮಿತ್ರಾ. ನನ್ನ ಮೈಯನ್ನು ಸ್ವಚ್ಛಗೊಳಿಸುವುದಕ್ಕಾಗಿ ಬಿಸಿನೀರು, ಅಂಗವಸ್ತ್ರಗಳನ್ನು ತಂದಿದ್ದಳಾಕೆ.

ಇಬ್ಬರೂ ಸೇರಿ ನನ್ನ ಅಂಗಿಯನ್ನು ತೆಗೆದು ಬಿಸಿನೀರಿನಿಂದ ಮೃದುವಾಗಿ ಮೈ ತೊಳೆದು ಅಂಗವಸ್ತ್ರದಿಂದೊರೆಸಿದರು. ನಾನು ಹಲ್ಲುಜ್ಜಿಕೊಂಡು ಬಾಯಿ ತೊಳೆದುಕೊಂಡೆ. ನನ್ನ ತಲೆಗೆ ಸ್ವಲ್ಪ ಎಣ್ಣೆ ಸವರಿ ಕೂದಲು ಬಾಚಿದಳು ಸುಮಿತ್ರಾ. ಮಡಿ ಅಂಗಿ, ಪಾಯಿಜಾಮ ಧರಿಸಿದೆ.

ಇನ್ನೂ ನಾಲ್ಕು ದಿನಗಳವರೆಗೆ ನಾನು ಹಾಸಿಗೆಯಿಂದೇಳಬಾರದೆಂದು ಡಾಕ್ಟರರು ಹೇಳಿ ಹೋಗಿದ್ದರು. ನನಗೆ ಮಾತ್ರ ಹಾಗೆ ಸೋಮಾರಿಯಂತೆ ಬಿದ್ದುಕೊಂಡಿರಲು ಇಷ್ಟವಿರಲಿಲ್ಲ. ಫೌಜದಾರರು ಬಂದಾಗ ಕೆಲಸದ ಪ್ರಸ್ತಾಪವೆತ್ತಿದೆ. ಅವರು ಕೋಪಿಸಿಕೊಂಡು,

"ನೀವು ಯಾವದನ್ನೂ ತಲೆಗೆ ಹಾಕಿಕೊಳ್ಳದೆ ಮೊದಲು ಗುಣಹೊಂದಬೇಕು. ಮನುಷ್ಯನ ಜೀವ ಹೆಚ್ಚೋ, ಕೆಲಸ ಹೆಚ್ಚೋ?" ಎಂದರು.

"ಸ್ವಲ್ಪ ಕಾಫಿ ತರಿಸುತ್ತೀರಾ ಸಾಹೇಬರೆ?"

ಕಾಫಿ ಸೇವಿಸುತ್ತಲೂ ನನಗೆ ಸ್ಫೂರ್ತಿ ಬಂದಂತಾಯಿತು.

"ಈಗಲೂ ಲವ್‌ಲೆಟರ್ಸ್ ಬರೆಯುತ್ತಿದ್ದೀರಲ್ಲವೆ ಸಾಹೇಬರೆ?"

"ಎಲ್ಲಿಯ ಲವ್‌ಲೆಟರ್ಸ್ ಮಾರಾಯಾ! ಈ ಹತ್ತು ದಿನ ನನಗೆ ಯಾವದೂ ಹೊಳೆಯಲಿಲ್ಲ."

"ನನಗಾಗಿ ನಿಮ್ಮ ಶ್ರೀಮತಿಯವರನ್ನು ನೀವು ಮರೆತದ್ದು ತಪ್ಪು."

"ಇವತ್ತು ಬರೀತೀನಿ. ಹೇಗಾಗುವದೋ ಏನೊ."

"ನಾನೂ ಎದ್ದು ಬಿಡುತೀನಲ್ಲ ನಾಳೆ ನಾಡದು!"

ಸಂಜೆ ಸಾವಿತ್ರಿ ತಮ್ಮ ಮನೆಗೆ ಹೋದಳು. ಒಳಗಡೆ ಗಂಗವ್ವ ಅಡುಗೆಗೆ ತೊಡಗಿದ್ದಾಗ ಸುಮಿತ್ರಾ ಬಂದು ನನ್ನ ಹತ್ತಿರ ಕುಳಿತಳು.

"ಸಾವಿತ್ರಿ ಇದೇ ಈಗ ಮನೆಗೆ ಹೋದಳು."

"ಹೌದೇನು? ಪಾಪ. ಅವಳಿಗೆ ಬಹಳ ತೊಂದರೆಯಾಯಿತು ಇಷ್ಟು ದಿವಸ."

"ತೊಂದರೆಯೆಂಥಾದ್ದು ಬಿಡಿರೀ. ನಿಮ್ಮ ಆರೈಕೆ ಅಂದರೆ ಬಹಳ ಪ್ರೀತಿ ಸಾವಿತ್ರಿಗೆ. ನೀವೇನು ಮಂತ್ರ ಹಾಕಿದ್ದೀರೋ ಅವಳಿಗೆ!"

"ಎಲ್ಲರಿಗೂ ಮಂತ್ರ ಹಾಕುತ್ತಾ ತಿರುಗಲು ನಾನೇನು ಜಾದೂಗಾರನೆಂತ ತಿಳಿದೀಯಾ?"

"ಜಾದೂಗಾರರೇ ಇರಬೇಕು. ಇಲ್ಲಾಂದರೆ ಸಾವಿತ್ರಿ ನಿಮ್ಮನ್ನು ಇಷ್ಟೇಕೆ ಹಚ್ಚಿಕೊಳ್ಳುತ್ತಿದ್ದಳು! ನೀವೂ ಒಳ್ಳೇ ಘಾಟಿ. ಅವಳ ಕೈ ಹಿಡಿದೇ ಬಿಟ್ಟಿದ್ದಿರಲ್ಲ!"

"ನಾನೇನು ಬೇಕೆಂತ ಹಿಡಿಯಲಿಲ್ಲ. ಅವಳು ನನ್ನ ತಲೆ ಒತ್ತುತ್ತಿದ್ದಳು. ಹಾಗೇ ಸಹಜವಾಗಿ ಕೈಗೆ ಕೈ ಕೂಡಿರಬಹುದು. ನನಗೇನು ಬೇರೆ ವಿಚಾರ ಇರಲಿಲ್ಲ."

"ಹೂಂ! ಬೇರೇ ವಿಚಾರವಿರಲಿಲ್ಲ! ಪಾಪ! ಯಾರಾದರೂ ನಂಬಬಹುದೇನು ಇಂಥಾ ಮಾತನ್ನ! ಅವಳು ಹರಯದಾಕೆ. ಗಂಡನಿಲ್ಲದಾಕೆ. ನೀವೂ ಹರಯದವರೇ. ನೀವು ಹಾಗೆ ಅವಳ ಕೈ ಹಿಡಿದಾಗ ಅವಳ ಮನಸ್ಸಿನಲ್ಲಿ ಎಂಥಾ ವಿಚಾರ ಬಂದಿದ್ದೀತು!"

"ಯಾರ್‍ಯಾರ ಮನಸ್ಸಿನಲ್ಲಿ ಯಾವ್ಯಾವ ವಿಚಾರ ಬರುವದೆಂದು ಹೇಳಲು ನಾನೇನು ದೇವರಲ್ಲ."

"ಮತ್ತೆ ದೇವರ ಮಾತು. ಪಾಪ. ಅವನಿಗೇನು ಗೊತ್ತಾಗುತ್ತೆ! ನನಗೆಲ್ಲಾ ಗೊತ್ತು ನಿಮ್ಮ ಸೋಗು. ಈ ತಾಪ ಈ ಜ್ವರ ಎಲ್ಲದಕ್ಕೂ ಕಾರಣ ಅದೇ. ಈ ಎಂಟು ಹತ್ತು ದಿನಗಳ ನಿಮ್ಮ ಸಹವಾಸದಿಂದ ಅವಳು ನಿಮ್ಮ ಬಗ್ಗೆ ಹುಚ್ಚಿಯಾಗಿದ್ದಾಳೆ."

"ಎಲ ಎಲಾ! ನನಗೇನೂ ಗೊತ್ತಿಲ್ಲವಲ್ಲಾ! ನಿನ್ನ ಮುಂದೆ ಹೇಳಿಬಿಟ್ಟಳೇ ಇದನ್ನೆಲ್ಲ?"

"ನೀವು ಅವಳಿಗೆ ಮನೆಗೆ ಹೋಗು ಅಂತ ಅಂದಿರೇನು! ಪಾಪ, ಅವಳು ಕಣ್ಣೀರು ಹಾಕಿದಳು."

"ಇನ್ನೇನು ಕೆಲಸ ಅವಳದು ಇಲ್ಲಿ? ನನಗಂತೂ ನೆಟ್ಟಗಾಯಿತು.

ಈಗಲೂ ಅವಳು ಇಲ್ಲೇ ಇದ್ದರೆ ಮಂದಿ ಏನಂದಾರು? ಸಾವಿತ್ರಿಗೂ ನನಗೂ ಸಂಬಂಧವಿದೆಯೆಂದು ಮಾತಾಡಹತ್ತಿದರೆಂದರೆ ಅವಳಿಗೇ ತೊಂದರೆಯಲ್ಲ ವೇನು? ಅದಕ್ಕೇ ನಾನು ಅವಳಿನ್ನು ಇಲ್ಲಿಗೆ ಬರುವದು ಬೇಡಾ ಅಂದದ್ದು."

"ಅವಳು ನಮ್ಮ ಮನೆಗೆ ಬರುತ್ತಾಳೆ. ನಿಮ್ಮ ಹತ್ತರ ಅಲ್ಲ."

"ಸರಿ ಹಾಗಾದರೆ. ನಾನು ಫೌಜದಾರರ ಮನೆಗೆ ಹೋಗುತ್ತೀನಿ."

"ಹೋಗಿರಿ. ಈಗಲೇ ಹೋಗಿರಿ. ಹೊಳೀ ದಾಟಿದ ಮೇಲೆ ಅಂಬಿಗನ ಮಿಂಡ. ಈಗ ನಿಮಗೆ ನೆಟ್ಟಗಾಯಿತು. ತೀರಿತು. ಇನ್ನು ಯಾರು ಯಾತಕೆ ಬೇಕು ನಿಮಗೆ? ನಾನೂ ಬೇಡಾ. ಸಾವಿತ್ರಿಯೂ ಬೇಡಾ. ಆದರೆ ನಾವು ಬಿಟ್ಟೆರಲ್ಲವೇ ನೀವು ಹೋಗುವದು? ನೀವು ಪೋಲೀಸರು. ಮಾತೆತ್ತಿದರೆ ಕಾಯದೆ ಕಾನೂನು ಅನ್ನುವವರು. ನಮಗೇನು ಅದೆಲ್ಲಾ ತಿಳಿಯುವದಿಲ್ಲ. ಸಾವಿತ್ರಿ ನಿಮ್ಮವಳಾಗಿದ್ದಾಳೆ. ಅವಳನ್ನೊಂದು ಹಾದಿಗೆ ಹಚ್ಚುವದು ನಿಮ್ಮ ಜವಾಬ್ದಾರಿ. ಅವಳ ಮನಸ್ಸು ನೋಯಿಸಬೇಡಿರಿ."

"ಅಂದರೆ? ನಾನೇನು ಅವಳ ಸಂಗಡ ಚಕ್ಕಂದವಾಡುತಾ ಕೂಡ ಬೇಕೇ? ಗಂಡನಿಲ್ಲದ ಹುಡುಗಿ ಅವಳು. ಗಂಡ ಸಿಗುವದು ಯಾವಾಗಲೋ ಏನೊ. ನಾನು ಅವಳೊಡನೆ ಸರಸವಾಡುವದೇ! ಛೆ!"

"ನಾನೇನು ಹಾಗೆ ಹೇಳಲಿಲ್ಲ. ಅವಳ ಮನಸು ನೋಯಿಸಬೇಡಿರಿ ಅಂತ ಹೇಳುತ್ತೀನಿ, ಅಷ್ಟೆ. ಪಾಪ, ಇಂಥಾ ಹರಯದಲ್ಲಿ ಅವಳು ಏಕಾಂಗಿನಿ. ವಿಧವೆ. ಹಣೆಯ ಮೇಲೆ ಕುಂಕುಮವಿಲ್ಲ. ಗಂಡಸರನ್ನು ನೋಡಬಾರದು. ಅವಳಿಗೂ ಸುಖ ಬೇಡವೇನು?"

"ಬೇಡವೆಂತ ಯಾರು ಹೇಳಿದರು? ನಿನ್ನ ಮಾತಿನ ಅರ್ಥವೇ ಆಗುವದಿಲ್ಲ ನನಗೆ. ಹೇಳುವದನ್ನು ಸ್ಪಷ್ಟವಾಗಿ ಹೇಳಬಾರದೇ?"

"ಇನ್ನೇನು ಹೇಳುವದು ನಿಮಗೆ ಸ್ಪಷ್ಟವಾಗಿ? ಅವಳಿಗೊಬ್ಬ ಗಂಡನ್ನ ಹುಡುಕಿಕೊಡಿರಿ ಅಂತೀನಿ."

ಮನೆಗೆ ಹೋಗಿದ್ದ ಸಾವಿತ್ರಿ ಮರಳಿ ಬಂದ ಹಾಗಿತ್ತು. ಸುಮಿತ್ರಾ ಮಾತು ನಿಲ್ಲಿಸಿದಳು.

ಸ್ನಾನಮಾಡಿ ಮಡಿ ಸೀರೆಯುಟ್ಟುಕೊಂಡು ಬಂದಿದ್ದ ಸಾವಿತ್ರಿ ಕೊಠಡಿ ಯಲ್ಲಿ ಅಡಿಯಿರಿಸಿದಳು. ಎಂಟು ದಿನಗಳಿಂದಲೂ ಅವಳು ಸ್ನಾನ ಮಾಡಿರಲಿಲ್ಲ.

ತಲೆ ಬಾಚಿಕೊಂಡಿರಲಿಲ್ಲ. ಸರಿಯಾಗಿ ಊಟ ಮಾಡಿರಲಿಲ್ಲ. ಹಳ್ಳಿಯ ಜನರ ಮುಗ್ಧತೆಯೆಂದರೇನೇ ಅಂಥಾದ್ದು.

"ಬಾ ಸಾವಿತ್ರೀ! ಒಳ್ಳೆ ಡೌಲಾಗಿ ಬಂದೆಯಲ್ಲ!" ಎಂದು ನಗುತ್ತ ನುಡಿದಳು ಸುಮಿತ್ರಾ.

ಸಾವಿತ್ರಿ ಕುಲುಕುಲು ನಗುತ್ತಿದ್ದಳು. ನಾನು ರೆಪ್ಪೆ ಹೊಡೆಯದೆ ಅವಳನ್ನೇ ದಿಟ್ಟಿಸುತ್ತಿದ್ದೆ. ಅಂದು ಆವಳು ಬಲು ಚೆಲುವೆಯಾಗಿ ಕಾಣಿಸುತ್ತಿದ್ದಳು. ಸುಮಿತ್ರೆಯೂ ಚೆಲುವೆಯೇ. ಅವರಿಬ್ಬರಲ್ಲಿ ಹೆಚ್ಚು ಚೆಲುವೆಯಾದವಳಾರೆಂದು ನಿರ್ಣಯಿಸುವುದು ಕಠಿಣವಾಗಿತ್ತು.

"ಏನು ಸಾವಿತ್ರೀ, ಇಂದು ಸ್ನಾನ ಮಾಡಿದೆಯಲ್ಲವೆ? ಊಟವಾಯಿತೇ?"

"ಹೌದು."

"ಅಂತೂ ನಾನು ನಿಮ್ಮನ್ನು ಎಂಟೆಂಟು ದಿವಸ ಉಪವಾಸವಿಟ್ಟೆ ಅಲ್ಲವೆ!"

"ನೀವೂ ಉಪವಾಸವಿದ್ದಿರಲ್ಲ!" ಎಂದು ನುಡಿದು ಸಾವಿತ್ರಿ ನಕ್ಕಳು.

"ನಾನೆಲ್ಲಿ ಉಪವಾಸವಿದ್ದೆ" ಹೊಟ್ಟೆ ತುಂಬುವಷ್ಟು ಔಷಧ ಕುಡೀತಿದ್ದೆನಲ್ಲ!"

ಅವರಿಬ್ಬರೂ ನಕ್ಕರು.

ರಾತ್ರಿಯಾಗುತ್ತ ಬಂದಿತ್ತು.

"ಊಟ ಮಾಡು ಹೋಗು ಸುಮಿತ್ರಾ. ನೀನೂ ಹೋಗು ಸಾವಿತ್ರೀ."

"ಮತ್ತೆ ನೀವು?"

"ನನ್ನ ಊಟ ಅಂದರೆ ಮೋಸಂಬೀರಸ–ಕಾಫೀ. ನಿಮ್ಮ ಊಟ ಮುಗಿದ ಮೇಲೆ ನನ್ನ ಊಟ!"

"ಹಾಗೆ ಹ್ಯಾಗಾದೀತು? ನಿಮ್ಮ ಊಟ ಮುಗಿದ ಮೇಲೆ ನಮ್ಮ ಊಟ!"

"ಎಲ್ಲರೂ ಕೂಡೇ ಮಾಡಿವರೆ!" ಎಂದಳು ಸುಮಿತ್ರಾ.

"ಏನು, ಈ ಕೋಣೆಯಲ್ಲೇ?"

"ಹೌದು. ಯಾಕಾಗಬಾರದು?"

"ಸರಿ ಹೋಯಿತು, ನೀವಿಬ್ಬರೂ ಇನ್ನೂ ಕಂದಮ್ಮಗಳೇನ್ರೇ, ನನ್ನ ಜೊತೆಗೇ ಕೂತು ಊಟ ಮಾಡಲಿಕ್ಕೆ!"

ಅವರು ನಗುತ್ತಾ ಒಳಗೆ ಹೋದರು.

೮

## ಸಾವಿತ್ರಿಯೊಡನೆ ಸರಸ

ಹಣ್ಣಿನ ರಸ ಸೇವಿಸಿ, ಕಾಫಿ ಕುಡಿದು ನಾನು ಮಲಗಿಕೊಂಡೆ. ಗದಗವ್ವ, ಸಾವಿತ್ರಿ, ಸುಮಿತ್ರಾ ಊಟ ಮುಗಿಸಿಕೊಂಡು ಬಂದು ಕೆಲಹೊತ್ತು ನನ್ನ ಹತ್ತಿರ ಕುಳಿತು ಮಾತನಾಡುತ್ತಿದ್ದರು. ಹೊತ್ತು ಬಹಳವಾಗುತ್ತಲೂ ಸುಮಿತ್ರಾ ಮತ್ತು ಅವಳ ತಾಯಿ ಎದ್ದು ಹೊರಟರು.

" ಇವರಿಗೆ ರಾತ್ರಿ ಏನಾದರೂ ಬೇಕಾಗಬಹುದು. ನೀನೂ ಇಲ್ಲೇ ಮಲಗಿಕೊಂಡಿರು ಸಾವಿತ್ರೀ," ಎಂದಳು ಸುಮಿತ್ರಾ.

ಸಾವಿತ್ರಿ ತನ್ನ ಹಾಸಿಗೆಯನ್ನು ತಂದು ನನ್ನಿಂದ ನಾಲ್ಕು ಮೊಳದೂರದಲ್ಲಿ ಹಾಸಿದಳು.

" ದೀಪ ಆರಿಸಿಬಿಡು ಸಾವಿತ್ರೀ," ಎಂದೆ.

ದೀಪ ಆರಿಹೋಯಿತು.

ನನಗೆ ನಿದ್ದೆ ಬರುವಂತಿರಲಿಲ್ಲ. ಅವಳೂ ಹಾಸಿಗೆಯಲ್ಲಿ ಅತ್ತಿತ್ತ ಹೊರಳಾಡುತ್ತಿದ್ದಳು.

ಹಾಗೆ ಒಂದು ಗಂಟೆ ಕಳೆದಿರಬಹುದು. ಒಳಗೆ ಎಲ್ಲರಿಗೂ ನಿದ್ದೆ ಹತ್ತಿದ ಹಾಗಿತ್ತು.

ನಾನು ಮೆಲ್ಲಗೆ " ಸಾವಿತ್ರೀ," ಎಂದೆ.

" ಏನು ?"

" ನಿದ್ದೆ ಬರಲಿಲ್ಲವೆ ?"

" ಇಲ್ಲ."

" ಯಾಕೆ ಬರಲಿಲ್ಲ?"

" ಯಾಕೋ. ನಿಮಗ್ಯಾಕೆ ಬಂದಿಲ್ಲ?"

" ಕಾಫಿ ಕುಡೀಬಾರದಾಗಿತ್ತು. ಕಾಫಿ ಕುಡಿದರೆ ನಿದ್ದೆ ಬರುವದಿಲ್ಲ."

" ನಿದ್ದೆ ಮಾಡಿರಿ. ನಿಮಗೆ ನಿದ್ದೆ ಬಂದಷ್ಟು ಒಳ್ಳೆಯದೆಂದು ಡಾಕ್ಟರರು ಹೇಳಿದ್ದಾರೆ."

" ಡಾಕ್ಟರರು ಹೇಳಿದ ಮಾತ್ರಕ್ಕೆ ನಿದ್ದೆ ಬರುವದೇ ಸಾವಿತ್ರೀ?"

" ಪ್ರಯತ್ನ ಮಾಡಬೇಕು."

" ನೋಡೋಣ. ಇಲ್ಲಿ ಬಾ."

" ಯಾಕೆ?"

" ಬಾ. ಸ್ವಲ್ಪ ತಲೆಯ ಮೇಲೆ ಕೈ ಇಡು. ನಿದ್ದೆ ಬರುತ್ತದೆ."

" ನಾನೊಲ್ಲೆ ತಾಯಿಾ!"

" ಹಾಗಾದರೆ ಸುಮಿತ್ರೆಯನ್ನು ಕರೆ. ಅವಳು ನನ್ನ ಮಲಗಿಸುವಳು."

" ಅವಳಿಗೆ ನಿದ್ದೆ ಹತ್ತಿರಬೇಕು."

" ಹಾಗಾದರೆ ನೀನೇ ಬಾರಲ್ಲ!"

ಅವಳು ಏಳುತ್ತಿದ್ದುದರ ಸದ್ದು ಕೇಳಿಸಿತು. ಕತ್ತಲಲ್ಲೇ ಕೈಯೂರುತ್ತಾ ಬಂದು ನನ್ನ ಹಣೆಯನ್ನು ಸ್ಪರ್ಶಿಸಿದಳು. ಅವಳ ಕೈಯನ್ನು ಹಿಡಿದುಕೊಂಡು,

" ಇಲ್ಲೇ ಮಲಗಿಕೊಂಡುಬಿಡು ಸಾವಿತ್ರೀ," ಎಂದೆ.

" ಒಲ್ಲೆ, ಒಲ್ಲೆ," ಎನ್ನುತ್ತಾ ಅವಳು ನನ್ನ ಮಗ್ಗುಲಲ್ಲಿ ಮಲಗಿಕೊಂಡಳು. ನಾನು ಅವಳ ಶರೀರಕ್ಕೆ ಅಂಟಿಕೊಂಡೆ. ಅವಳ ಮುಖವೂ ನನ್ನ ಮುಖವೂ ಹತ್ತಿರ ಹತ್ತಿರ ಬಂದಿದ್ದುವು. ಅವಳ ಕೈ ನನ್ನ ಮೇಲೆ. ಇಬ್ಬರ ಉಸಿರೂ ಎದ್ದೆದ್ದು ಬೀಳುತ್ತಿತ್ತು. ಎದೆ ಹಾರುತ್ತಿತ್ತು.

" ನಾಚಿಕೆಯಾಗುವದೇನೇ ಸಾವಿತ್ರಿ?"

" ನಾಚಿಕೆಯಾಕೆ?"

" ಹೀಗೆ ನನ್ನ ಸಂಗಡ ಮಲಗಿದ್ದಕ್ಕೆ?"

" ನೀವು ರೋಗಿ. ನಿಮ್ಮ ಸಂಗಡ ಮಲಗಲು ನಾಚಿಕೆಯಾಕಾಗಬೇಕು? ನಿಮಗೆ ನಿದ್ದೆ ಬರದಿದ್ದರೆ ಮತ್ತೆ ಜಡ್ಡು ಬರಬಹುದು. ಅದಕ್ಕೇ ನಿದ್ದೆ ಬರಲಿ ಅಂತ ಮಲಗಿದ್ದೀನಿ."

"ಅಬ್ಬಾ! ಎಷ್ಟು ಗಟ್ಟಿಯಾಗಿದ್ದೀಯಲ್ಲ! ನಾನು ರೋಗಿ. ತಬ್ಬಿಕೊಂಡು ಮಲಗುವುದಕ್ಕಿಂತ ಹೆಚ್ಚೇನೂ ಮಾಡಲಾರೆ ಅಂತಲೇ ಹೀಗೆ ಮಲಗಿದ್ದೀ. ನನಗೆ ಪೂರಾ ನೆಟ್ಟಗಾದ ಮೇಲೆ?"

ಅವಳು ಮೌನವಾಗಿದ್ದಳು; ಎಳೆಮಕ್ಕಳ ಮೈ ತಟ್ಟುವಂತೆ ನನ್ನ ಮೈ ತಟ್ಟುತ್ತಿದ್ದಳು. ಹಾಗೆ ಒಂದು ಗಂಟೆಯಷ್ಟು ಸಮಯ ಕಳೆದಿರಬಹುದು. ನನಗೆ ನಿದ್ದೆ ಬರತೊಡಗಿತು.

ಸಾವಿತ್ರಿ ಎದ್ದು ತನ್ನ ಹಾಸಿಗೆಗೆ ಹೋದಳು.

ಬೆಳಗಿನ ಎಂಟು ಗಂಟೆಗೆ ಎಚ್ಚರವಾಯಿತು. ಕೊಠಡಿಯಲ್ಲಿ ಯಾರೂ ಇರಲಿಲ್ಲ. ಸುಮಿತ್ರೆಯನ್ನು ಕೂಗಿ, ಪ್ರಾತರ್ವಿಧಿ ಮುಗಿಸಿ ಕಾಫಿ ಸೇವಿಸಿದೆ. ಬಟ್ಟೆಗಳನ್ನು ಬದಲಿಸಿದೆ.

ಫೌಜದಾರರ ಜೊತೆಗೇ ಡಾಕ್ಟರೂ ಬಂದರು.

ಮತ್ತೆ ದೇಹ ಪರೀಕ್ಷೆ. ಚೇತರಿಸಿಕೊಳ್ಳಲು ಸೂಜಿ ಮದ್ದು.

ಡಾಕ್ಟರರಿಗೆ ಕೊಡುವುದಕ್ಕೆಂದು ಎರಡು ನೂರು ರೂಪಾಯಿ ತರಿಸಿ ನನ್ನ ತಲೆದಿಂಬಿನ ಕೆಳಗೆ ಇಟ್ಟುಕೊಂಡಿದ್ದೆ. ಅವುಗಳನ್ನು ಅವರ ಕೈಗೆ ಹಾಕಿ,

"ಸದ್ಯ ಇಷ್ಟು ತಕ್ಕೊಳ್ಳಿರಿ. ನನಗೆ ಪೂರಾ ನೆಟ್ಟಗಾಗುತ್ತಲೂ ಬಾಕೀ ಬಿಲ್ಲು ಮುಟ್ಟಿಸುವೆ. ನನ್ನ ಜೀವವುಳಿಸಿ ಪುಣ್ಯ ಕಟ್ಟಿಕೊಂಡಿರಿ. ನಿಮ್ಮ ಉಪಕಾರವನ್ನೆಂದೂ ಮರೆಯಲಾರೆ," ಎಂದು ಹೇಳಿದೆ.

ಅದಕ್ಕೆ ಮೊದಲೇ ಫೌಜದಾರರೂ ಡಾಕ್ಟರರಿಗೆ ಸ್ವಲ್ಪ ಹಣ ಕೊಟ್ಟಿದ್ದರು.

"ಇನ್ನೂ ಹದಿನೈದು ದಿವಸ ಔಷಧ ತೆಗೆದುಕೊಳ್ಳಬೇಕು. ಆಮೇಲೆ ನೀವು ಪೂರಾ ನೆಟ್ಟಗಾದಂತೆ. ನಾನೇನು ಇನ್ನು ಬರುವದಿಲ್ಲ."

"ಅಪ್ಪಣ್ಣ ದಿನಾಲು ಹೋಗಿ ಔಷಧ ತರುತ್ತಾನೆ," ಎಂದರು ಫೌಜದಾರರು.

ಅಂದಿನಿಂದ ನಾನು ಕ್ರಮೇಣವಾಗಿ ಚೇತರಿಸಿಕೊಳ್ಳತೊಡಗಿದೆ. ಕೊಠಡಿಯಲ್ಲೇ ಶತಪಥ ಹಾಕುತ್ತಿದ್ದೆ. ಅನ್ನ-ಹಾಲು ಸ್ವೀಕರಿಸಲೂ ಆರಂಭಿಸಿದೆ. ಸಾವಿತ್ರಿ ಮಾತ್ರ ತನ್ನ ಕೆಲಸ ಬಿಟ್ಟಿರಲಿಲ್ಲ. ನನ್ನ ಮಗ್ಗುಲಲ್ಲಿ ಮಲಗಿಕೊಂಡಿರಲಿಲ್ಲ, ಅಷ್ಟೆ.

ಸುಮಿತ್ರೆಯ ಹೆರಿಗೆಯ ದಿನ ಸಮೀಪಿಸುತ್ತಿತ್ತು. ಮೊದಲಿನಂತೆ ಅವಳು

ಓಡಾಡುವಂತಿರಲಿಲ್ಲ. ಅವಳನ್ನೂ ನೋಡಿಕೊಳ್ಳುವ ಭಾರ ಸಾವಿತ್ರಿಯ ಮೇಲೆ ಬಿದ್ದಿತ್ತು.

ಹದಿನೈದು ದಿನಗಳ ತರುವಾಯ ನಾನು ಹೊರಗಡೆ ತಿರುಗಾಡುವಂತಾಯಿತು. ಫೌಜದಾರರು ಹಳ್ಳಿಗಳನ್ನು ಸುತ್ತುತ್ತಿದ್ದರು. ನಾನೂ ಬರುವೆನೆಂದಾಗ ಈಗಲೇ ಬೇಡವೆಂದು ಹೇಳಿದರು. ನನಗೆ ಬಲು ಬೇಸರವಾಗಿತ್ತು. ಹೊತ್ತು ಕಳೆಯುವುದಾದರೂ ಹೇಗೆ? ಗೊಬ್ಬೂರಿನಿಂದ ಒಂದೆರಡು ಕಾದಂಬರಿಗಳನ್ನು ತರಿಸಿ ಓದತೊಡಗಿದೆ.

ಒಂದು ಮಧ್ಯಾಹ್ನ ನಾನು ಕೊಠಡಿಯಲ್ಲಿ ವಿರಾಮಕುರ್ಚಿಯಮೇಲೊರಗಿ ಕಾದಂಬರಿಯನ್ನೋದುತ್ತಿದ್ದ ಹಾಗೆ ಸಾವಿತ್ರಿ ಬಂದಳು. ಅಂದು ಉಜ್ಜಪ್ಪನವರು ಊರಲ್ಲಿರಲಿಲ್ಲ. ಗಂಗವ್ವ ಅಂಗಡಿಯಲ್ಲಿದ್ದಳು. ಸುಮಿತ್ರಾ ತನ್ನ ಕೊಠಡಿಯಲ್ಲಿ ಮಲಗಿಕೊಂಡಿದ್ದಳು.

ಸಾವಿತ್ರಿ ಕೊಠಡಿಯಲ್ಲಿ ಕಾಲಿರಿಸುತ್ತಲೂ ಅಂದು ಅವಳನ್ನು ಎಳೆದುಕೊಳ್ಳುವುದೆಂದು ನಾನು ಮನಸ್ಸಿನಲ್ಲೇ ನಿಶ್ಚಯಿಸಿಕೊಂಡು, ಅವಳು ಬಂದುದನ್ನೇ ಗಮನಿಸದಿದ್ದಂತೆ ನಟಿಸುತ್ತಿದ್ದೆ. ಪುಸ್ತಕದ ಮೇಲೆ ಕಣ್ಣು. ಸಾವಿತ್ರಿಯ ಹೆಜ್ಜೆಗಳ ಕಡೆ ಕಿವಿ. ಅವಳು ಸಮೀಪ ಬರದೆ ದೂರ ನಿಂತುಕೊಂಡೇ ಹೇಳಿದಳು.

"ಇಂದು ನಿಮ್ಮನ್ನು ಊಟಕ್ಕೆ ಕರೆದುತರಬೇಕೆಂದು ಅಪ್ಪ ಅವ್ವ ಹೇಳಿದ್ದಾರೆ."

"ಸಾಕು. ಆಗ ಒಮ್ಮೆ ಬಂದು ಒಂದು ತಿಂಗಳು ನರಳಿದ್ದಾಯಿತು. ಈಗ ಮತ್ತೆ ಬಂದರೆ ಮತ್ತೊಂದು ತಿಂಗಳು ನರಳಬೇಕಾಯಿತು!"

"ಅಂದು ನೀವು ಅಷ್ಟೇಕೆ ತಿಂದಿರಿ? ತುಸು ಕಡಿಮೆ ತಿಂದಿದ್ದರೆ ಜಡ್ಡು ಬರುತಿರಲಿಲ್ಲ."

"ನೀನೇಕೆ ಹೆಚ್ಚು ನೀಡಿದೆ? ನಾನು ಬೇಡ ಬೇಡಾಂದರೂ ಒತ್ತಾಯ ಮಾಡಿ ಉಂಡೆ ತಿನ್ನಿಸಿದಿಯಲ್ಲ! ಅದಕ್ಕೇ ನಿನಗೂ. ಒಂದು ತಿಂಗಳು ಶಿಕ್ಷೆ ಸಿಕ್ಕಿತು!"

"ನಿಮ್ಮಿಬ್ಬರ ಹುಡುಗಾಟದಲ್ಲಿ ಊರವರಿಗೆಲ್ಲಾ ನಿದ್ದೆಯಿಲ್ಲದೆ ಶಿಕ್ಷೆಯಾಯಿತು." ಕೊಠಡಿಯಲ್ಲಿ ಅಡಿಯಿಡುತ್ತಾ ಹೇಳಿದಳು ಸುಮಿತ್ರಾ.

"ಏನು ಸಾವಿತ್ರೀ, ಸರದಾರರ ಕೂಡ ಬಡಿದಾಡಿದಂತೆ ಬಾಗಿಲಲ್ಲೇ ನಿಂತಿದ್ದೀಯಲ್ಲಾ!" ಇವರು ಕುರ್ಚಿಯ ಮೇಲೆ ಕೂತು ಓದುತ್ತಾರೆ. ನೀನು ನಿಂತಿದ್ದೀ. ಅವರಿಗೆ ಜಡ್ಡಾದಾಗ ಹಗಲು ರಾತ್ರಿ ಇಲ್ಲೇ ಇರುತ್ತಿದ್ದಿ. ಈಗ ಮಾತ್ರ ನಾಚಿಕೆಯೇನು? ಬಾ ಇಲ್ಲಿ. ಕುರ್ಚಿಯ ಮೇಲೆ ಕೂಡು," ಎನ್ನುತ್ತಾ ಅವಳನ್ನೆಳೆದು ತಂದು ಕುರ್ಚಿಯ ಮೇಲೆ ಕೂಡಿಸಿದಳು ಸುಮಿತ್ರಾ. ತಾನೂ ಒಂದು ಕುರ್ಚಿಯನ್ನೆಳೆದು ಠೀವಿಯಿಂದ ಕುಳಿತುಕೊಂಡು,

"ಅಲ್ರೀ, ಸರದಾರರೆ, ನಮ್ಮ ಸಾವಿತ್ರಿಯನ್ನು ನೀವೇ ಯಾಕೆ ಮದುವೆ ಯಾಗಬಾರದು?" ಎಂದಳು.

"ಹೌದೇ ಬಿನ್ನಾಣಗಿತ್ತಿ! ನಾನು ಇವಳನ್ನು ಕಟ್ಟಿಕೊಂಡರೆ ಮೊದಲನೆ ಯವಳು ಎಲ್ಲಿಗೆ ಹೋಗಬೇಕೇ?"

"ಇರುತ್ತಾಳಲ್ಲ ಅವಳೂ! ನನಗೆ ಸವತಿಯಲ್ಲವೇನು? ಇಬ್ಬರೂ ಅಕ್ಕ ತಂಗಿಯರ ಹಾಗೇ ಇದ್ದೀವಿ."

"ಅವಳು ಹಾಸಿಗೆಬಿಟ್ಟು ಎದ್ದಿಲ್ಲ. ಈಗೇನೋ ಎಲ್ಲಾ ಚೆನ್ನಾಗಿದೆ. ಅವಳು ಎದ್ದಳು ಅಂದರೆ ಗೊತ್ತಾಗುತ್ತದೆ ಅಕ್ಕ ತಂಗಿಯರ ಪ್ರೀತಿ!"

"ನಿಮ್ಮ ಸಂಗಡ ಮಾತಾಡಿ ಗೆದಿಯುವದು ನಮ್ಮಿಂದ ಸಾಧ್ಯವೇ? ಸಾವಿತ್ರಿಯೇ ನಿಮ್ಮನ್ನು ಸೋಲಿಸಿದರೆ ಸೈ. ಏನೇ ಸಾವಿತ್ರೀ?"

"ನನ್ನಿಂದಾಗದ ಮಾತವ್ವಾ ಅದು!" ಎಂದಳು ಸಾವಿತ್ರಿ.

"ನೀವಿಬ್ಬರೂ ಜೋಡಿಯಾಗಿ ನನ್ನನ್ನು ಸೋಲಿಸಲು ಬಂದಿದ್ದೀರಿ. ಸರಿ. ನಾನೇ ಸೋಲುತ್ತೇನೆ."

"ಸೋತವರು ಗೆದ್ದವರ ಮಾತು ಕೇಳಬೇಕು," ಎಂದು ನಗುತ್ತಾ ನುಡಿದು ಸುಮಿತ್ರೆ ನಮ್ಮಿಬ್ಬರನ್ನೇ ಅಲ್ಲಿ ಬಿಟ್ಟು ಹೊರಟು ಹೋದಳು.

ನಾನು ಥಟ್ಟನೆದ್ದು ಬಾಗಿಲು ನೂಕಿದೆ. ಸಾವಿತ್ರಿಗೆ ಅರ್ಥವಾಯಿತು. ಅವಳು ಓಡಿಹೋಗಲೆತ್ನಿಸಿದಳು. ನಾನು ಅವಳನ್ನು ಬಿಡದೆ ಹಿಡಿದುಕೊಂಡು ಮುದ್ದಿಸಿದೆ.

ಸಾಯಂಕಾಲ ರುದ್ರಪ್ಪನೇ ಬಂದು ಊಟಕ್ಕೆ ಕರೆದೊಯ್ದ. ಅಂದು ನಾನು ಹೆಚ್ಚು ಊಟ ಮಾಡಲಿಲ್ಲ. ಅನ್ನ–ಹಾಲು ಉಂಡು ಎದ್ದುಬಿಟ್ಟೆ. ಅವರೂ ಬಲವಂತ ಮಾಡಲಿಲ್ಲ.

ನಾನು ಮನೆಗೆ ಬಂದಾಗ ಸುಮಿತ್ರಾ ಒಂದು ಹೂವು ಹಿಡಿದುಕೊಂಡು ಬಂದು,

“ಈ ಹೂವು ಯಾರದು? ನಿಮ್ಮ ಹಾಸಿಗೆಯಲ್ಲಿ ಹ್ಯಾಗೆ ಬಂತು?” ಎಂದು ಕೇಳಿದಳು.

“ನನಗೇನು ಗೊತ್ತು? ನಿನ್ನದೇ ಇರಬೇಕು.”

“ನನ್ನದು ನಿಮ್ಮ ಹಾಸಿಗೆಯಲ್ಲಿ ಹ್ಯಾಗೆ ಬೀಳುತ್ತದೆ?”

“ನಾನು ಊಟಕ್ಕೆ ಹೋದಾಗ ನೀನು ಬಂದು ಇಲ್ಲಿ ಬಿದ್ದುಕೊಂಡಿರಬಹುದು.”

“ಅದೆಲ್ಲಾ ನಡೆಯುವದಿಲ್ಲ ಬಿಡಿರೀ ನನ್ನ ಮುಂದೆ. ಗೊತ್ತು ನನಗೆಲ್ಲಾ.”

“ಬಲೇ ಗೊತ್ತು!”

“ನಿಜ ಹೇಳುವಿರೋ, ಇಲ್ಲಾ, ನಾನು ಸಾವಿತ್ರಿಯನ್ನೇ ಕೇಳಲೋ?”

“ಕೇಳು, ಕೇಳು, ಕೇಳು. ಕೇಳಿ ನನ್ನನ್ನು ಫಾಸೀ ಹಾಕು. ಅದು ಸಾವಿತ್ರಿಯದೇ ಆಗಿರಬಹುದು. ನಿನಗ್ಯಾಕೆ ಹೊಟ್ಟೇಕಿಚ್ಚು?”

“ಹಾಂ! ಹೀಗೆ ಬರ್ರಿ ಹಾದಿಗೆ. ಹ್ಯಾಗಿತ್ತು ಹೂವು?”

“ನಿನ್ನ ಹೂವಿನಷ್ಟೇನೂ ವಾಸನೆಯಿರಲಿಲ್ಲ.”

“ಸಾಕುಮಾಡಿರಿ ಚೇಷ್ಟೆ. ನಾನೀಗ ಹಿರಿಯಳು. ನನ್ನ ಹೊಟ್ಟೆಯಲ್ಲಿರುವ ಹುಡುಗನೂ ನಿಮ್ಮ ಮಾತು ಕಲಿತಾನು!”

“ಕಲಿತಾನು ಅಂತ ಯಾಕೆ! ಕಲಿತೇಬಿಡುತ್ತಾನೆ. ನಿನ್ನ ಮಗ ದೊಡ್ಡ ಚಾಪ್ಟರನಾಗುತ್ತಾನೆ ಸುಮಿತ್ರಾ. ಕಡೆಗೊಮ್ಮೆ ಅವನು ನನ್ನ ಕೈಗೇ ಸಿಗುತ್ತಾನೆ. ಎಲ್ಲಾ ಚಾಪ್ಟರರು ಪೋಲೀಸರ ಕೈಗೆ ಸಿಗಲೇಬೇಕು.”

“ನಿಮ್ಮಂಥ ಚಾಪ್ಟರರನ್ನು ಹಿಡಿಯುವ ಪೋಲೀಸರು ಮಾತ್ರ ಇನ್ನೂ ಬರಲಿಲ್ಲ. ತಡೀರಿ. ನನ್ನ ಮಗನನ್ನು ಫೌಜದಾರನನ್ನಾಗಿ ಮಾಡುತ್ತೇನೆ. ಅವನೇ ನಿಮ್ಮನ್ನು ಹಿಡಿಯುತ್ತಾನೆ.”

“ಸರಿ. ಸರಿ!” ಎಂದು ನಾನು ನಗತೊಡಗಿದೆ.

“ಈಗ ಸೋತವರು ಯಾರು?” ಎಂದಳು ಸುಮಿತ್ರಾ.

“ನಾನಾಗಲೇ ಸೋಲನ್ನೊಪ್ಪಿಕೊಂಡಿರುವೆನಲ್ಲ ಮಹಾರಾಯಿತಿ?”

ಸ್ವಲ್ಪಹೊತ್ತು ಸುಮ್ಮನಿದ್ದು ಸುಮಿತ್ರಾ ಹೇಳಿದಳು:

"ಸಾವಿತ್ರಿಗೆ ಆದಷ್ಟುಬೇಗ ಒಬ್ಬ ಗಂಡು ಗೊತ್ತುಮಾಡಿರಿ. ನಾನು ಚೇಷ್ಟೆಗೆ ಹೇಳಿದೆನೆಂದು ನೀವೇ ಅವಳ ಗಂಡ ಆಗಿಬಿಡಬೇಡಿರಿ!"

ಮುಂದೆ ನಾಲ್ಕೈದು ದಿನಗಳೊಳಗಾಗಿ ಸುಮಿತ್ರೆ ಗಂಡುಮಗು ಹೆತ್ತಳು. ಮಗು ಸಧೃಡವಾಗಿ ನೋಡಲು ಬಲು ಮುದ್ದಾಗಿತ್ತು. ಷಣ್ಮುಖಪ್ಪನಿಗೆ ತಂತೀವಾರ್ತೆ ಹೋಯಿತು. ಅವನು ಮಾರನೆಯ ದಿನವೇ ಬಂದುಬಿಟ್ಟ. ಉಜ್ಜಪ್ಪನವರಿಗೆ ಆನಂದವೋ ಆನಂದ. ಗೊಬ್ಬೂರಿನಿಂದ ಮಣಗಟ್ಟಲೆ ಮಿಠಾಯಿ ತಂದು ಊರಲ್ಲೆಲ್ಲಾ ಹಂಚಿದರು. ಸುಮಿತ್ರಾಗೆ ಯಾವುದರದೂ ಕೊರತೆಯೆನ್ನಿಸದಂತೆ ಅವಳ ಶುಶ್ರೂಷೆ ಸಾಗಿತು.

ಮಗುವಿನ ನಾಮಕರಣದ ದಿನ ಅವರ ಮನೆಯಲ್ಲಿ ತುಂಬಾ ವಿಜೃಂಭಣೆ. ಸಾವಿತ್ರಿ ಊರಲ್ಲೆಲ್ಲ ಸುತ್ತಿ ಸುಮಂಗಲೆಯರನ್ನು ಆಮಂತ್ರಿಸಿ ಬಂದಳು. ಹೆಂಗಸರ ಗಬ್ದಲದಲ್ಲಿ ನಾನು ಅಲ್ಲಿ ನಿಲ್ಲುವ ಹಾಗಿರಲಿಲ್ಲ. ಫೌಜದಾರರ ಮನೆಗೆ ಬಿಡಾರ ಬದಲಿಸಿದೆ.

ಒಂದು ವಾರ ಕಳೆಯುವಷ್ಟರಲ್ಲಿ ನನಗೆ ಅಲ್ಲಿಂದ ವರ್ಗವಾದ ಆಜ್ಞೆ ಬಂದಿತು. ಹಾಗೆ, ಅಕಸ್ಮಾತ್ತಾಗಿ ನನಗೆ ವರ್ಗವಾಗಬಹುದೆಂದು ಯಾರೂ ನಿರೀಕ್ಷಿಸಿಕೊಂಡಿರಲಿಲ್ಲ. ಸ್ವತಃ ನನಗೇ ಅದರ ಕಲ್ಪನೆಯಿರಲಿಲ್ಲ. ಗೊಬ್ಬೂರಿನಲ್ಲಿ ಗೊತ್ತಾಯಿತು ಅದರ ಗುಟ್ಟು.

ಅಲ್ಲಿಂದ ಅರವತ್ತು ಮೈಲಿ ದೂರದಲ್ಲಿ, ಮಲೆನಾಡಿನ ಸೆರಗಿನಲ್ಲಿದ್ದ ತೊಂಡೇಬಾವಿಯ ಫೌಜದಾರರು – ನನ್ನನ್ನು ಚೆನ್ನಾಗಿ ಬಲ್ಲವರು – ತಮ್ಮ ಕಚೇರಿಯಲ್ಲಿ ಉತ್ತಮ ಕೆಲಸಗಾರರಿಲ್ಲವೆಂದು ಡಿ. ಎಸ್. ಪಿ. ಯವರಿಗೆ ಹೇಳಿಕೊಂಡು ನನ್ನನ್ನು ಅಲ್ಲಿಗೆ ವರ್ಗಮಾಡಿಸಿಕೊಂಡಿದ್ದರು.

ನಿಜವಾಗಿಯೂ ನನಗೆ ಬಹಳ ದುಃಖವಾಯಿತು. ಕೇವಲ ಆತ್ಮೀಯರಂತಾಗಿದ್ದ ಕಾಲವಾಡದ ಜನರನ್ನು ಬಿಟ್ಟುಹೋಗುವುದು ಹೇಗೆ? ಹೇಗೆ ಬಿಡುವುದು ಸಾವಿತ್ರಿಯನ್ನು? ಸುಮಿತ್ರೆಯನ್ನು? ಉಜ್ಜಪ್ಪನವರನ್ನು?

ನಾನು ಹೋಗುವುದರಿಂದ ತಮ್ಮ ಬಲಗೈ ಮುರಿದಂತಾಗುವುದೆಂದು ಫೌಜದಾರರು ವ್ಯಸನಪಡುತ್ತಿದ್ದರು.

ನಾನು ತೊಂಡೇಬಾವಿಗೆ ಹೋಗಿ, ಅಲ್ಲಿಯ ಫೌಜದಾರರಾದ ಎರೇಸೀಮೆಯವರನ್ನು ಕಂಡು, ಪೋಲೀಸ್ ವಠಾರದಲ್ಲಿ ಮನೆಹಿಡಿದು ಮತ್ತೆ ಕಾಲವಾಡಕ್ಕೆ

ಮರಳಿ ಬಂದೆ. ಆ ತಿಂಗಳಿನ ಸಂಬಳ ತೆಗೆದುಕೊಂಡ ತರುವಾಯ ನಾನು ಹೊರಡುವುದು. ಇನ್ನೂ ಹತ್ತು ದಿನಗಳ ಅವಧಿಯಿತ್ತು. ಅಷ್ಟರಲ್ಲಿ ಫೌಜದಾರರ ಜೊತೆಗೆ ಎಂಟು ಹತ್ತು ಹಳ್ಳಿಗಳಲ್ಲಿ ಅಲೆದು ಬಂದುದಾಯಿತು. ನೂರಾರು ರೂಪಾಯಿಗಳೂ ಜೇಬಿಗೆ ಸೇರಿದುವು. ಸಂಬಳವೂ ಕೈ ಸೇರಿತು. ಕಾಲವಾಡ ಕಚೇರಿಯಿಂದ ಬಿಡುಗಡೆಯೂ ದೊರೆಯಿತು.

ಅದೇ ದಿನ ಗೊಬ್ಬೂರಿಗೆ ಹೋಗಿ ದೊಡ್ಡ ಫೌಜದಾರರು, ಕಾರಕೂನರು, ಜಮಾದಾರರು, ಮತ್ತಿನ್ನಿತರ ಗೆಳೆಯರನ್ನು ಕಂಡೆ. ನನಗಾಗಿ ಸಾಕಷ್ಟು ಬಟ್ಟೆ ಬರೆ, ಹಾಸುಗೆ, ಒಂದು ರಗ್ಗು, ಮಡಿಸಿಡಲು ಬರುವಂಥ ಮೇಜು ಕುರ್ಚಿ ಖರೀದಿ ಮಾಡಿದೆ. ತೊಂಡೇಬಾವಿಯೆಂದರೆ ಮಲೇರಿಯದ ತವರುಮನೆ. ಸೊಳ್ಳೆಗಳ ಕಾಟ ತಪ್ಪಿಸಲು ಅಗತ್ಯವಿದ್ದ ಸೊಳ್ಳೆಪರದೆ ಕೊಂಡುಕೊಂಡುದಾಯಿತು. ಸರಾಫದಂಗಡಿಗೆ ಹೋಗಿ ಸುಮಿತ್ರೆಯ ಮಗುವಿಗೊಂದು ಚಿನ್ನದ ಸರವನ್ನೂ ಸಾವಿತ್ರಿಗೊಂದು ಉಂಗುರವನ್ನೂ ಸುಮಿತ್ರಾ, ಸಾವಿತ್ರಿ, ಗಂಗವ್ವ ಮೂವರಿಗೂ ಒಂದೊಂದು ಖಣವನ್ನೂ ತೆಗೆದುಕೊಂಡೆ. ಮೇಜು ಕುರ್ಚಿ ಮೊದಲಾದುವುಗಳನ್ನು ಜಮಾದಾರರಲ್ಲಿಟ್ಟು ಮಿಕ್ಕ ವಸ್ತುಗಳೊಡನೆ ಕಾಲವಾಡಕ್ಕೆ ಬಂದೆ. ಮಾರನೆಯ ದಿನ ಅಲ್ಲಿಗೆ ಬರುವಂತೆ ಛಾಯಾಗ್ರಾಹಕನಿಗೆ ತಿಳಿಸಿದ್ದೆ. ಮರುದಿನ ಅವನು ಬರುತ್ತಲೂ ಗೌಡರು, ಉಜ್ಜಪ್ಪ, ರುದ್ರಪ್ಪ, ಫೌಜದಾರರು, ಅಪ್ಪಣ್ಣ, ನಾನು, ಇತರ ಪೋಲೀಸರು ಎಲ್ಲರೂ ಕುಳಿತು ಸಮೂಹ ಚಿತ್ರ ತೆಗೆಯಿಸಿದುದಾಯಿತು. ಸಾವಿತ್ರಿ, ಸುಮಿತ್ರಾ, ಗಂಗವ್ವ ಮೂವರನ್ನೂ ಕೂಡಿಸಿ ಒಂದು ಚಿತ್ರ ತೆಗೆಯಿಸಲಾಯಿತು.

ಮಾರನೆಯ ದಿನವೆ ನಾನು ಹೊರಡಬೇಕಾಗಿತ್ತು. ಹೇಗೋ ಆ ರಾತ್ರಿಯನ್ನು ಕಳೆದುದಾಯಿತು. ನನ್ನೊಡನೆಯೇ ಬರುವುದಾಗಿ ಹಟ ಹಿಡಿದು ಕುಳಿತಿದ್ದ ಸಾವಿತ್ರಿಯನ್ನು ಹೇಗೆ ಸಂತೈಸುವುದೆಂಬುದೇ ಹೊಳೆಯದಾಗಿತ್ತು. ಆ ಕೆಲಸವನ್ನು ಸುಮಿತ್ರೆಗೊಪ್ಪಿಸಿ ಹೊರಟುಬಿಡಬೇಕಾಯಿತು.

ಸುಮಿತ್ರೆಯ ಕೊಠಡಿಗೆ ಹೋಗಿ ಅವಳ ಮಗುವನ್ನೆತ್ತಿಕೊಂಡು ಮುದ್ದಿಸಿ, ಕೊರಳಲ್ಲಿ ಚಿನ್ನದ ಸರ ಹಾಕಿದೆ. ಅಲ್ಲಿಯೇ ಇದ್ದ ಸಾವಿತ್ರಿಗೆ ಉಂಗುರವನ್ನು ಕೊಟ್ಟೆ. ಸುಮಿತ್ರೆಗೂ ಗಂಗವ್ವನಿಗೂ ಖಣಗಳನ್ನು ಅರ್ಪಿಸಿದೆ. ಎಲ್ಲರ ಕಣ್ಣುಗಳಿಂದಲೂ ನೀರು ಸುರಿಯುತ್ತಿತ್ತು. ಜಡವಾದ ಹೆಜ್ಜೆಗಳಿಂದ ಹೊರಟು,

ನನಗಾಗಿ ತರಿಸಲಾಗಿದ್ದ ಬಾಡಿಗೆಯ ಕಾರಿನ ಬಳಿ ಬಂದೆ. ಉಜ್ಜಪ್ಪ ಬಂದು ನನ್ನನ್ನು ಅಪ್ಪಿಕೊಂಡು ಎಳೆಯ ಮಕ್ಕಳಂತೆ ಕಂಬನಿಗರೆಯತೊಡಗಿದರು.

ಗೌಡರು ಅರ್ಧ ಚೀಲ ಗೋಧಿ, ಅರ್ಧ ಚೀಲ ಜೋಳ, ಮೆಣಸಿನಕಾಯಿ, ಬೆಲ್ಲ ಮೊದಲಾದ ಸಾಮಗ್ರಿಗಳನ್ನು ತರಿಸಿ ಕಾರಿನಲ್ಲಿ ತುಂಬಿದ್ದರು.

ಕಾರು ಸ್ಟಾರ್ಟ್ ಮಾಡಿದ ಡ್ರೈವರ್. ನೆರೆದವರೆಲ್ಲರೂ " ನಮಸ್ಕಾರ, ನಮಸ್ಕಾರ," ಎನ್ನುತ್ತಾ ಕೈಬೀಸಿದರು. ನನ್ನ ಕಣ್ಣುಗಳಲ್ಲಿ ಕಂಬನಿ ತುಂಬಿ ಬಂದಿದ್ದುವು.

ಅಲ್ಲಿಗೆ ಕಾಲವಾಡದ ಅಧ್ಯಾಯ ಮುಗಿಯಿತು.

ಆದರೆ, ಅಲ್ಲಿ ನಡೆದ ಘಟನೆಗಳನ್ನೂ ಬೆಳೆದ ಸ್ನೇಹ, ಆತ್ಮೀಯತೆ, ಆ ಜನರ ನಿಷ್ಕಪಟ ನಡೆವಳಿಕೆ, ಮುಗ್ಧತೆ, ಸರಲತನಗಳನ್ನು ನಾನಿನ್ನೂ ಮರೆತಿಲ್ಲ. ಮರೆಯುವುದು ಸಾಧ್ಯವೇ ಇಲ್ಲ.

೯

# ದುಡ್ಡು ! ದುಡ್ಡು ! ದುಡ್ಡು !

ಗೊಬ್ಬೂರಿಗೆ ಬಂದು, ಜಮಾದಾರರನ್ನು ರೋಶನ್ ಮತ್ತು ಅಮೀನರನ್ನು ಕಂಡು, ಅವರ ಮನೆಯಲ್ಲಿದ್ದ ಸಾಮಾನುಗಳನ್ನು ಕಾರಿಗೆ ತುಂಬಿ ತೊಂಡೇಬಾವಿಗೆ ಹೊರಟು, ರಾತ್ರೆ ಎಂಟೂವರೆ ಗಂಟೆಯ ಸಮಯಕ್ಕೆ ಆ ಊರು ತಲಪಿದುದಾಯಿತು. ಫೌಜದಾರ್ ಎರೇಸೀಮೆಯವರನ್ನು ಕಂಡು, ಅಂದಿನ ಮಟ್ಟಿಗೆ ಅವರಲ್ಲಿಯೆ ಒಂದು ದೀಪವನ್ನು ಎರವಲು ಪಡೆದು ಪೋಲೀಸ್ ವಠಾರದಲ್ಲಿನ ಮನೆಗೆ ಬಂದೆ. ಹೊರಡುವಾಗ ಸುಮಿತ್ರಾ ಕಟ್ಟಿಕೊಟ್ಟಿದ್ದ ಬುತ್ತಿಯ ಗಂಟು ಬಿಚ್ಚಿ ಡ್ರೈವರನೂ ನಾನೂ ಕೂಡಿ ಊಟ ಮುಗಿಸಿದೆವು. ಪ್ರಯಾಣದಿಂದಾಗಿ ಬಲು ಆಯಾಸವಾಗಿತ್ತು. ಹಾಸಿಗೆಯ ಮೇಲುರುಳುತ್ತಲೂ ನಿದ್ರೆ ಯಾವರಿಸಿತು.

ಎಚ್ಚರವಾದಾಗ ಬೆಳಗಾಗಿತ್ತು. ಹೊರಗೆ ಬಂದು ನೋಡಿದರೆ ಸುತ್ತಲೂ ಬರಿಯ ಮಂಜು. ಅಂಥ ದೃಶ್ಯವನ್ನು ಆ ಮೊದಲು ಎಂದೂ ನೋಡಿರಲಿಲ್ಲ ನಾನು. ಹತ್ತು ಹೆಜ್ಜೆಯ ಮೇಲಿನ ವಸ್ತುಗಳು ಕೂಡ ಕಾಣಿಸುವಂತಿರಲಿಲ್ಲ. ಅಷ್ಟು ದಟ್ಟವಾದ ಮಂಜು. ರಾತ್ರಿ ಮಲಗಿದ್ದಾಗ ತಲೆಗೆ ಬಟ್ಟೆ ಕಟ್ಟಿಕೊಂಡಿರಲಿಲ್ಲವಾದುದರಿಂದ ಮಂಜಿನ ಪ್ರಭಾವಕ್ಕೊಳಗಾಗಿ ತಲೆ ಸಣ್ಣಗೆ ಸಿಡಿಯತೊಡಗಿತ್ತು.

"ಅಬ್ಬ! ಮಲೆನಾಡೇ! ಇದೇನು ಇಂಗ್ಲೆಂಡ್ ಕಂಡ ಹಾಗೆ ಕಾಣುವದಲ್ಲ!" ಎಂದು ನಾನು ಉದ್ಗಾರ ತೆಗೆಯುತ್ತಲೂ ಡ್ರೈವರ್ ನಕ್ಕು,

"ನೀವು ಇತ್ತಕಡೆ ಬಂದೇ ಇರಲಿಲ್ಲವೇನ್ರೀ?" ಎಂದು ಕೇಳಿದ.

“ಇಲ್ಲಪ್ಪ. ಇದೇ ಮೊದಲನೆಯ ಸಲ ಬಂದದ್ದು.”

“ದಿನಗಳೆದ ಹಾಗೆ ಎಲ್ಲಾ ರೂಢಿಯಾಗುತ್ತದೇಳ್ರಿ,” ಎಂದ ಡ್ರೈವರ್.

ಕಾರು ನಡೆಸಿಕೊಂಡು ನಿಧಾನವಾಗಿ ಊರೊಳಗೆ ಬಂದೆವು. ಒಂದು ಚಹದಂಗಡಿಯನ್ನು ಹುಡುಕಿ ಚಹ ಕುಡಿದೆವು. ಆ ಊರಲ್ಲಿ ಕಾರು ಬರುವುದೇ ಅಪರೂಪ. ಸರಕಾರಿ ಕೆಲಸಕ್ಕಾಗಿ ಬರುವ ಅಧಿಕಾರಿಗಳಷ್ಟೇ ಕಾರು ತರುತ್ತಿದ್ದುದು – ಅದೂ ಎಂದಾದರೊಮ್ಮೆ. ಸರಿ. ಈ ಕಾರು ಯಾರದೆಂದು ವಿಚಾರಣೆಗಾರಂಭವಾಯಿತು. ಹೊಸದಾಗಿ ಬಂದ ಪೋಲೀಸು ಸಿಪಾಯಿ ತಂದುದೆಂಬ ಸಂಗತಿ ಗೊತ್ತಾಗುತ್ತಲೂ ಎಲ್ಲರಿಗೂ ವಿಸ್ಮಯವಾಗಿರಲು ಸಾಕು. ಇವನೆಂಥ ಸಿಪಾಯಿಯಪ್ಪ! ಎಂದೂ ಅವರೆಂದುಕೊಂಡಿರಲು ಸಾಕು.

ಅದು ಮಲೆನಾಡಿನ ಊರು. ಬಡವರೇ ವಿಶೇಷವಾಗಿದ್ದ ಹಾಗಿತ್ತು. ಸುಮಾರು ಮೂರು ಸಾವಿರ ಜನರಿದ್ದರು. ನಾಲ್ಕಾರು ಅಂಗಡಿಗಳಿದ್ದುವು. ವಾರಕ್ಕೊಂದಾವರ್ತಿ ಸಂತೆ ನೆರೆಯುತ್ತಿತ್ತು. ಬೇಕಾದ ವಸ್ತುಗಳನ್ನೆಲ್ಲ ಸಂತೆಯ ದಿನವೇ ಕೊಳ್ಳಬೇಕಾಗುತಿತ್ತು. ದೊಡ್ಡ ಪೇಟೆಗಳಿದ್ದುದು ಅಲ್ಲಿಂದ ನಲವತ್ತು ಮೈಲಿ ದೂರದಲ್ಲಿ.

ಕಾರಿಗೆ ಗೊತ್ತುಪಡಿಸಿದ್ದ ಬಾಡಿಗೆಯನ್ನೂ ಮೇಲೆ ಐದು ರೂಪಾಯಿ “ಭಕ್ಷೀಸ”ನ್ನೂ ಡ್ರೈವರನ ಕೈಗಿತ್ತು ಅವನನ್ನು ಕಳುಹಿಸಿ ಕಚೇರಿಗೆ ಬಂದು ಹಾಜರಾದೆ.

“ಬಾರನಿಸಿ ಕಾರಕೂನ್” ಸ್ಥಳಕ್ಕೆ ನನ್ನ ನೇಮಕವಾಗಿತ್ತು. ಹೊರಟು ಹೋಗಲಿದ್ದ ಬಾರನಿಸಿಯಿಂದ ಕಾಗದ ಪತ್ರಗಳ ‘ಚಾರ್ಜ್’ ತೆಗೆದುಕೊಂಡೆ. ಫೌಜದಾರರನ್ನು ಕಂಡು, ಕೆಲಸಕ್ಕೆ ಹಾಜರಾದ ಸಂಗತಿಯನ್ನು ತಿಳಿಸಿದೆ.

ಅದು ಚಿಕ್ಕ ಕಚೇರಿ. ಮಲೆನಾಡಿನ ಸೆರಗಿನ ಆ ಪ್ರದೇಶದಲ್ಲಿ ಅಪರಾಧಗಳು ನಡೆಯುವುದೇ ಬಹಳ ಕಡಮೆ. ಅಲ್ಲಿಯ ಪೋಲೀಸಿನವರಾರಿಗೂ ಹೆಚ್ಚು ಕೆಲಸವಿರಲಿಲ್ಲ. ಆ ಪೋಲೀಸ್ ಕಚೇರಿಯ ಕ್ಷೇತ್ರದಲ್ಲಿ ೯೬ ಚಿಕ್ಕ ಚಿಕ್ಕ ಹಳ್ಳಿಗಳಿದ್ದುವು. ಭೂಮಿಯಲ್ಲಿ ಹೆಚ್ಚು ಭಾಗ ಬತ್ತದ ಗದ್ದೆಗಳಿಂದ ಕೂಡಿದುದು. ವರುಷದಲ್ಲಿ ಎಂಟು ತಿಂಗಳುಗಳ ಕಾಲ ಮಳೆ – ಕೆಸರು. ಅಂತೂ ಹಳ್ಳಿಗಳಿಗೆ ಭೆಟ್ಟಿ ಕೊಡುವ ಕೆಲಸ ಮಾತ್ರ ತೊಂದರೆಯದಾಗಿತ್ತು. ನಾನು ಬಾರನಿಸಿ

ಯಾಗಿದ್ದುದರಿಂದ ಕಚೇರಿಯನ್ನು ಬಿಟ್ಟು ಹೊರಗಡೆ ಹೋಗಬೇಕಾದ ಸಂದರ್ಭ ಬರುವಂತಿರಲಿಲ್ಲ.

ಅಲ್ಲಿದ್ದ ಕಾರಕೂನರೂ ಮ್ಯಾಟ್ರಿಕ್ ಪಾಸಾದವರು. ನಮ್ಮ ಹೈಸ್ಕೂಲಿನಲ್ಲಿಯೇ ಓದಿದವರು. ನಾನು ನಾಲ್ಕನೆಯ ತರಗತಿಯಲ್ಲಿದ್ದಾಗ ಅವರು ಮ್ಯಾಟ್ರಿಕ್‌ದಲ್ಲಿದ್ದರು. ಹಳೆಯ ಪರಿಚಯ ಇಲ್ಲಿ ಬೆಳೆದು ಸ್ನೇಹವಾಯಿತು. ತೊಂಡೇಬಾವಿಯಲ್ಲಿಯೂ ಖಾನಾವಳಿಯಿರಲಿಲ್ಲ. ನಾನೇ ಅಡುಗೆ ಮಾಡಿಕೊಳ್ಳಬೇಕಾಗಿ ಬಂದಿತು. ನನ್ನ ಮನೆಯವರಂತೂ ಈಗಲೇ ಬರುವಂತಿರಲಿಲ್ಲ.

ಗೌಡರು ಕಟ್ಟಿಕೊಟ್ಟಿದ್ದ ಚೀಲಗಳನ್ನು ಬಿಚ್ಚಿದೆ. ಆ ದಿನ ಅಕ್ಕಿ ಕುದಿಸಿ ಅನ್ನ ಬೇಯಿಸಿ ಹಾಲು – ಖಾರ ತರಿಸಿ 'ಊಟ' ಮುಗಿಸಿದೆ.

ಮಾರನೆಯ ದಿನ ಕಾರಕೂನರ ಸಂಗಡ ಊರಲ್ಲಿ ಹೋಗಿ ಅವರಿವರ ಪರಿಚಯ ಮಾಡಿಕೊಂಡೆ. ಒಂದು ವಾರ ಕಳೆಯುವುದರೊಳಗಾಗಿ ಅನೇಕರೊಡನೆ ಸ್ನೇಹ ಬೆಳೆಯಿತು.

ನಾವು ಹೆಚ್ಚಾಗಿ ಹೋಗುತ್ತಿದ್ದುದು ಒಂದು ಕಿರಾಣಿ ಅಂಗಡಿಗೆ. ಸಾಯಂಕಾಲ ಪೋಲೀಸರು ಕೆಲವರು ಅಲ್ಲಿ ಕಲೆತು ಇಸ್ಪೀಟು ಆಡುವ ಪರಿಪಾಠ ಬೆಳೆದು ಬಂದಿತ್ತು. ಆ ಗುಂಪಿಗೆ ನಾನೂ ಸೇರಿಕೊಂಡೆ.

ಆ ಅಂಗಡಿಯ ಒಡೆಯ ಇನ್ನೂ ಯುವಕ. ಬಂಡೆಪ್ಪ ಎಂದು ಅವನ ಹೆಸರು. ಅವನ ಮನಸ್ಸು ಬಹಳ ಸರಳವಾದುದು. ಎಲ್ಲರನ್ನೂ ಆತ್ಮೀಯತೆಯಿಂದ ಕಂಡು ಹೊಂದಿಕೊಂಡು ಹೋಗುವ ಸ್ವಭಾವ. ಅವನ ತಾಯಿಯೂ ಬಲು ಒಳ್ಳೆಯವಳು.

"ಊಟಕ್ಕೇನು ಮಾಡುತ್ತಿದೀರಿ ಸರದಾರರೆ?" ಎಂದು, ಒಂದು ದಿನ ಕೇಳಿದ ಬಂಡೆಪ್ಪ.

"ಮತ್ತೇನು ಮಾಡುವದಪ್ಪಾ? ಕೈಯಿಂದ ಮಾಡಿಕೊಳ್ಳುತ್ತಿದೇನೆ."

"ಛೆ. ಛೆ. ಆಫೀಸ್ ಕೆಲಸ ಯಾವಾಗ ಮಾಡುತೀರಿ? ಅಡಿಗೆ ಯಾವಾಗ ಮಾಡಿಕೊಳ್ಳುತ್ತೀರಿ? ಎಲ್ಲಾ ತೊಂದರೆಯಲ್ಲವೇನು?"

"ಹೌದು. ಉಪಾಯವಿಲ್ಲ."

"ಯಾಕೆ ಕಷ್ಟಪಡುತ್ತೀರಿ? ನಮ್ಮಲ್ಲೇ ಊಟ ಮಾಡಬಹುದಲ್ಲ?" ಎಂದು ಸೂಚಿಸಿದ ಬಂಡೆಪ್ಪ.

"ಬರ್ರಿ, ಬರ್ರಿ," ಎಂದು ಅವನ ತಾಯಿಯೂ ಒತ್ತಾಯ ಮಾಡಿದಳು.

ನನಗೂ ಸ್ವಯಂಪಾಕ ಬೇಸರವನ್ನುಂಟುಮಾಡಿದ್ದುದರಿಂದ ಬಂಡೆಪ್ಪನ ಮನೆಗೆ ಊಟಕ್ಕೆ ಹೋಗತೊಡಗಿದೆ. ಆ ಜನಕ್ಕೆ ಅಡುಗೆಯೇ ಗೊತ್ತಿಲ್ಲವೇನೋ ಎನ್ನಿಸುವ ಹಾಗಿತ್ತು ಅಲ್ಲಿನ ಊಟ. ಅದರಲ್ಲಿ ಅನ್ನವೇ ಹೆಚ್ಚು. ಜೋಳ ವೆಂದರೆ ಅವರಿಗಾಗದು. ಆ ಹವೆಯಲ್ಲಿ ಗೋಧಿ ಪಚನವಾಗುವಂತಿರಲಿಲ್ಲ. ಬರಿಯ ಅನ್ನ ತಿಂದು ತಿಂದು ಬಲು ಬೇಸರವಾಯಿತು. ಬಯಲುಸೀಮೆಯವ ರಾದ ನಮಗೆ ರೊಟ್ಟಿಯಿಲ್ಲದಿದ್ದರೆ ಹೊಟ್ಟೆಯೇ ತುಂಬದು. ಸ್ವಲ್ಪ ಗೋಧಿ ಯನ್ನು ಕೊಟ್ಟು ಚಪಾತಿ ಮಾಡಿಸಹತ್ತಿದೆ. ಅಲ್ಲಿ ಹೈನದ ಕೊರತೆಯೂ ವಿಪ ರೀತವಾಗಿತ್ತು. ನಾನೇ ಪೇಟೆಯಿಂದ ಬೆಣ್ಣೆ ತಂದುಕೊಡುತ್ತಿದ್ದೆ. ಮಧ್ಯಾಹ್ನ ಚಪಾತಿ ಮತ್ತು ಅನ್ನ. ಸಂಜೆ ಕೇವಲ ಅನ್ನ – ಸರಿ. ಹಾಗೇ ನಡೆಯಿತು.

ಕಚೇರಿಯಲ್ಲಿ ನಾನು ಮಾಡುವಷ್ಟು ಕೆಲಸವಿರುತ್ತಿರಲಿಲ್ಲ. ಇದ್ದ ಕೆಲಸ ಒಂದು ತಾಸಿನಲ್ಲಿಯೆ ಮುಗಿದುಹೋಗುತ್ತಿತ್ತು. ಇನ್ನುಳಿದ ವೇಳೆಯನ್ನು ಕಳೆಯುವುದು ಹೇಗೆ? ನಿಜವಾಗಿ ಅದೊಂದು ಸಮಸ್ಯೆಯೇ ಆಯಿತು.

ಫೌಜದಾರರಂತೂ ಹಳ್ಳಿಗಳನ್ನು ಸುತ್ತುವುದರಲ್ಲೇ ದಿನಗಳೆಯುತ್ತಿದ್ದರು. ಅದು ಅವರ ಕರ್ತವ್ಯ. ಅವರು ಮಾಡಲೇಬೇಕಾಗಿತ್ತು. ಅಪರಾಧಗಳೋ, ದುರ್ಮರಣಗಳೋ ಅಗ್ನಿ ಪ್ರಕರಣಗಳೋ ನಡೆದಾಗ ನಾನೂ ಅವರೊಡನೆ ಹಳ್ಳಿಗಳಿಗೆ ಹೋಗುತ್ತಿದ್ದೆ. ಅವರು ಮಾಡಬೇಕಿದ್ದ ಕೆಲಸಗಳನ್ನೆಲ್ಲ ನಾನೇ ಮಾಡಿ ಮುಗಿಸುತ್ತಿದ್ದೆ. ಅವರು ವಿರಾಮವಾಗಿ ಕುಳಿತುಕೊಂಡಿರುತ್ತಿದ್ದರು. ತಮ್ಮ ಕೆಲಸದ ಭಾರವನ್ನು ಕಡಮೆಮಾಡುವ ಸಮರ್ಥನೊಬ್ಬ ದೊರೆತನೆಂದು ಅವರಿಗೆ ಸಂತೋಷ. ಅಂತೆಯೇ ನನ್ನ ಬಗೆಗೆ ಬಹಳ ಪ್ರೀತಿ.

ಒಂದು ತಿಂಗಳು ಕಳೆಯುವುದರೊಳಗಾಗಿ ಹಳ್ಳಿಗಳ ಗೌಡರೆಲ್ಲರ ಪರಿ ಚಯವಾಯಿತು. ಹಳ್ಳಿಗಳಲ್ಲಿ ಮನರಂಜನೆಯ ಕಾರ್ಯಕ್ರಮಗಳೆಂದರೆ ಬಯ ಲಾಟಗಳು. ಬಯಲಾಟ ಆಡುವವರು ಮೊದಲು ಮಾಮಲೇದಾರರ ಅಪ್ಪಣೆ ಪಡೆಯಬೇಕಾಗುವುದು. ಮಾಮಲೇದಾರರ ಅಪ್ಪಣೆ ದೊರಕಿಸಲು ಫೌಜದಾರರ ಶಿಫಾರಸು ಅವಶ್ಯ. ಕಾರಕೂನರು ಶಿಫಾರಸು ಬರೆದು ಫೌಜದಾರರ ಸಹಿ ಹಾಕಿಸಿಕೊಡುವಾಗ ಆಟ ಆಡುವವರಿಂದ ಐದು ಅಥವಾ ಹತ್ತು ರೂಪಾಯಿ

'ಮಾಮೂಲು' ಪಡೆಯುವ ಪರಿಪಾಠವಿದ್ದಿತಂತೆ. ನಾನು ತೊಂಡೇಬಾವಿಗೆ ಬಂದಂದಿನಿಂದ ಇಪ್ಪತ್ತು ಇಪ್ಪತ್ತೈದು ಆಟಗಳಿಗೆ ಶಿಫಾರಸು ಕೊಡಲಾಗಿದ್ದಿತು. ಅವುಗಳ ಬಗೆಗೆ ಮಾಮೂಲಿನ ಹಣವನ್ನೂ ಕಾರಕೂನರು ತೆಗೆದುಕೊಂಡಿದ್ದರು. ಈ ಹಣವನ್ನು ಹಂಚಿಕೊಳ್ಳುವ ವಿಷಯದಲ್ಲಿಯೂ ಒಂದು ನಿಯಮವಿದ್ದಿತಂತೆ. ಐದು ರೂಪಾಯಿ ಸಿಕ್ಕಿದರೆ ಮೂರು ರೂಪಾಯಿಗಳನ್ನು ಕಾರಕೂನನೂ ಎರಡು ರೂಪಾಯಿಗಳನ್ನು ಬಾರನಿಸಿಯೂ ಹಂಚಿಕೊಳ್ಳುತ್ತಿದ್ದರಂತೆ. ನಾನು ಆ ಕಚೇರಿಗೆ ಹೊಸಬನಾಗಿದ್ದುದರಿಂದ ಕಾರಕೂನರು ನನಗೆ ಗೊತ್ತಾಗದಂತೆ ಎಲ್ಲ ಹಣವನ್ನೂ ತಾವೇ ಇಟ್ಟುಕೊಂಡುಬಿಟ್ಟದ್ದರು. ಹಳ್ಳಿಗಳ ಗೌಡರೊಡನೆ ಮಾತಾಡುತ್ತಿದ್ದಾಗ ಈ ಸಂಗತಿಯೆಲ್ಲ ನನಗೆ ಗೊತ್ತಾಯಿತು.

ನಾನು ತೊಂಡೇಬಾವಿಗೆ ಬಂದಾಗ ನನ್ನ ಹತ್ತಿರ ಹೆಚ್ಚು ಹಣವೇನೂ ಇರಲಿಲ್ಲ. ಕಾಲವಾಡದಲ್ಲಿ ಸಿಕ್ಕಿದುದೆಲ್ಲವೂ ಕಾಲವಾಡದಲ್ಲಿಯೆ ವ್ಯಯವಾಗಿ ಹೋಗಿತ್ತು. ಇಲ್ಲಿಗೆ ಬಂದ ಬಳಿಕ ಸ್ವಲ್ಪ ಹಣವನ್ನು ನನ್ನ ತಾಯಿಗೆ ಕಳಿಸಿ ಕೊಟ್ಟದ್ದೆ. ಉಳಿದ ಹಣ, ಸ್ಟವ್, ನೀರು ಕಾಯಿಸುವ ಪಾತ್ರೆ, ಕೊಡ, ತಂಬಿಗೆ ಮತ್ತಿನ್ನಿತರ ಆವಶ್ಯಕ ಸಾಮಾನುಗಳಿಗಾಗಿ ಖರ್ಚಾಗಿತ್ತು.

"ನಾನು ಕಾಲವಾಡದಲ್ಲೇ ಆರಾಮಾಗಿದ್ದೆ ರಾವ್‌ಸಾಹೇಬರೆ. ಇಲ್ಲಿಗೆ ಬರಬಾರದಾಗಿತ್ತು," ಎಂದು ಫೌಜದಾರರೆದುರಿಗೆ ಮಾತು ತೆಗೆದೆ, ಒಂದು ದಿನ.

"ಯಾಕೆ, ಯಾಕೆ? ಏನಾಯಿತು?" ಎಂದರವರು.

"ನನ್ನ ಸಂಬಳ ನನ್ನ ಖರ್ಚಿಗೇ ಸಾಲದು. ಊಟಕ್ಕೆ ಹತ್ತು ರೂಪಾಯಿ, ಚಹ, ಹಾಲು ಮೊದಲಾದ್ದಕ್ಕೆ ಹತ್ತು. ಕೈಯಲ್ಲಿ ಒಂದು ಕಾಸೂ ಇರುವದಿಲ್ಲ. ಊರಲ್ಲಿ ತಾಯಿ ತಮ್ಮಂದಿರಿದ್ದಾರೆ. ಅವರ ವಿದ್ಯಾಭ್ಯಾಸ ನಡೆಯಬೇಕು. ಅವರಿಗೆ ಕಳಿಸಬೇಕೆಂದರೆ ಕಾಸಿಲ್ಲ."

"ಅದೇನು ಹೀಗೆ ಹೇಳುತ್ತೀರಿ? ನೀವು ಬಂದಂದಿನಿಂದ ಬಯಲಾಟ ಗಳಿಂದಲೇ ಸುಮಾರು ನೂರು ರೂಪಾಯಿ ಬಂದಿರಬೇಕಲ್ಲ. ಕಾರಕೂನರು ಕೊಟ್ಟಲ್ಲವೇ ನಿಮಗೆ?" ಫೌಜದಾರರು ವಿಸ್ಮಯದ ಧ್ವನಿಯಲ್ಲಿ ಕೇಳಿದರು.

"ಆ ಸುದ್ದಿಯನ್ನೇ ಅವರು ಎತ್ತಿಲ್ಲ."

ಕಾರಕೂನರ ಬಗೆಗೆ ಭಯಂಕರ ಸಿಟ್ಟು ಬಂದಿತು ಫೌಜದಾರರಿಗೆ. ನನ್ನನ್ನು ಇಲ್ಲಿಗೆ ಕರೆಯಿಸಿಕೊಂಡವರು ಅವರೇ. ನಾನು ಸುಖವಾಗಿರುವಂತೆ

ನೋಡಿಕೊಳ್ಳುವುದು ಅವರ ಕರ್ತವ್ಯವಾಗಿತ್ತು. ನಾನು ಹಣಕ್ಕಾಗಿ ಪೇಚಾಡು ತ್ತಿದ್ದುದನ್ನು ತಿಳಿದು ಅವರು ಬಹಳ ನೊಂದುಕೊಂಡರು.

"ಹಿಂದಿನ ತಿಂಗಳು ಹಳ್ಳಿಗಳಲ್ಲಿ ತಿರುಗಿದ ಭತ್ತೆಯ ಬಿಲ್ ಮಾಡಿರಿ. ಎಷ್ಟಾಗುವದೋ ನೋಡೋಣ," ಎಂದರು.

ಅದು ನಾಲ್ಕೈದು ರೂಪಾಯಿಗಳಷ್ಟು ಆಯಿತು, ಅಷ್ಟೆ.

ಆದರೆ, ಅಂದಿನ ದಿನಗಳಲ್ಲಿ ನಾಲ್ಕೈದು ರೂಪಾಯಿಗಳಿಗೂ ಬಹಳ ಬೆಲೆಯಿತ್ತು.

ಫೌಜದಾರರು ನನ್ನನ್ನು ಪದೇಪದೇ ಹಳ್ಳಿಗಳಿಗೆ ಕರೆದೊಯ್ಯುತ್ತಿದ್ದುದರ ಬಗೆಗೆ ಮೇಲಧಿಕಾರಿಗಳು ಆಕ್ಷೇಪಿಸಿದರು. ಬಾರನಿಸಿಯಾದವನು ಕಚೇರಿ ಯಲ್ಲಿರಬೇಕಲ್ಲದೆ ಹೊರಗಡೆ ಹೋಗಬಾರದೆಂದು ಅವರ ಅಭಿಪ್ರಾಯ. ತಮ್ಮ ಕೈಕೆಳಗೆ ಸಮರ್ಥರಾದ ಇತರ ಪೋಲೀಸರಿಲ್ಲವಾದುದರಿಂದ ತಾವು ನನ್ನನ್ನು ಜೊತೆಗೆ ಕರೆದೊಯ್ಯುತ್ತಿದ್ದುದಾಗಿ ಹೇಳಿ ಫೌಜದಾರರು ಆ ಅಧಿಕಾರಿಗಳ ಬಾಯಿ ಮುಚ್ಚಿದರು.

ಅದು ಬಯಲಾಟಗಳ 'ಸೀಜನ್'. ನಿತ್ಯವೂ ನಾಲ್ಕೈದು ಹಳ್ಳಿಗಳಿಂದ ಬಯಲಾಟಗಳ ಅರ್ಜಿಗಳು ಬರುತ್ತಿದ್ದುವು. ಪಕ್ಷ ಪಂಗಡಗಳಿದ್ದ ಊರು ಗಳಿಂದ ಅರ್ಜಿಗಳು ಬಂದಾಗ ಆಟದ ಮಾಮೂಲು ಬೆಳೆಯುತ್ತಿತ್ತು. ಪ್ರತಿ ಯೊಂದು ಪಕ್ಷದವರೂ ಪ್ರತಿಪಕ್ಷದವರ ಮೇಲೆ ಸ್ಪರ್ಧೆ ಹೂಡಿ ಆಟ ಆಡಿಸುತ್ತಿ ದ್ದರು. ಒಂದೊಂದು ಬಾರಿ ಆಟಗಳ ನಿಮಿತ್ತವಾಗಿ ಹೊಡೆದಾಟಗಳೂ ನಡೆಯು ತ್ತಿದ್ದುವು. ಆ ನೆವ ಮುಂದೆಮಾಡಿ, ಆಟಕ್ಕೆ ಅಪ್ಪಣೆ ಕೊಡಲಾಗುವುದಿಲ್ಲ ವೆಂದು ಹೇಳಿದಾಗ ಆ ಜನರು ಕಾರಕೂನರ ಕಾಲು ಹಿಡಿದು ಬೇಡಿಕೊಳ್ಳು ತ್ತಿದ್ದರು. ಆಟಕ್ಕೆ ಅಪ್ಪಣೆ ದೊರೆಯದಿದ್ದರೆ ಊರಿನಲ್ಲಿ ಅವರ ಗೌರವವುಳಿಯು ವುದಿಲ್ಲವಲ್ಲ! ಅಂತೆಯೇ, ಕಾರಕೂನರು ಕೇಳಿದಷ್ಟು ಹಣ ತೆತ್ತು ಅಪ್ಪಣೆ ಪಡೆಯುತ್ತಿದ್ದರು..

ಅಂಥದೊಂದು ಸಂದರ್ಭವೂ ಬಂದಿತು. ಒಂದು ಹಳ್ಳಿಯವರಿಂದ ಇಪ್ಪತ್ತೈದು ರೂಪಾಯಿ ತೆಗೆದುಕೊಂಡು, ಆಟದ ಅರ್ಜಿಯ ಮೇಲೆ ಶಿಫಾರಸು ಬರೆದು ಫೌಜದಾರರ ಕಡೆಗೆ ಸಹಿಗಾಗಿ ತಂದರು ಕಾರಕೂನರು.

ಕಾರಕೂನರಿಗೆ ಬುದ್ಧಿ ಕಲಿಸಬೇಕೆಂದು ನಿಶ್ಚಯಿಸಿಕೊಂಡಿದ್ದ ಎರೇ

ಸೀಮೆಯವರು ಅರ್ಜಿಯ ಮೇಲೆ ಸಹಿ ಹಾಕಲಿಲ್ಲ. ಆ ಆಟಕ್ಕೆ ಅಪ್ಪಣೆ ಕೊಡುವುದು ಸಾಧ್ಯವಿಲ್ಲವೆಂದು ಹೇಳಿ ಅರ್ಜಿಯನ್ನು ಫೈಲಿಗೆ ಸೇರಿಸಲು ತಿಳಿಸಿದರು.

ಕಾರಕೂನರು ತಬ್ಬಿಬ್ಬಾದರು. ಅವರ ಗೌರವಕ್ಕೆ ಕುಂದು ಬಂದ ಹಾಗಾಗಿತ್ತು. ಅಪ್ಪಣೆ ಕೊಡಿಸುವ ಭರವಸೆಯಿತ್ತು ಇಪ್ಪತ್ತೈದು ರೂಪಾಯಿ ಕಿತ್ತುಕೊಂಡಿದ್ದರಲ್ಲವೆ!

"ರಾವ್ ಸಾಹೇಬರೆ, ಅಪ್ಪಣೆ ಕೊಟ್ಟುಬಿಡಲು ಅಡ್ಡಿಯಿಲ್ಲವಲ್ಲಾ!" ಎಂದರು ಅಂಜುತ್ತಂಜುತ್ತ.

"ಬೇಡ," ಎಂದು ದೃಢಸ್ವರದಲ್ಲಿ ನುಡಿದು ಎರೇಸೀಮೆ ಫೌಜದಾರರು ಸುಮ್ಮನಾದರು.

ಇನ್ನು ಬೇರೆ ಉಪಾಯವಿರಲಿಲ್ಲ. ಕಾರಕೂನರು ಮುಖ ಬಾಡಿಸಿಕೊಂಡು ಹೊರಗೆ ಹೋಗಿ ಆ ಜನರನ್ನು ಕರೆದು, ಫೌಜದಾರರು ಅಪ್ಪಣೆ ಕೊಡುವುದಿಲ್ಲವೆಂದು ತಿಳಿಸಿ, ರೂಪಾಯಿಗಳನ್ನು ಮರಳಿಸಿದರು.

ಹಳ್ಳಿಗರೆಂದರೆ ವಿಚಿತ್ರ ಜನ. ಅವರ ಯೋಚನೆಯಂತೆ ಎಲ್ಲವೂ ನಡೆಯಲೇಬೇಕು. ಇಲ್ಲವಾದರೆ ಅವರೇನು ಸುಮ್ಮನೆ ಕೂಡುವವರಲ್ಲ. ಆಟದ ಅಪ್ಪಣೆ ಪಡೆಯಲು ಬಂದಿದ್ದವರು ಹಳ್ಳಿಯ ಪಕ್ಷವೊಂದರ ನಾಯಕರು. ಅವರು ಹಾಗೇ ಹಳ್ಳಿಗೆ ಹಿಂದಿರುಗುವುದುಂಟೇ?

"ಏನಾದರೂ ಮಾಡಿ ಅಪ್ಪಣೆ ಕೊಡಿಸಿರಿ. ನೂರು ರೂಪಾಯಿ ಹೋದರೂ ಅಡ್ಡಿಯಿಲ್ಲ," ಎಂದರವರು.

"ನನ್ನ ಕೈಯಲ್ಲೇನೂ ಇಲ್ಲ. ನೀವು ಫೌಜದಾರರನ್ನೇ ಕೇಳಿರಿ," ಎಂದು ಹೇಳಿ ಅವರನ್ನು ಫೌಜದಾರರ ಬಳಿಗೆ ಕಳಿಸಿದರು ಕಾರಕೂನರು.

"ನಿಮ್ಮ ಊರಲ್ಲಿ ಪಾರ್ಟಿಗಳ ಜಗಳ ಬಹಳವಿರುವದು ನನಗೂ ಗೊತ್ತಿದೆ. ಈಗ ನಿಮಗೆ ಆಟಕ್ಕೆ ಅಪ್ಪಣೆ ಕೊಟ್ಟರೆ ಊರಲ್ಲಿ ಗದ್ದಲವಾಗಿ ಶಾಂತತಾಭಂಗವಾಗುವುದಿಲ್ಲವೆಂದು ಹ್ಯಾಗೆ ಹೇಳಬೇಕು?" ಎಂದರು ಫೌಜದಾರರು.

"ಹಾಗೇನೂ ಆಗುವದಿಲ್ಲ ರಾವ್ ಸಾಹೇಬರೆ."

"ಅದರ ಭರವಸೆಯಾದರೂ ಏನು? ನಿಮ್ಮ ವಿರುದ್ಧಪಕ್ಷದ ನಾಲ್ಕು

ಜನ ಹಿರಿಯರನ್ನು ಕರೆದುಕೊಂಡು ಬರ್‍ರಿ. ನಿಮ್ಮ ಆಟಕ್ಕೆ ಅವರು ಅಡ್ಡಿ ಮಾಡುವದಿಲ್ಲವೆಂತ ಬರೆದುಕೊಟ್ಟರೆ ಅಪ್ಪಣೆ ಕೊಡಬಹುದು."

ಆಟದವರಿಗೆ ಪೀಕಲಾಟಕ್ಕಿಟ್ಟುಕೊಂಡಿತು. ವಿರುದ್ಧಪಕ್ಷದ ಜನರನ್ನು ಇವರು ಬಿನ್ನವಿಸಿಕೊಳ್ಳುವಂತಿಲ್ಲ. ಎಷ್ಟು ಹಣ ಹೋದರೂ ಚಿಂತೆಯಿಲ್ಲ, ವಿರುದ್ಧಪಕ್ಷದವರಿಗೆ ಮಾತ್ರ ಶರಣು ಹೋಗಕೂಡದೆಂದು ಅವರ ಹಟ.

ಅವರು ಪುನಃ ಕಾರಕೂನರನ್ನು ಪೀಡಿಸತೊಡಗಿದರು. ಆಗ ನನ್ನ ನೆನಪು ಬಂತು ಕಾರಕೂನರಿಗೆ. ಫೌಜದಾರರು ನನ್ನೊಡನೆ ಪ್ರೀತಿಯಿಂದಿದ್ದುದೂ ನನ್ನನ್ನು ಗೌರವದಿಂದ ಕಾಣುತ್ತಿದ್ದುದೂ ಅವರಿಗೂ ಗೊತ್ತು. ನಾನು ಹೇಳಿದರೆ ಫೌಜದಾರರು ಸಹಿ ಮಾಡಬಹುದೆಂದು ಭಾವಿಸಿ ನನ್ನನ್ನು ಕೇಳಿದರು ಕಾರಕೂನರು.

"ಒಮ್ಮೆ ಫೌಜದಾರರು ನಿಶ್ಚಯಕ್ಕೆ ಬಂದ ಮೇಲೆ ನಾನೇನೂ ಹೇಳಲು ಬರುವದಿಲ್ಲ," ಎಂದು ನಾನು ಹೇಳಿದೆ.

"ನೋಡಿರಿ ಪಾಪ, ಏನಾದರೂ ಮಾಡಿರಿ. ಇವರಿಗೆ ಬಹಳ ಪೇಚಾಟ ಬಂದಿದೆ," ಎಂದರು ಕಾರಕೂನರು. ಮಾಮೂಲಿನ ವಿಷಯ ಮಾತ್ರ ಅವರ ಬಾಯಿಂದ ಹೊರಬರಲಿಲ್ಲ. ಆಗಲೂ ನನಗೆ ಗೊತ್ತಾಗದಂತೆ ಹಣ ತಿಂದುಹಾಕ ಬೇಕೆಂದು ಅವರು ಯೋಚಿಸಿಕೊಂಡ ಹಾಗಿತ್ತು. ಹಣವೆಂದರೆ ಎಷ್ಟು ಆಸೆ ಮನುಷ್ಯನಿಗೆ! ನಾನೂ ಮನುಷ್ಯನೇ ಅಲ್ಲವೆ? ನನಗೂ ಹಣದ ಅವಶ್ಯ ಕತೆಯಿತ್ತು!

ಅಷ್ಟರಲ್ಲಿ ಫೌಜದಾರರು ನನ್ನನ್ನು ತಮ್ಮ ಕೊಠಡಿಗೆ ಕರೆಯಿಸಿದರು.

"ಹಾಳಾಗಿ ಹೋಗಲಿ. ಸಹಿ ಮಾಡಿಬಿಡುತ್ತೀನಿ. ಅವರು ಎಷ್ಟು ಕೊಡುತ್ತಾರೋ ನೋಡಿರಿ. ನೂರು ರೂಪಾಯಿ ಸಿಕ್ಕರೆ ಅಡ್ಡಿಯಿಲ್ಲ," ಎಂದರು.

ನಾನು ಮತ್ತೆ ಹೊರಗೆ ಬಂದೆ. ಕಾರಕೂನರಿಂದ ಕೆಲಸವಾಗ ಲಾರದೆಂದು ತಿಳಿದ ಆ ಜನರು ನನ್ನ ಹತ್ತಿರ ಬಂದರು.

"ಅಪ್ಪಣೆ ಕೊಡಿಸಿ ನಮ್ಮ ಮಾನ ಉಳಿಸಿರಿ ಸರದಾರರೇ."

"ನೋಡಿರಿ. ನಾನೇನೋ ಯತ್ನಿಸಬಹುದು. ಆದರೆ ಮಾಮೂಲು ತೆಗೆದುಕೊಳ್ಳುವಲ್ಲಿ ನನ್ನದೊಂದು ನಿಯಮ. ಕನಿಷ್ಠಪಕ್ಷ ನೂರು ರೂಪಾಯಿ

ಗಳಾದರೂ ಸಿಗುವಂತಿದ್ದರೆ ಮಾತ್ರ ಮುಂದಿನ ಮಾತು. ಅದಕ್ಕಿಂತ ಕಡಿಮೆ ಹಣ ನಾನು ಸ್ವೀಕರಿಸುವದಿಲ್ಲ."

"ಛೆ. ನೂರು ಅಂದರೆ ಬಹಳವಾಯಿತು."

"ನಿಮಗೆ ನಿಮ್ಮ ಮಾನ ಮರ್ಯಾದೆ ದೊಡ್ಡದೋ, ನೂರು ರೂಪಾಯಿ ದೊಡ್ಡದೋ? ಬೇಕಾದರೆ ಕೊಡಿರಿ. ಬೇಡವಾದರೆ ಬಿಡಿರಿ."

"ಎಪ್ಪತ್ತೈದು ರೂಪಾಯಿ ಕೊಡುತೀವಿ. ಅಷ್ಟಕ್ಕೆ ಮಾಡಿಕೊಡಿರಿ ಸರದಾರರೇ," ಎಂದು ಅವರು ಬೇಡಿಕೊಂಡರು.

ಸರಿ. ಅವರ ಅರ್ಜಿಯನ್ನು ಫೌಜದಾರರ ಹತ್ತಿರ ಒಯ್ದು, ಎಪ್ಪತ್ತೈದು ರೂಪಾಯಿಯ ಮಾತನ್ನು ತಿಳಿಸಿದೆ.

"ಅವನ್ನೆಲ್ಲಾ ನೀವೇ ತಗೊಂಡು ಬಿಡಿರಿ. ಕಾರಕೂನರು ಕೇಳಿದರೆ ನನ್ನ ಹತ್ತಿರ ರೂಪಾಯಿ ಕೊಟ್ಟೆನೆಂದು ಹೇಳಿಬಿಡಿರಿ," ಎಂದರು ಫೌಜದಾರರು.

ಅರ್ಜಿಯ ಮೇಲೆ ಸಹಿ ಬಿತ್ತು. ನನ್ನ ಜೇಬಿನಲ್ಲಿ ಹಣ ಬಿತ್ತು.

ಅದೇ ದಿನವೇ ನಲವತ್ತು ರೂಪಾಯಿಗಳನ್ನು ನನ್ನ ತಾಯಿಗೆ ಕಳಿಸಿ ಕೊಟ್ಟೆ. ಉಳಿದ ದುಡ್ಡು ನನ್ನ ಖರ್ಚಿಗಾಯಿತು.

"ರೂಪಾಯಿ ಎಲ್ಲಿವೆ?" ಎಂದು ಕೇಳಿದರು ಕಾರಕೂನರು.

"ಫೌಜದಾರರ ಹತ್ತಿರ ಇವೆ," ಎಂದು ಹೇಳಿದೆ ನಾನು.

ಅವರು ಒಳಗೊಳಗೇ ಹಲ್ಲು ಮಸೆದು ಸುಮ್ಮನಾದರು.

ಅವರಿಗಿದ್ದಷ್ಟು ಹಣದ ವ್ಯಾಮೋಹವನ್ನು ನಾನು ಅದುವರೆಗೆ ಬೇರೆ ಯಾರಲ್ಲೂ ನೋಡಿರಲಿಲ್ಲ. ಅವರು ಕಚೇರಿಯಲ್ಲಿರುತ್ತಿದ್ದುದು ಬಹಳ ಕಡಮೆ. ಬೆಳಿಗ್ಗೆ ಒಂದು ಬಾರಿ ಕಚೇರಿಗೆ ಬಂದು, ಒಂದೆರಡು ಕಾಗದ ಗೀಚಿ, ರಜಿಸ್ಟರು ಬರೆದು, ಫೌಜದಾರರ ಸಹಿಹಾಕಿಸಿ, ಸೈಕಲ್ ಹತ್ತಿಕೊಂಡು ಹಳ್ಳಿಗಳಿಗೆ ಹೊರಟು ಬಿಡುತ್ತಿದ್ದರು. ಚಿಕ್ಕ ಪುಟ್ಟ ವ್ಯಾಜ್ಯ, ಚಿಲ್ಲರೆ ಹೊಡೆದಾಟಗಳ ಪ್ರಕರಣಗಳಲ್ಲಿ ಹಳ್ಳಿಗರನ್ನು ಬೆದರಿಸಿ, ದಿನವೂ ನಾಲ್ಕಾರು ರೂಪಾಯಿಗಳನ್ನಾದರೂ ಸಂಪಾದಿಸ ದಿದ್ದರೆ ಅವರಿಗೆ ಊಟವೇ ರುಚಿಸುತ್ತಿರಲಿಲ್ಲ. ಹಳ್ಳಿಗಳ ಗೌಡರಿಂದ ಬತ್ತ, ಮೆಣಸಿನಕಾಯಿ, ಬೆಲ್ಲ ಮೊದಲಾದ ವಸ್ತುಗಳನ್ನು ತನ್ನ ಮನೆಯ ಉಪಯೋಗ ಕ್ಕೆಂದು ತಂದು ಪೇಟೆಯಲ್ಲಿ ಮಾರಿ ಕಾಸು ಮಾಡಿಕೊಳ್ಳುವ ಚಟವೂ ಅವರಿ ಗಿತ್ತು. ಅದೆಲ್ಲವೂ ನನಗೆ ಗೊತ್ತಾದುದು ಹಿಂದಿನಿಂದ.

ಆ ಎಪ್ಪತ್ತೈದು ರೂಪಾಯಿ ದೊರೆತ ಬಳಿಕ ಮೂರು ನಾಲ್ಕು ದಿನ ಬಯಲಾಟದ ಅರ್ಜಿಗಳು ಬಂದಿರಲಿಲ್ಲ. ಅಷ್ಟರಲ್ಲಿ ಎರೇಸೀಮೆ ಫೌಜದಾರರು ಮೂರುದಿನಗಳ ರಜೆ ತೆಗೆದುಕೊಂಡು ಊರಿಗೆ ಹೋದರು. ಅವರು ಹೋದ ದಿನವೇ ಆರೇಳು ಆಟಗಳ ಅರ್ಜಿಗಳು ಬರಬೇಕೇ!

ಫೌಜದಾರರು ರಜೆಯ ಮೇಲಿದ್ದಾಗ ಕಚೇರಿಯ ಮೇಲಧಿಕಾರಿಯೆಂದರೆ ಜಮಾದಾರರು. ಆಟದ ಅರ್ಜಿಗಳಿಗೆ ಶಿಫಾರಸು ಬರೆದು ಜಮಾದಾರರ ಸಹಿಹಾಕಿಸಿ ಮಾಮಲೇದಾರರ ಕಡೆಗೆ ಕಳಿಸಿಕೊಟ್ಟರು ಕಾರಕೂನರು. ಮಾಮಲೇದಾರರ ಅಪ್ಪಣೆ ಮಾತ್ರ ದೊರೆಯಲಿಲ್ಲ. ಅರ್ಜಿಗೆ ಫೌಜದಾರರ ಸಹಿಯೇ ಆಗಬೇಕೆಂದು ಹೇಳಿ ಅವರು ಆ ಜನರನ್ನು ಕಳಿಸಿಕೊಟ್ಟರು. ಫೌಜದಾರರ ಸಹಿ ಸಿಕ್ಕದಿದ್ದರೆ ಇನ್ಸ್‌ಪೆಕ್ಟರರ ಸಹಿಯನ್ನಾದರೂ ತರಲು ಹೇಳಿದ್ದರು.

ಮೂರು ದಿನಗಳ ತರುವಾಯ ಫೌಜದಾರರು ಬರುತ್ತಲೂ ಆ ಅರ್ಜಿಗಳನ್ನು ಅವರೆದುರಿಗಿಡಲಾಯಿತು. ಅವರು ನನ್ನನ್ನು ಕರೆದು,

“ಇವು ವಾಪಸು ಬರಲು ಕಾರಣವೇನು ಗೊತ್ತೇ?” ಎಂದರು.

ನನಗೆ ಗೊತ್ತಿರಲಿಲ್ಲ.

“ರಜೆಯ ಮೇಲೆ ಹೋಗುವ ಮೊದಲು ನಾನೇ ಮಾಮಲೇದಾರರಿಗೆ ಪತ್ರ ಬರೆದಿದ್ದೆ. ನಾನಿಲ್ಲದಾಗ ಜಮಾದಾರರ ಸಹಿಯ ಅರ್ಜಿ ಬಂದರೆ ನಾನು ಬರುವವರೆಗೆ ಅಪ್ಪಣೆ ಕೊಡದೆ ತಡೆಯಬೇಕೆಂದು ವಿನಂತಿ ಮಾಡಿಕೊಂಡಿದ್ದೆ.”

ಕಾರಕೂನರನ್ನು ‘ಫಜೀತಿ’ ಮಾಡಲು ಫೌಜದಾರರು ಮತ್ತೊಂದು ಉಪಾಯ ಯೋಚಿಸಿರಬೇಕೆಂದು ನನಗೆನ್ನಿಸಿತು.

ಅರ್ಜಿದಾರರನ್ನು ಕರೆದು ಫೌಜದಾರರು ಹೇಳಿದರು:

“ಮಾಮಲೇದಾರರಿಗೆ ನಿಮ್ಮ ಬಗ್ಗೆ ವಿಶ್ವಾಸ ಹುಟ್ಟಿಲ್ಲವೆಂತಲೇ ಅವರು ಅರ್ಜಿ ನಿರಾಕರಿಸಿದ್ದಾರೆ. ಈಗ ನಾನು ಶಿಫಾರಸು ಮಾಡುವದು ತಪ್ಪಾಗುವದು.”

ಅರ್ಜಿದಾರರು ಮುಖ ಸಪ್ಪೆಮಾಡಿಕೊಂಡು ಹೊರಗೆ ನಡೆದರು.

“ಫೌಜದಾರರಿಗೆ ಹೇಳಿ ಸಹಿ ಮಾಡಿಸಿಬಿಡಿರಿ ಶಿವಣ್ಣಾ,” ಎಂದರು ಕಾರಕೂನರು.

ಅಷ್ಟು ದಿನಗಳವರೆಗೆ ಮಾಮೂಲಿನ ವಿಷಯವನ್ನೇ ಪ್ರಸ್ತಾಪಿಸದಿದ್ದ ನಾನು ಅಂದು ಆ ವಿಚಾರವೆತ್ತಿ,

"ನಾನಿಲ್ಲಿಗೆ ಬಂದಂದಿನಿಂದ ಮೂವತ್ತು ನಲವತ್ತು ಆಟದ ಅರ್ಜಿಗಳಾದರೂ ಬಂದಿರಬೇಕು. ಅವೆಲ್ಲವುಗಳಿಂದ ಏನಿಲ್ಲ ಅಂದರೂ ಎರಡು ನೂರು ರೂಪಾಯಿ ಆದರೂ ಸಿಕ್ಕಿರಬೇಕು. ಅದರಲ್ಲಿ ಅರ್ಧ ಹಣ ಕೊಟ್ಟರೆ ನಾನು ಫೌಜದಾರರಿಗೆ ಹೇಳಿ ಸಹಿ ಹಾಕಿಸಿ ಕೊಡುತ್ತೀನಿ," ಎಂದು ಹೇಳಿದೆ.

"ನಾನು ಯಾರಿಂದಲೂ ಹಣ ತೆಗೆದುಕೊಂಡಿಲ್ಲ," ಎಂದರು ಕಾರಕೂನರು.

ಹೊರಗಡೆ ಕಾದು ನಿಂತಿದ್ದ ಅರ್ಜಿದಾರರನ್ನು ಒಳಗೆ ಕರೆದು ನಾನು ಕೇಳಿದೆ:

"ಮಾಮೂಲು ಎಷ್ಟು ಕೊಟ್ಟಿದ್ದೀರಿ ಕಾರಕೂನರಿಗೆ?"

ಆ ಐದು ಜನ ಅರ್ಜಿದಾರರು ಸೇರಿ ಒಟ್ಟು ಮೂವತ್ತು ರೂಪಾಯಿ ಕೊಟ್ಟ ಸಂಗತಿ ಹೊರಬಿತ್ತು.

"ಇವರಂತೇ ಹಿಂದೆ ಬಂದವರೂ ಕೊಟ್ಟಿದ್ದಾರೆ. ಅವನ್ನು ಕೊಡದಿದ್ದರೆ ನಾನು ಈ ಗೊಂದಲದಲ್ಲಿ ಕೈ ಹಾಕುವದಿಲ್ಲ," ಎಂದು ನಾನು ಹೇಳಿದಾಗ ಕಾರಕೂನರ ಮುಖ ಕಪ್ಪಿಟ್ಟಿತು.

ನನ್ನಿಂದಲೇ ಆ ಕೆಲಸವಾಗುವುದೆಂದು ಭಾವಿಸಿದ ಅರ್ಜಿದಾರರು ಆಗಲೂ ನನ್ನನ್ನು ಪೀಡಿಸತೊಡಗಿದರು. ಕಾರಕೂನರಿಗೆ ಕೊಟ್ಟಿದ್ದ ಹಣವನ್ನು ವಸೂಲು ಮಾಡಿಕೊಂಡರು ಮೂವತ್ತು ರೂಪಾಯಿಗಳಿಗೆ ಮತ್ತೆ ಇಪ್ಪತ್ತು ರೂಪಾಯಿ ಕೂಡಿಸಿ ನನ್ನ ಕೈಗೆ ಕೊಟ್ಟರು. ಆ ಸಂಗತಿಯನ್ನು ಫೌಜದಾರರಿಗೆ ತಿಳಿಸಿ, ಅವರ ಸಹಿ ಹಾಕಿಸಿ ತಂದು ಅರ್ಜಿದಾರರನ್ನು ಮಾಮಲೇದಾರರ ಕಡೆಗೆ ಕಳಿಸಿದ್ದಾಯಿತು. ತೊಂಡೇಬಾವಿ ಪೋಲೀಸ್ ಕಚೇರಿಯಲ್ಲಿ ಕಾರಕೂನರಿಗಿಂತ ಬಾರನಿಸಿಯ ಪ್ರಭಾವವೇ ಹೆಚ್ಚು ಎಂದು ಮಾತನಾಡಿಕೊಳ್ಳುತ್ತಾ ಅವರು ಹೊರಟುಹೋದರು. ಈ ವಿಚಾರ ಒಂದು ಹಳ್ಳಿಯಿಂದ ಇನ್ನೊಂದು ಹಳ್ಳಿಗೆ ಹರಡಿಕೊಂಡು, ಕಚೇರಿಗೆ ಬಂದವರೆಲ್ಲಾ ನನ್ನ ಹತ್ತಿರವೇ ಬರಲಾರಂಭವಾಯಿತು. ಕಾರಕೂನರನ್ನು ಮಾತನಾಡಿಸುವವರೇ ಇಲ್ಲವಾದರು. ಸ್ವಾಭಾವಿಕವಾಗಿಯೇ ಅವರಿಗೆ ಹೊಟ್ಟೆಯುರಿ ಆರಂಭವಾಯಿತು. ಬರಬರುತ್ತಾ ಎಲ್ಲ

ಜನರೂ ಎಲ್ಲ ಕೆಲಸಗಳಿಗೂ ನನ್ನನ್ನೇ ಕೇಳತೊಡಗಿದರು. ಆದರಿಂದಾಗಿ ಕಾರಕೂನರ ಒಣ ಪ್ರತಿಷ್ಠೆಗೆ ಏಟು ಬಿದ್ದಂತಾಯಿತು, ಸಂಪಾದನೆಯೂ ಕಡಮೆಯಾಯಿತು. ಅವರು ಸ್ವಾಭಾವಿಕವಾಗಿ ನನ್ನನ್ನು ದ್ವೇಷಿಸತೊಡಗಿದರು.

ನಿಜವಾಗಿ ಅವರ ದ್ವೇಷ ಕಟ್ಟಿಕೊಳ್ಳುವ ಮನಸ್ಸು ನನಗಿರಲಿಲ್ಲ. ಯಾರೊಡನೆಯೂ ದ್ವೇಷ ಬೆಳೆಸುವ ಮನುಷ್ಯನಲ್ಲ ನಾನು. ಎಲ್ಲರ ಜೊತೆಗೂ ಪ್ರೇಮದಿಂದಿರಬೇಕೆಂಬುದೇ ನನ್ನ ಆಶಯ. ಆದರೆ, ಕಾರಕೂನರೊಡನೆ ಹಾಗೆ ಮನಸ್ತಾಪ ಬೆಳೆಯಿತು. ನಾವಿಬ್ಬರೂ ಒಂದೇ ಕಡೆ ಕೂಡಿ ಕೆಲಸ ಮಾಡಬೇಕಾಗಿದ್ದಿತಾದುದರಿಂದ ಆ ದ್ವೇಷದಿಂದ ಬಹಳ ತೊಂದರೆಯಾಗತೊಡಗಿತು. ನನ್ನ ಮಟ್ಟಿಗೆ ನಾನು ನನ್ನ ಕೆಲಸವನ್ನು ಯಾವುದರಲ್ಲೂ ಏನೂ ತಪ್ಪಾಗದಂತೆ ಮಾಡಿ ಮುಗಿಸುತ್ತಿದ್ದೆ. ನನ್ನ ಕೆಲಸದಲ್ಲಿ ತಪ್ಪು ಹುಡುಕಿ ತೆಗೆಯಲು ಕಾರಕೂನರು ಯತ್ನಿಸಿದರೂ ಅವರಿಗೇನೂ ಫಲ ದೊರೆಯಲಿಲ್ಲ. ಆದರೆ, ಆಗಾಗ ಅವರ ಕಿರುಕುಳ ಮಾತ್ರ ಅಸಹನೀಯವಾಗತೊಡಗಿತು.

ಎರಡು ಮೂರು ತಿಂಗಳ ಅವಧಿಯಲ್ಲಿ ನನಗೆ ಎಲ್ಲಾ ಹಳ್ಳಿಗಳ ಗೌಡರ ಮತ್ತು ಪ್ರಮುಖರ ಪರಿಚಯವಾಗಿತ್ತು. ಅವರೆಲ್ಲರೂ ಫೌಜದಾರರ ಹತ್ತಿರ ಬಂದಾಗ ಮೊದಲು ನಾನು ಅವರನ್ನು ಮಾತನಾಡಿಸಬೇಕಾಗುತ್ತಿತ್ತು. ನನ್ನ ಮೂಲಕ ಅವರು ಫೌಜದಾರರನ್ನು ಕಾಣಬೇಕಾಗುತ್ತಿತ್ತು. ದುಡ್ಡು ಸಿಗುವಂತಿದ್ದ ಪ್ರಕರಣಗಳಲ್ಲಿ ಅದನ್ನು ಗೊತ್ತುಮಾಡಿ ವಸೂಲುಮಾಡುವ ಕೆಲಸವನ್ನೂ ಫೌಜದಾರರು ನನಗೇ ಒಪ್ಪಿಸುತ್ತಿದ್ದರು. ಆ ಜನರು ಹೊರಟು ಹೋದ ಬಳಿಕ ನಾನು ಆ ಹಣವನ್ನು ಫೌಜದಾರರಿಗೆ ಕೊಡುತ್ತಿದ್ದೆ. ನನಗೆ ಮಾತ್ರ ಆ ಹಣದಿಂದ ಒಂದು ಕಾಸೂ ಸಿಕ್ಕುತ್ತಿರಲಿಲ್ಲ. ಜನರಿಂದ ದುಡ್ಡು ಕಿತ್ತುಕೊಳ್ಳುವ ಸಮಯದಲ್ಲೇ ನನಗಾಗಿ ನಾಲ್ಕೈದು ರೂಪಾಯಿಗಳನ್ನೂ ನಾನು ಸೆಳೆದುಕೊಂಡರೆ ಫೌಜದಾರರೇನೂ ಬೇಡವೆನ್ನುತ್ತಿರಲಿಲ್ಲ. ಅವರಿಗೆ ಮುಟ್ಟಬೇಕಾಗಿದ್ದುದು ಮುಟ್ಟಿದರೆ ಆಯಿತು. ನಾವು ನಮಗೆಂದು ಬೇಕಾದಷ್ಟು ಸುಲಿಯಲೂ ಅವರ ಅಡ್ಡಿಯಿರಲಿಲ್ಲ. ಆದರೆ ನನಗೇನೂ ಹೆಚ್ಚಿನ ಆಸೆಯಿರಲಿಲ್ಲ. ನನ್ನ ಖರ್ಚು, ನನ್ನ ಮನೆಯವರ ಖರ್ಚು ನಡೆದು ಹೋಕಿಗೆ ಸ್ವಲ್ಪ ಹಣ ಉಳಿದರೆ ಸಾಕಾಗಿತ್ತು. ಬೇರೆಯವರು ದುಡ್ಡೆಂದರೆ ಬಾಯಿಬಾಯಿ ಬಿಡುತ್ತಿದ್ದ

ಹಾಗೆ ನಾನೇನೂ ಮಾಡುತ್ತಿರಲಿಲ್ಲ. ಕಾರಕೂನರಂಥವರಿಗೆ ಹಣ ಗಳಿಸುವ ಹವ್ಯಾಸವೊಂದನ್ನು ಬಿಟ್ಟರೆ ಜೀವನದಲ್ಲಿ ಯಾವ ಧ್ಯೇಯವೂ ಇರಲಿಲ್ಲ.

ನನಗೂ ಯಾವುದೊಂದು ಉದಾತ್ತ ಧ್ಯೇಯವಿರಲಿಲ್ಲವೆಂಬ ಮಾತೇನೋ ನಿಜವಾದರೂ ಹಣದ ಅತ್ಯಾಸೆಗೆ ಮಾತ್ರ ನಾನು ತೊಡಕಿಕೊಂಡಿರಲಿಲ್ಲವಲ್ಲ. ಅದೊಂದು ದೊಡ್ಡ ಗುಣವೆಂದೂ ನಾನೇನು ಜಂಬ ಕೊಚ್ಚಿಕೊಳ್ಳುವುದಿಲ್ಲ.

ನನ್ನ ಸಹಕಾರವಿಲ್ಲದಿದ್ದರೆ ತಾನೇನನ್ನು ಸಂಪಾದಿಸುವುದು ಸಾಧ್ಯವಾಗದೆಂಬ ಸತ್ಯ ಮನದಟ್ಟಾಗುತ್ತಲೂ ಕಾರಕೂನರು ಬಣ್ಣ ಬದಲಿಸಿ ಮತ್ತೆ ನನ್ನೊಡನೆ ಸ್ನೇಹದಿಂದ ನಡೆದುಕೊಳ್ಳತೊಡಗಿದರು. ಅದು ಕೇವಲ ಅಭಿನಯ, ಕೃತ್ರಿಮ ಸ್ನೇಹ ಎಂಬುದೇನೋ ನನಗೆ ತಿಳಿದಿತ್ತು. ಆದರೂ ಅವರ ದ್ವೇಷದಿಂದಲೂ ಯಾವ ಪ್ರಯೋಜನವು ಇರಲಿಲ್ಲ. ಸರಿ. ಅವರು ಸ್ನೇಹದಿಂದ ಮಾತನಾಡಿಸಿದಾಗಲೆಲ್ಲ ನಾನೂ ಸರಳವಾಗಿ ವರ್ತಿಸತೊಡಗಿದೆ. ಕಚೇರಿಯಲ್ಲಿ ಮತ್ತೆ ಸೌಹಾರ್ದ ವಾತಾವರಣ ನೆಲೆಸಿತು. ಬಯಲಾಟಗಳ ಹಣದಲ್ಲಿ ಅರ್ಧ ಭಾಗ ಅವರಿಗೂ ಸಲ್ಲತೊಡಗಿತು.

ಹಳ್ಳಿಗರಿಂದ ನಮಗೆ ಹಣ ಬರುವ ಇನ್ನೂ ಹಲವು ಬಾಬುಗಳಿದ್ದುವು. ಬಂದೂಕು ಲೈಸೆನ್ಸ್ ಮತ್ತು ಗೌಡರ ನೇಮಕಗಳ ವಿಷಯದಲ್ಲಿ ಶಿಫಾರಸು ಮಾಡುವಾಗಲೂ ಸಾಕಷ್ಟು ಹಣ ಬರುತ್ತಿತ್ತು.

ಹಳ್ಳಿಯ ಜನರಿಗೆ ಬಂದೂಕು ಎಂದರೆ ಬಹಳ ಪ್ರೇಮ. ಅದನ್ನು ಸರಿಯಾಗಿ ಹಿಡಿಯಲು ತಿಳಿಯದಿದ್ದರೂ ಸರಿಯೆ, ಗುಂಡು ಹೊಡೆಯಲು ಗೊತ್ತಿರದಿದ್ದರೂ ಸರಿಯೆ, ಬಂದೂಕು ಮಾತ್ರ ಅವರ ಹತ್ತಿರವಿದ್ದರಾಯಿತು. ಬಂದೂಕು ಇಟ್ಟುಕೊಂಡವನು ದೊಡ್ಡ ಮನುಷ್ಯನೆಂಬ ಹುಚ್ಚು ಕಲ್ಪನೆಯೂ ಇದೆ ಹಳ್ಳಿಗರಲ್ಲಿ. ಆ ಬಂದೂಕುಗಳ ಉಪಯೋಗವಂತೂ ಇಲ್ಲವೇ ಇಲ್ಲ. ವಿಜಯದಶಮಿಯ ಕಾಲಕ್ಕೆ ನಡೆಯುವ ಶಸ್ತ್ರಾಸ್ತ್ರಗಳ ಪೂಜೆಯ ಕಾಲಕ್ಕೆ ಅವುಗಳಿಗೂ ಪೂಜೆಯಾಗುತ್ತಿತ್ತು! ಅಷ್ಟೆ.

ಬಂದೂಕಗಳಿಗೆ ಲೈಸೆನ್ಸ್ ದೊರೆಯುವ ಮೊದಲು ನಮ್ಮ ಶಿಫಾರಸು ಬೇಕು. ಅದಕ್ಕಾಗಿ ಹಳ್ಳಿಗರು ನೂರಾರು ರೂಪಾಯಿಗಳವರೆಗೂ ಖರ್ಚು ಮಾಡುತ್ತಿದ್ದರು. ಪಕ್ಷ ಪಂಗಡಗಳ ಜಗಳಗಳಿದ್ದ ಊರಿನವರಂತೂ ಸಾವಿರಾರು ರೂಪಾಯಿಗಳನ್ನೂ ವ್ಯಯಿಸಲು ಹಿಂಜರಿಯುತ್ತಿರಲಿಲ್ಲ.

ಗೌಡರ ನೇಮಕದ ವಿಚಾರವೂ ಹಾಗೆಯೇ. ನಮ್ಮ ಕಚೇರಿಯ ಅಧಿಕಾರಕ್ಕೊಳಪಟ್ಟ ೯೭ ಹಳ್ಳಿಗಳ ಪೈಕಿ ನಾಲ್ಕೈದು ಹಳ್ಳಿಗಳ ಗೌಡರನ್ನು ಬಿಟ್ಟರೆ ಇನ್ನುಳಿದವರಿಗೆಲ್ಲ ವರ್ಷಕ್ಕೊಂದಾವರ್ತಿ ಶಿಫಾರಸು ಅವಶ್ಯವಾಗಿತ್ತು. ಪ್ರತಿ ಸಲವೂ ಐದು ರೂಪಾಯಿ ಮಾಮೂಲು ಸಲ್ಲಿಸುವ ಪರಿಪಾಠವೂ ಬಹಳ ದಿನಗಳಿಂದ ಬಳಕೆಯಲ್ಲಿತ್ತು. ಅರ್ಥಾತ್, ಆ ಹಣವೂ ಕಾರಕೂನ, ಬಾರನಿಸಿ ಇಬ್ಬರಿಗೂ ಸಮವಾಗಿ ಸಲ್ಲತಕ್ಕದಾಗಿತ್ತು. ಲೋಭಿಯಾಗಿದ್ದ ಕಾರಕೂನರು ನನ್ನ ಭಾಗವನ್ನು ತಾನೇ ನುಂಗಿಬಿಡುತ್ತಿದ್ದರು. ಒಂದೆರಡು ಬಾರಿ ಫೌಜ ದಾರರಿಂದ ಹೇಳಿಸಿದ ತರುವಾಯ ಹಾದಿಗೆ ಬಂದರು. ಅನಂತರವೂ ಕೆಲವು ಸಲ ನನಗೆ ಹಣ ಕೊಟ್ಟರೆ ಕೆಲವು ಸಲ ಕೊಡುತ್ತಿರಲಿಲ್ಲ. ಅವರ ವರ್ತನೆ ಯನ್ನು ಕಂಡ ಹಾಗೆಲ್ಲ ನನಗೆ ಹೇಸಿಕೆಯೆನ್ನಿಸುತ್ತಿತ್ತು.

ಅಲ್ಲಿದ್ದ ಇತರ ಪೋಲೀಸರೂ ಈ ಕಾರಕೂನರಂಥವರೇ. ಅವರ ಕೆಟ್ಟ ಚಾಳಿಯಿಂದ ಬೇಸರಗೊಂಡ ಅಧಿಕಾರಿಗಳು ಬೇಕೆಂತಲೇ ಅವರನ್ನು ಮಲೆ ನಾಡಿನ ಸ್ಥಳಕ್ಕೆ ವರ್ಗಮಾಡಿದ್ದರು – ಮಲೇರಿಯದಿಂದ ಬುದ್ಧಿ ಕಲಿಯಲೆಂದು. ಆದರೆ, ಮಲೇರಿಯಕ್ಕೆ ಹೆದರುವ ಜನರೇ ಅವರು! ಮಲೇರಿಯವೇ ಅವರಿಗೆ ಹೆದರಬೇಕು, ಅಷ್ಟೆ.

ನಮ್ಮ ಜಮಾದಾರರು ಮಾತ್ರ ಬಹಳ ಒಳ್ಳೆಯವರು. ಹಸುವಿನಂಥ ಸಾಧುಪ್ರಾಣಿ.

೧೦

# ಕದಮ್ ಜಮಾದಾರರು : ಮೇಜವಾನಿ

ಜಮಾದಾರರು ಮರಾಠಾ ಜನಾಂಗದವರು. ಕದಮ್ ಎಂದು ಅವರ ಹೆಸರು. ಅವರಿಗಾಗ ನಲವತ್ತೈದು ವರ್ಷ ವಯಸ್ಸಿರಬಹುದು. ಮೂವರು ಗಂಡುಮಕ್ಕಳಿದ್ದರು. ತಂದೆಯಂತೆ ಅವರೂ ಸಾಧುಸ್ವಭಾವದವರು. ಜಮಾದಾರರ ಪತ್ನಿಯೂ ಸುಸ್ವಭಾವದವಳೇ ಆಗಿದ್ದಳು. ಅವರ ಸಾತ್ವಿಕ ಜೀವನವನ್ನು ಕಂಡು ಯಾರಾದರೂ ಮೆಚ್ಚಿಕೊಳ್ಳಬಹುದಾಗಿತ್ತು.

ಕದಮ್ ಜಮಾದಾರರು ತಾವಾಗಿಯೆ ಎಂದೂ ಲಂಚಕ್ಕೆ ಕೈಯೊಡ್ಡುತ್ತಿರಲಿಲ್ಲ. ಸ್ವಸಂತೋಷದಿಂದ ಯಾರಾದರೂ ಕೊಟ್ಟರೆ ಮಾತ್ರ ಸ್ವೀಕರಿಸುವುದು ಅವರ ಪದ್ಧತಿಯಾಗಿತ್ತು. ಮನೆಯಲ್ಲಿದ್ದ ಖಾರ–ರೊಟ್ಟಿಯನ್ನೇ ತಿಂದು ಸಮಾಧಾನ ಪಟ್ಟುಕೊಳ್ಳುವ ಜೀವ ಅದು. ಅವರ ಮನೆಯಲ್ಲಿ ಹೈನಕ್ಕೆ ಕೊರತೆಯಿರಲಿಲ್ಲ. ಎರಡು ಎಮ್ಮೆಗಳನ್ನೂ ಒಂದು ಹಸುವನ್ನೂ ಸಾಕಿಕೊಂಡಿದ್ದರು. ಅವುಗಳ ಹಾಲನ್ನು ಅವರೆಂದೂ ಮಾರಿದವರಲ್ಲ. ಬೆಳಿಗ್ಗೆ ಹಾಲು ಹಿಂಡಿಕೊಳ್ಳುತ್ತಲೂ ತಮ್ಮ ಮನೆಗೆ ಸಾಕಾಗುವಷ್ಟು ಇಟ್ಟುಕೊಂಡು ಉಳಿದುದನ್ನು ಇತರ ಪೋಲೀಸರ ಮನೆಗಳಿಗೆ ಕಳಿಸುತ್ತಿದ್ದರು. ಮೊಸರು, ಮಜ್ಜಿಗೆಗಳ ಮಾತೂ ಹಾಗೆಯೇ. ಯಾರು ಬಂದು ಕೇಳಿದರೂ ಇಲ್ಲವೆನ್ನದೆ ಕೊಟ್ಟು ಕಳಿಸುತ್ತಿದ್ದರು. ಕದಮ ಜಮಾದಾರರ ಮನೆಯಿಂದ ಪುಕ್ಕಟೆಯಾಗಿ ಹಾಲು ಸಿಗುತ್ತಿದ್ದುದರಿಂದ ಎಷ್ಟೋ ಜನ ಪೋಲೀಸರಿಗೆ ಹಾಲಿನ ಖರ್ಚು ತಪ್ಪುತ್ತಿತ್ತು. ಅವರು ಹಳ್ಳಿಗಳಲ್ಲಿ ತಿರುಗಿ ಜಮಾದಾರರ ದನಗಳಿಗೆ ಬೇಕಾಗುವ ಮೇವು, ಹೊಟ್ಟು, ಹತ್ತಿಯ ಕಾಳುಗಳನ್ನು ತಂದುಕೊಡುತ್ತಿದ್ದರು.

ಜಮಾದಾರರಾಗಿದ್ದರೂ ಕದಮರಿಗೆ ಆ ಅಧಿಕಾರದ ಹೆಮ್ಮೆ ಕೊಂಚವೂ ಇರಲಿಲ್ಲ. ಅವರು ಸ್ವತಃ ಬೆಳಿಗ್ಗೆ ಎದ್ದೊಡನೆ ದನಗಳನ್ನು ಹೊರಗೆ ಕಟ್ಟಿ, ಅವುಗಳಿಗೆ ಹತ್ತಿಯಕಾಳು, ಮುಸುರೆ ನೀರು ಇಟ್ಟು, ಕೊಟ್ಟಿಗೆಯನ್ನು ಶುಚಿಗೊಳಿಸಿ, ದನಗಳ ಮೈ ತೊಳೆದು, ಮನೆಗೆ ಬೇಕಾಗುವ ಹತ್ತಿಪ್ಪತ್ತು ಕೊಡ ನೀರು ಹೊತ್ತುತಂದು, ಹಾಲು ಹಿಂಡಿಕೊಳ್ಳುತ್ತಿದ್ದರು. ಆ ವೇಳೆಯೊಳಗಾಗಿ ಅವರ ಹೆಂಡತಿ ರೊಟ್ಟಿ ಬೇಯಿಸಿ, ನಾಲ್ಕು ರೊಟ್ಟಿಗಳನ್ನು ಅರ್ಧ ತಂಬಿಗೆಯಷ್ಟು ಹಾಲಿನಲ್ಲಿ ಹಾಕಿ, ಅದರಲ್ಲಿ ಅರ್ಧಸೇರು ಬೆಲ್ಲ ಕೂಡಿಸಿಡುತ್ತಿದ್ದಳು. ಕದಮರು ಸ್ನಾನ ತೀರಿಸಿಕೊಂಡು ಬಂದು ಆ ಹಾಲು–ರೊಟ್ಟಿ ತಿಂದು ದನಗಳನ್ನು ಮೇಯಲು ಬಿಡುತ್ತಿದ್ದರು.

ಪೋಲೀಸು ವಠಾರ ಮತ್ತು ಕಚೇರಿಯ ಸುತ್ತಮುತ್ತಲೂ ಸಾಕಷ್ಟು ವಿಶಾಲವಾದ ಬಯಲು ಸ್ಥಳವಿತ್ತು. ಅಲ್ಲಿ ಹುಲ್ಲಿಗೇನೂ ಕೊರತೆಯಿರಲಿಲ್ಲ. ಜಮಾದಾರರ ದನಗಳು ಅಲ್ಲಿ ಯಥೇಚ್ಛವಾಗಿ ಮೇಯುತ್ತಿದ್ದುವು. ಜಮಾದಾರರಿಗೆ ಬೇರೆ ಕೆಲಸಗಳಿದ್ದಾಗ ಅವರ ವೃದ್ಧ ತಾಯಿ ದನಗಳನ್ನು ನೋಡಿಕೊಳ್ಳುತ್ತಿದ್ದಳು.

ಅವರು ತೊಂಡೇಬಾವಿಗೆ ಬಂದುದಕ್ಕೆ ಆರು ತಿಂಗಳಾಗಿರಬಹುದು. ಮೂರು ದನಗಳು, ಅವುಗಳ ಮೂರು ಕರುಗಳು ಹಾಕುತ್ತಿದ್ದ ಸಗಣಿಯನ್ನು ಹಿತ್ತಿಲಲ್ಲಿನ ತಿಪ್ಪೆಯಲ್ಲಿ ಶೇಖರಿಸಿದ್ದರು. ಅದು ಮಳೆಗಾಲದಲ್ಲಿ ಕೊಳೆತು ಅತ್ಯುತ್ತಮ ತರಗತಿಯ ಗೊಬ್ಬರ ಸಿದ್ಧವಾಗಿತ್ತು. ಎಷ್ಟೋ ರೈತರು ಅದನ್ನು ಕೊಳ್ಳಲು ಸಿದ್ಧವಾಗಿದ್ದರು. ಪಕ್ಕದ ಊರಿನ ಬಸವನಗೌಡನೂ ಕೇಳುತ್ತಿದ್ದ. ಅವನಿಗೇ ಕೊಟ್ಟುಬಿಡುವುದೆಂದು ಜಮಾದಾರರೂ ನಿಶ್ಚಯಿಸಿದ್ದರು. ಪೋಲೀಸರೊಡನೆ ಬಸವನಗೌಡನಿಗಿದ್ದ ಸ್ನೇಹವೇ ಅದಕ್ಕೆ ಕಾರಣ.

ಬಸವನಗೌಡನಷ್ಟು ಉದಾರ ಸ್ವಭಾವದ ಬೇರೆ ಗೌಡರನ್ನೇ ಯಾರೂ ನೋಡಿರಲಿಲ್ಲ. ಎಲ್ಲ ಪೋಲೀಸರಿಗೂ ಅವನು ಸಹಾಯಮಾಡುತ್ತಿದ್ದ. ಅವನ ಹತ್ತಿರ ಹೋದ ಪೋಲೀಸರಿಗೆ ಒಂದೆರಡು ಚಕ್ಕಡಿಯಷ್ಟು ಕಟ್ಟಿಗೆಯೂ ಸಿಗುತ್ತಿತ್ತು. ಸುಗ್ಗಿಯ ಕಾಲದಲ್ಲಿ ಎಲ್ಲರಿಗೂ ಮೆಣಸಿನಕಾಯಿ ಸಿಕ್ಕಲೇಬೇಕು. ಅವನ ತೋಟದ ಕಾಯಿಪಲ್ಯವನ್ನಂತೂ ಎಲ್ಲ ಪೋಲೀಸರೂ ತಿನ್ನಲೇಬೇಕು.

ಬಸವನಗೌಡನದು ದೊಡ್ಡ ಕಮತ. ಸಾಕಷ್ಟು ಜಮೀನು. ಮನೆಯಲ್ಲಿ

ಐದಾರು ಮಂದಿ ಆಳುಗಳು. ಅವನು ಉದಾರಿಯಾಗಿದ್ದುದರಿಂದಲೇ ಏನೋ, ಅವನಿಗೆ ಯಾವಾಗಲೂ ಯಾವುದಕ್ಕೂ ಕೊರತೆಯಾಗುತ್ತಿರಲಿಲ್ಲ. ಅವನ ಭೂಮಿಯಲ್ಲಿ ಬೆಳೆಯುತ್ತಿದ್ದುದೂ ದಿವ್ಯವಾದ ಬೆಳೆ. ಆ ಬೆಳೆಯನ್ನೂ ಆತ ತನ್ನ ಮಕ್ಕಳಂತೆಯೇ ನೋಡಿಕೊಳ್ಳುತ್ತಿದ್ದ. ಅದಕ್ಕೆ ಗೊಬ್ಬರ, ನೀರು, ಆರೈಕೆ ಯಾವುದರಲ್ಲೂ ಏನೂ ಕಡಮೆಯಾಗುತ್ತಿರಲಿಲ್ಲ. ಒಳ್ಳೆಯ ಗೊಬ್ಬರ ಎಲ್ಲಿ ಕಾಣಿಸಿದರೂ ಅದನ್ನು ಕೊಂಡು ತಂದು ತನ್ನ ಭೂಮಿಗೆ ಹಾಕುವುದು ಅವನ ಪದ್ಧತಿಯಾಗಿತ್ತು. ಕದಮರ ಗೊಬ್ಬರವಂತೂ ಅವನ ಮನಸ್ಸನ್ನು ಬಲವಾಗಿ ಆಕರ್ಷಿಸಿಕೊಂಡಿತ್ತು.

"ಬಸವನಗೌಡನಿಗೇ ಗೊಬ್ಬರ ಕೊಟ್ಟುಬಿಡಿರಿ ಜಮಾದಾರರೇ!" ಎಂದು ನಾನೂ ಶಿಫಾರಸು ಮಾಡಿದೆ.

ಅವನು ಕೊಡಲು ಬಂದ ಹಣವನ್ನು ಅವರು ಸ್ವೀಕರಿಸಲಿಲ್ಲ. ಹಾಲು-ಮೊಸರುಗಳನ್ನೇ ಮಾರಾಟ ಮಾಡದಿದ್ದ ಜಮಾದಾರರು ಗೊಬ್ಬರವನ್ನು ಮಾರಲು ಸಿದ್ಧರಾಗಬಹುದೇ!

ಬಸವನಗೌಡನೂ ಅವರ ಉಪಕಾರ ಮರೆಯಲಿಲ್ಲ. ಹೊಲದಲ್ಲಿ ಹಸಿಯ ಮೇವು ಬರಲಾರಂಭವಾಗುತ್ತಲೂ ನಿತ್ಯವೂ ಒಂದು ಆಳಿನ ಮೂಲಕ ಒಂದು ಹೊರೆ ಮೇವು ಕಳಿಸತೊಡಗಿದ. ಹಸಿಯ ಮೇವೆಂದರೆ ದನಗಳಿಗೆ ಮೃಷ್ಟಾನ್ನ ಇದ್ದಂತೆ. ಜಮಾದಾರರ ದನಗಳು ಹೃಷ್ಟಪುಷ್ಟವಾಗಿ ಬೆಳೆದು ಹೆಚ್ಚು ಹೆಚ್ಚು ಹಾಲು ಕೊಡುತ್ತ ಬಂದವು.

ದನಗಳ ಕರುಗಳನ್ನು ಚೆನ್ನಾಗಿ ಮೇಯಿಸಿ, ಅವು ದೊಡ್ಡವುಗಳಾಗುತ್ತಲೂ ಮಾರಿಬಿಡುತ್ತಿದ್ದರು ಕದಮ ಜಮಾದಾರರು. ಅವುಗಳ ಮಾರಾಟದಿಂದ ಬಂದ ಹಣವನ್ನು ಮನೆಯ ಖರ್ಚಿಗಾಗಿ ಉಪಯೋಗಿಸದೆ, ನೇರವಾಗಿ ಪೇಟೆಗೆ ಹೋಗಿ ಬಂಗಾರ ಕೊಳ್ಳುತ್ತಿದ್ದರು. ಹಾಗೆ ಅವರು ಎಂಟು ಹತ್ತು ತೊಲಗಳಷ್ಟು ಬಂಗಾರ ಶೇಖರಿಸಿದ್ದರು.

ಪೋಲೀಸರಲ್ಲಿ ಯಾರಿಗಾದರೂ ಅಡ್ಡಿ ಅಡಚಣೆ ಬಂದೊದಗಿದಾಗ ನಾಲ್ಕೈದು ರೂಪಾಯಿ ಬೇಕಾದಾಗ ಅವರು ಜಮಾದಾರರನ್ನೇ ಕೇಳುತ್ತಿದ್ದರು. ಯಾರಿಗೂ ಇಲ್ಲವೆನ್ನುತ್ತಿರಲಿಲ್ಲ ಜಮಾದಾರರು. ಆಗ ಕೊಟ್ಟು, ಸಂಬಳದ ದಿನ ಆ ಹಣವನ್ನು ಹಿಂದಿರುಗಿ ಪಡೆಯುತ್ತಿದ್ದರು. ಒಂದು ಕೂರಿಗೆ ಜಮೀನು,

ಒಂದು ಮನೆ, ಇಷ್ಟು ಪಿತ್ರಾರ್ಜಿತ ಆಸ್ತಿಯೂ ಇತ್ತು ಅವರ ಊರಿನಲ್ಲಿ. ಅದು ಬಯಲುಸೀಮೆ. ನಾಲ್ಕು ವರ್ಷಗಳಿಗೊಮ್ಮೆಯಾದರೂ ಒಳ್ಳೆಯ ಬೆಳೆ ಬಂದರೆ ಅವರ ಪುಣ್ಯ. ಹೊಲದ ಉತ್ಪನ್ನವನ್ನೂ ಅವರು ಸಂಸಾರದ ವೆಚ್ಚಕ್ಕೆ ವಿನಿಯೋಗಿಸದೆ ಬ್ಯಾಂಕಿನಲ್ಲಿ ಕೂಡಿಡುತ್ತಿದ್ದರು. ತಮ್ಮೂರಿನಲ್ಲಿ ಯಾವುದೊಂದು ಹೊಲ ಮಾರಾಟಕ್ಕೆ ಬಂದಾಗ ಅದನ್ನು ಖರೀದಿ ಮಾಡುತ್ತಿದ್ದರು. ಹಾಗೆ ಅವರು ಹನ್ನೆರಡು ಕೂರಿಗೆಗಳಷ್ಟು ಭೂಮಿಯನ್ನು ಕೊಂಡುಕೊಂಡಿದ್ದರು. ಅದರಿಂದ ಬರುವ ಉತ್ಪನ್ನವೂ ಬ್ಯಾಂಕಿನಲ್ಲಿ ಕೂಡಿ ಬೀಳುತ್ತಿತ್ತು.

ನಮಗೆ ಖೀರು – ಪುರಿ ತಿನ್ನುವ ಆಸೆಯಾದರೆ ಕದಮರಿಗೆ ಹೇಳಿ ಅವರ ಮನೆಯಲ್ಲಿ ಮಾಡಿಸುತ್ತಿದ್ದೆವು. ಸ್ವತಃ ಕದಮರೇ ಚೆನ್ನಾಗಿ ಅಡುಗೆ ಮಾಡುತ್ತಿದ್ದರು. ಅವರ ಹೆಂಡತಿಗೂ ಕೂಡ ಅಂಥ ಅಡುಗೆ ಮಾಡಲು ಬರುತ್ತಿರಲಿಲ್ಲ. ಕದಮರು ಪೋಲೀಸ್ ಇಲಾಖೆಗೆ ಸೇರಿಕೊಂಡ ಹೊಸದರಲ್ಲಿ ಫೌಜದಾರರೊಬ್ಬರ 'ಆರ್ಡರ್ಲಿ' ಯಾಗಿದ್ದಾಗ ಅವರ ಅಡುಗೆಯವನಿಂದ ಬಗೆಬಗೆಯ ಅಡುಗೆ ಮಾಡಲು ಕಲಿತುಕೊಂಡಿದ್ದರಂತೆ.

"ನಾಳೆ ಶ್ರೀಖಂಡಪುರಿ ಮಾಡುತ್ತೀರಾ ಜಮಾದಾರರೆ?" ಎನ್ನುತ್ತಿದ್ದೆ ನಾನು.

"ಓಹೋ. ಯಾಕಾಗಲೊಲ್ಲದು!" ಎಂದು ಅದರ ಸಿದ್ಧತೆಗೆ ತೊಡಗುತ್ತಿದ್ದರು ಜಮಾದಾರರು.

ಮೊದಲನೆಯ ಸಲ ಆ ಅಡುಗೆಗೆ ಅವಶ್ಯವಿದ್ದ ಸಾಮುಗ್ರಿಗಳನ್ನು ನಾನು ಪೇಟೆಯಿಂದ ತಂದು ಜಮಾದಾರರ ಮನೆಗೆ ಕಳಿಸಿಕೊಟ್ಟಾಗ ಅವರು ಬಹಳ ಕೋಪಿಸಿಕೊಂಡರು.

"ನಿಮ್ಮಿಂದ ಸಾಮಾನು ತಗೊಂಡು ಮಾಡಿಕೊಡಲು ನಾನೇನು ಖಾನಾವಳಿ ಇಟ್ಟಿರುವೆನೇನು?"

"ಅಲ್ಲ ಜಮಾದಾರರೇ. ಸಾಮಾನು ಯಾರು ತಂದರೇನಂತೆ. ನಾನೇನು ನನ್ನ ಸಂಬಳದ ಹಣ ಖರ್ಚುಮಾಡಿ ಆ ಸಾಮಾನು ತಂದಿಲ್ಲ. ಹರಾಮದ ರೊಕ್ಕ. ಹೀಗೇ ಖರ್ಚಾಗಲಿ. ನಾನಾಗಲಿ ನೀವಾಗಲಿ ನಮ್ಮ ಸಂಬಳದಿಂದ ಇಂಥ ಪದಾರ್ಥ ಮಾಡಿ ತಿನ್ನುವದು ಸಾಧ್ಯವಿದೆಯೇ? ಹಾಗೇನಾದರೂ ನಾವು ಮಾಡಿದರೆ ತಿಂಗಳಲ್ಲಿ ಇಪ್ಪತ್ತು ದಿನ ಉಪವಾಸವಿರಬೇಕಾದೀತು ನಾವು!"

"ಅದೆಲ್ಲಾ ಸರಿ. ಆದರೂ ಒಂದು ದಿನ ನಾನು ಮಾಡಿ ನೀಡಿದರೆ ನನ್ನ ಮನೆತನ ಮುಳುಗುವದಿಲ್ಲ."

"ಒಂದು ದಿನವೇಕೆ, ದಿನಾಲೂ ಮಾಡಿ ನೀಡಬಲ್ಲಿರಿ ನೀವು. ಅದು ನಿಮ್ಮ ದೊಡ್ಡ ಮನಸ್ಸು. ಆದರೆ, ಹಾಗೆ ಮಾಡುತ್ತಾ ಹೋದರೆ ನೀವು ಈಗಿರುವ ಸ್ಥಿತಿಯಲ್ಲಿ ಉಳಿಯಲು ಸಾಧ್ಯವಿದೆಯೆ? ಏನೂ ತಿಳಿದುಕೊಳ್ಳಬೇಡಿರಿ."

ನನ್ನ ಮಾತು ಸರಿಯಾದುದೆಂದು ಅವರಿಗೂ ಅನ್ನಿಸಿರಲು ಸಾಕು. ಮುಂದೆ ಅವರು ಮಾತನಾಡಲಿಲ್ಲ.

ಮಾರನೆಯ ದಿನ ಜಿಲೇಬಿ, ಅನ್ನ, ಸಾರು, ಭಜಿ ಸಿದ್ಧವಾಯಿತು. ಫೌಜದಾರರನ್ನೊಳಗೊಂಡು ಪೋಲೀಸರೆಲ್ಲರೂ ಊಟಕ್ಕೆ ಬಂದರು. ಎಲ್ಲರೂ ಉಂಡು ಮುಗಿಸಿದ ತರುವಾಯ ಉಳಿದುದರಲ್ಲಿ ಸರಿಯಾಗಿ ಪಾಲುಮಾಡಿ ಎಲ್ಲಾ ಪೋಲೀಸರ ಮನೆಗಳಿಗೂ ಕೊಟ್ಟು ಕಳಿಸಿದರು. ಅದನ್ನುಂಡು ಪೋಲೀಸರ ಹೆಂಗಸರೂ ಮಕ್ಕಳೂ ಜಮಾದಾರರನ್ನು ಕೊಂಡಾಡಿದರು.

ಬರಬರುತ್ತಾ ಅದೊಂದು ಕ್ರಮವೇ ಆಯಿತು.

ಕದನು ಜಮಾದಾರರ ಪಕ್ಕದ ಮನೆ ತೆರವಾಗಿತ್ತು. ಅಲ್ಲೊಂದು ದೊಡ್ಡ ಒಲೆ ಹಾಕಿಸಲಾಯಿತು. ಪ್ರತಿ ಹದಿನೈದು ದಿನಗಳಿಗೊಂದು ಬಾರಿ, ಭಾನುವಾರ ಅಲ್ಲಿ ಮೇಜವಾನಿ. ಅದರ ಖರ್ಚಿನ ಹಣವನ್ನು, ಎಲ್ಲ ಪೋಲೀಸರ ಪರವಾಗಿ ಕಾರಕೂನ - ಬಾರನಿಸಿ ವಹಿಸಿಕೊಳ್ಳುವುದೆಂದು ಗೊತ್ತಾಯಿತ್ತು. ನಮಗೇನು ಅದು ಭಾರವಾಗುವಂತಿರಲಿಲ್ಲ. ಎರಡು ಬಯಲಾಟಗಳ ಹಣ, ಅಷ್ಟೆ! ಆ ಮೇಜವಾನಿಯಿಂದ ಪೋಲೀಸರ ಹೆಂಗಸರು ಮಕ್ಕಳಿಗಾದ ಆನಂದ ಅವರ್ಣನೀಯ. ಬಡ ಪೋಲೀಸರ ಕುಟುಂಬದವರಿಗೆ ಬಾಸುಂದೆ ಪುರಿ, ಶ್ರೀಖಂಡ, ಜಿಲೇಬಿ ಮೊದಲಾದ ವಸ್ತುಗಳನ್ನು ಮನೆಯಲ್ಲಿ ಮಾಡಿ ತಿಂದು ಸುಖಿಸುವ ಶಕ್ತಿಯೆಲ್ಲಿಂದ ಬಂದೀತು? ಅಂತೆಯೆ, ನಮ್ಮಾ ಮೇಜವಾನಿಯೆಂದರೆ ಅವರಿಗೆಲ್ಲಾ ಒಂದು ಹಬ್ಬವಾಗಿ ಪರಿಣಮಿಸಿತು. ಪೋಲೀಸರೂ ತಮ್ಮ ಭತ್ತೆಯ ಹಣದಿಂದ ಒಂದೆರಡು ರೂಪಾಯಿಗಳನ್ನು ತೆಗೆದು "ಮೇಜವಾನಿಯ ನಿಧಿ"ಗೆ ಸಲ್ಲಿಸತೊಡಗಿದರು.

ಎರೇಸೀಮೆ ಫೌಜದಾರರಿಗೆ ಮೊದಲು ಈ ಮೇಜವಾನಿಯ ಖರ್ಚು

ವೆಚ್ಚಗಳ ವಿಚಾರ ಗೊತ್ತಿರಲಿಲ್ಲ. ಒಂದು ದಿನ ನನ್ನನ್ನು ಕರೆದು ಅವರು ಕೇಳಿದರು :

" ಈ ಊಟಕ್ಕೆಲ್ಲಾ ಹಣ ಹ್ಯಾಗೆ ಕೂಡಿಸುತ್ತಿದ್ದೀರಿ ಶಿವಣ್ಣಾ ?"

ನಾನು ಎಲ್ಲವನ್ನೂ ವಿವರಿಸಿ ಹೇಳುತ್ತಲೂ ಫೌಜದಾರರೆಂದರು :

" ನೀವೆಲ್ಲಾ ಚಂದಾ ಹಾಕುತ್ತಿರುವಾಗ ನಾನೇಕೆ ಹಾಕಬಾರದು ?"

" ಹಾಕಬಹುದಲ್ಲ ರಾವ್‌ಸಾಹೇಬರೆ."

" ಮುಂದಿನ ಸಲದ ಮೇಜವಾನಿಯ ಪೂರಾ ಖರ್ಚನ್ನೇ ನಾನು ನೋಡಿಕೊಳ್ಳುತೀನಿ," ಎಂದರು ಫೌಜದಾರರು.

ಈ ಮೇಜವಾನಿಗಳಿಗೆ ಬಸವನಗೌಡನನ್ನೂ ಆಮಂತ್ರಿಸುತ್ತಿದ್ದೆವು. ಫೌಜದಾರರು ಒಂದು ದಿನದ ಖರ್ಚು ವಹಿಸಿಕೊಳ್ಳುವ ಸಂಗತಿ ಗೊತ್ತಾಗುತ್ತಲೂ ಬಸವನಗೌಡ ತಾನೂ ಒಂದು ದಿನದ ಖರ್ಚು ವಹಿಸಿಕೊಳ್ಳುವುದಾಗಿ ಹೇಳಿದ. ಸರಿ. ಇಂಥ ಉದಾರಿಗಳು ತಾವಾಗಿ ಮುಂದೆ ಬಂದಾಗ ಬೇಡವೆನ್ನುವವರಾರು? ಮೊದಲು ಹದಿನೈದು ದಿನಗಳಿಗೊಮ್ಮೆ ನಡೆಯುತ್ತಿದ್ದ ಮೇಜವಾನಿ ಈಗ ವಾರಕ್ಕೊಮ್ಮೆ ನಡೆಯತೊಡಗಿತು.

ಆ ಮೇಜವಾನಿಗಳ ಮೋಜು ಎಷ್ಟು ವರ್ಣಿಸಿದರೂ ಮುಗಿಯದು.

೧೧

## ಇನ್ಸ್‌ಪೆಕ್ಟರರ ಆಗಮನ

ಒಂದು ದಿನ ಸಾಯಂಕಾಲ ಐದು ಗಂಟೆಯ ವೇಳೆಗೆ ಕಚೇರಿಯ ಕೆಲಸ ಮುಗಿಸಿ ನಾನು ಊರಲ್ಲಿ ಹೋಗಿ ಬಂಡೆಪ್ಪನ ಅಂಗಡಿಯಲ್ಲಿ ಕುಳಿತು ಹರಟುತ್ತಿದ್ದ ಹಾಗೆ ಪೋಲೀಸನೊಬ್ಬ ಓಡುತ್ತಾ ಬಂದು,

"ಇನ್ಸ್‌ಪೆಕ್ಟರ್ ಸಾಹೇಬರು ಬಂದಾರ. ಲಗೂ ಬರ್ರಿ," ಎಂದು ಹೇಳಿದ.

ಹಾಗೆ, ಮುನ್ಸೂಚನೆ ಕೊಡದೆ ಆಕಸ್ಮಿಕವಾಗಿ ಭೆಟ್ಟಿ ಕೊಡುವುದು ನಮ್ಮ ಭಾಗದ ಇನ್ಸ್‌ಪೆಕ್ಟರರ ವೈಶಿಷ್ಟ್ಯವೇ ಆಗಿತ್ತು. ಶಿಸ್ತು, ಸುವ್ಯವಸ್ಥೆಗಳಿಗೆ ಖ್ಯಾತರಾದವರು ಅವರು.

ನಾನು ಅವಸರದಿಂದ ಕಚೇರಿಗೆ ಬಂದು ಸಾಹೇಬರಿಗೆ 'ಸಲಾಂ' ಹೊಡೆದು ನಿಂತುಕೊಂಡೆ.

ಅಂದು ಎರೇಸೀಮೆ ಫೌಜದಾರರೂ ಇರಲಿಲ್ಲ. ಮೊಕದ್ದಮೆಯೊಂದರಲ್ಲಿ ಸಾಕ್ಷಿ ಹೇಳುವುದಕ್ಕೆಂದು ಓರೆಕೋರೆ ನಗರಕ್ಕೆ ಹೋಗಿದ್ದರು. ಇನ್ಸ್‌ಪೆಕ್ಟರ್ ಸಾಹೇಬರು ಬಂದಿಳಿದಾಗ ಕಚೇರಿಯಲ್ಲಿದ್ದವರೆಂದರೆ ಕದಮ್ ಜಮಾದಾರರೊಬ್ಬರೇ.

"ಕಾರಕೂನರೆಲ್ಲಿ?" ಎಂದರು ಇನ್ಸ್‌ಪೆಕ್ಟರರು.

ಕಾರಕೂನರ ಪತ್ತೆಯೇ ಇರಲಿಲ್ಲ. ವಾಡಿಕೆಯಂತೆ ಅವರು ಹಣ ಕೀಳಲು ಯಾವುದೊಂದು ಹಳ್ಳಿಗೆ ಹೋಗಿರಬಹುದೆಂದು ನಾವು ಊಹಿಸಿಕೊಂಡೆವು.

ಸಾಹೇಬರು, ಬಾರನಿಸಿಯಾದ ನನ್ನ ದಫ್ತರ್ ಪರೀಕ್ಷೆ ಮಾಡಿದರು. ಕಾಗದ ಪತ್ರಗಳನ್ನು ನೋಡಿದರು. ಎಲ್ಲವೂ ಸರಿಯಾಗಿಯೇ ಇತ್ತು. ಯಾವುದ

ರಲ್ಲಿಯೂ ತಪ್ಪು ಕಾಣಿಸುವಂತಿರಲಿಲ್ಲ. ಆದರೆ, ಸಾಹೇಬರ ತೀಕ್ಷ್ಣದೃಷ್ಟಿ ಯಾವುದೋ ಒಂದು ಚಿಕ್ಕ ದೋಷವನ್ನು ಕಂಡುಹಿಡಿಯದಿರಲಿಲ್ಲ. ನಿಜವಾಗಿ ಆ ದೋಷಕ್ಕೆ ನಾನು ಕಾರಣನಾಗಿರಲಿಲ್ಲ. ನನಗಿಂತ ಮೊದಲು ಅಲ್ಲಿದ್ದ ಬಾರ ನಿಸಿಯ ಪ್ರಮಾದವಾಗಿತ್ತು ಅದು.

"ಆ ದೋಷವನ್ನು ನೀನ್ಯಾಕೆ ಸರಿಪಡಿಸಲಿಲ್ಲ?" ಇನ್ಸ್‌ಪೆಕ್ಟರರು ಗದರಿಸಿದರು. ನನಗೆ ದಿಗಿಲಾಗದಿರಲಿಲ್ಲ. ಎಂಥವರನ್ನಾದರೂ ನಡುಗಿಸುವಂಥ ವ್ಯಕ್ತಿತ್ವ ಅವರದು. ಆರು ಅಡಿ ಎತ್ತರದ ದೃಢಕಾಯ. ಇಳಿವಯಸ್ಸು. ಗಡಸು ಧ್ವನಿ. ಅವರು ಬಹಳ ದಯಾರ್ದ್ರ ಹೃದಯದವರೆಂದೂ ನಾನು ಕೇಳಿದ್ದೆ. ಅಂತೆಯೆ, ಧೈರ್ಯ ತಂದುಕೊಂಡು,

"ನಾನು ಬಂದಾಗ ರಜಿಸ್ಟರಿನಲ್ಲಿದ್ದಂತೆ ಚಾರ್ಜ್ ತೆಗೆದುಕೊಂಡೆ. ಹಿಂದಿನದನ್ನೂ ನೋಡಬೇಕೆಂದು ತಿಳಿಯದೆ ತಪ್ಪಾಯಿತು. ಕ್ಷಮಿಸಬೇಕು," ಎಂದು ಹೇಳಿದೆ.

ಅವರು ನನ್ನ 'ಡೆಸ್ಕ್' ತೆಗೆಯಿಸಿ ಅದರಲ್ಲಿನ ವಸ್ತುಗಳನ್ನು ಪರೀಕ್ಷಿಸಿದರು. ಅವುಗಳ ಸ್ವಚ್ಛತೆಯನ್ನೂ ಅಚ್ಚುಕಟ್ಟುತನವನ್ನೂ ಕಂಡು ಅವರಿಗೆ ಸಮಾಧಾನವಾಗಿರಲು ಸಾಕು.

"ಪೋಲೀಸ್ ಕಚೇರಿ ಅಂದರೆ ಮುನಿಸಿಪಾಲ್ಟಿ ಆಫೀಸಲ್ಲ. ಇಲ್ಲಿ ಪ್ರತಿಯೊಂದು ರಿಕಾರ್ಡೂ ಸೂರಕ್ಕೆ ನೂರರಷ್ಟು ಸರಿಯಾಗಿರಬೇಕಾಗುತ್ತದೆ," ಎಂದರು ಇನ್ಸ್‌ಪೆಕ್ಟರು.

ರಿಕಾರ್ಡುಗಳನ್ನೂ ರಜಿಸ್ಟರುಗಳನ್ನೂ ನಾನು ವ್ಯವಸ್ಥಿತವಾದ ರೀತಿಯಲ್ಲಿ ಕಾದಿರಿಸಿದ್ದೆ. ನನ್ನ ಜೇಬಿನಿಂದ ನಾಲ್ಕೆಂಟು ರೂಪಾಯಿ ಖರ್ಚುಮಾಡಿ ಕಪ್ಪು ಬಣ್ಣದ ಬಟ್ಟೆ ಕೊಂಡು ತಂದು ರಿಕಾರ್ಡುಗಳನ್ನು ಅದರಲ್ಲಿ ಹಾಕಿ ಗಂಟುಕಟ್ಟಿ ಕ್ರಮುಬದ್ಧವಾಗಿರಿಸಿದ್ದೆ. ಅವುಗಳ ಮೇಲೆ ಧೂಳು ಬೀಳಬಾರದೆಂದು ಕಚೇರಿಯ ಛಾವಣಿಗೆ ಹೊಂದಿ ದಪ್ಪನೆಯ ಬಟ್ಟೆ ಬಿಗಿದಿದ್ದೆ. ಇಲಿಗಳು ಮತ್ತು ಹುಳುಗಳ ಉಪದ್ರವವನ್ನು ಹೋಗಲಾಡಿಸುವ ಉದ್ದೇಶದಿಂದ ಪುಸ್ತಕಗಳ ಮೇಲೆ ಡಾಂಬರ್ ಗುಳಿಗೆ ಹಾಕಿದ್ದೆ. ಸಾಹೇಬರು ನನ್ನ ಪೆಟ್ಟಿಗೆಯನ್ನು ಪರೀಕ್ಷಿಸುತ್ತಿದ್ದಾಗ ಜವಾನಾರರು ರಿಕಾರ್ಡುಗಳ ಮೇಲಿನ ಬಟ್ಟೆಯನ್ನು ತೆಗೆದರು. ಸಾಹೇಬರ ದೃಷ್ಟಿ ಅತ್ತ ಹೊರಳಿತು.

"ಇದೆಲ್ಲಾ ಯಾರ ಕೆಲಸ?" ಎಂದು ಕೇಳಿದರು ಸಾಹೇಬರು.

"ಶಿವಣ್ಣನದು," ಎಂದರು ಜಮಾದಾರರು.

"ಈ ಬಟ್ಟಿಗಳಿಗಾಗಿ ದುಡ್ಡು ಯಾರು ಕೊಟ್ಟರು?"

"ಶಿವಣ್ಣನೇ," ಎಂದರು ಜಮಾದಾರರು.

ಸಾಹೇಬರು ಥಟ್ಟನೆ ನನ್ನ ಕಡೆ ತಿರುಗಿ,

"ಲಂಚ ಹೊಡೆಯಲು ಕಲಿತಿದ್ದೀಯೇನು?" ಎಂದು ಕೇಳಿದರು.

"ಇಲ್ಲ ಸಾಹೇಬರೆ."

"ಇವಕ್ಕೆಲ್ಲಾ ಎಷ್ಟು ಖರ್ಚಾಯ್ತು?"

"ಹತ್ತು ರೂಪಾಯಿ, ಸಾಹೇಬರೆ."

"ನಿನಗೆ ಸಿಗುವ ಸಂಬಳ ಎಷ್ಟು? ಅದರಲ್ಲಿ ನೀನು ಹತ್ತು ರೂಪಾಯಿ ಹ್ಯಾಗೆ ಖರ್ಚು ಮಾಡಿದೆ?"

"ನನ್ನ ಭತ್ತೇದ ಹಣವನ್ನೇ ಖರ್ಚು ಮಾಡಿಬಿಟ್ಟೆ ಸಾಹೇಬರೇ."

"ಯಾಕೆ? ಅದರ ಅಗತ್ಯವೇನು?"

"ಇದರಲ್ಲಿ ನನ್ನದೂ ಸ್ವಾರ್ಥವಿದೆ ಸಾಹೇಬರೆ. ನನ್ನ ಕೆಲಸ ವರಿಷ್ಠರ ಮನಸಿಗೆ ಬಂದರೆ ಬೇಗ ಬಡ್ತಿ ಸಿಗಬಹುದು ಅಂತ...."

ಇನ್ಸ್‌ಪೆಕ್ಟರರು ಅಷ್ಟಕ್ಕೇ ಮಾತು ನಿಲ್ಲಿಸಿದರು. ನನ್ನ ದಫ್ತರಿನ ಪರೀಕ್ಷೆ ಕೊನೆಗಂಡಿತ್ತು. ಇನ್ನು ಕಾರಕೂನರ ದಫ್ತರಿನ ಪರೀಕ್ಷಣೆಗಾರಂಭವಾಗಬೇಕು. ಕಾರಕೂನರೇ ಇರಲಿಲ್ಲವಲ್ಲ. ಇನ್ಸ್‌ಪೆಕ್ಟರು ಹುಬ್ಬು ಗಂಟು ಹಾಕಿಕೊಂಡು ಕಾರಕೂನರ ದಾರಿ ಕಾಯತೊಡಗಿದರು.

ಸಾಹೇಬರೊಡನೆ ಅವರ ಕಾರಕೂನನೂ—ಅವನೂ ಪೋಲೀಸನೇ—ಅಡುಗೆಯವನೂ ಬಂದಿದ್ದರು. ನಮ್ಮ ಭಾನುವಾರದ ಮೇಜವಾನಿಯ ಮನೆಯಲ್ಲಿಯೇ ಇನ್ಸ್‌ಪೆಕ್ಟರರಿಗಾಗಿ ಅಡುಗೆ ಸಿದ್ಧವಾಗಿತ್ತು. ಮೂರು ಜನರಿಗೆ ಅವಶ್ಯವಿದ್ದ ಅಡುಗೆಯ ಸಾಮಗ್ರಿಗಳನ್ನೂ ಕಟ್ಟಿಗೆ, ದೀಪ, ಎಣ್ಣೆ, ಹಾಲು, ಮೊಸರು, ಬೆಣ್ಣೆ ಮೊದಲಾದುವನ್ನೂ ಜಮಾದಾರರೇ ತಮ್ಮ ಮನೆಯಿಂದ ತಂದು ಕೊಟ್ಟಿದ್ದರು. ಸಾಹೇಬರು ಬಂದ ಹದಿನೈದು ನಿಮಿಷಗಳಲ್ಲಿ ಫೌಜದಾರರ ಆಳು ಚಹಾ ಮತ್ತು ಬಿಸ್ಕತ್ತು ತಂದು ಕೊಟ್ಟಿದ್ದ.

ಸುಮಾರು ಎಂಟು ಗಂಟೆಯ ಸಮಯಕ್ಕೆ ನಮ್ಮ ಕಾರಕೂನರ ಸವಾರಿ ಆಗಮಿಸಿತು. ನಡುಗುತ್ತ ನಡುಗುತ್ತಲೇ ಅವರು ಒಳಕ್ಕೆ ಬಂದರು.

“ ಇಷ್ಟು ಹೊತ್ತು ಎಲ್ಲಿದ್ದೆ ?” ಸಾಹೇಬರು ಗುಡುಗಿದರು.

“ ಹಳ್ಳಿಗಳಿಗೆ....ವಿ....ವಿ....ಸಿ....ಟ್....” ಎಂದು ತೊದಲಿದರು ಕಾರಕೂನರು.

“ ಕಚೇರಿಯಲ್ಲಿ ನಿನ್ನ ಕೆಲಸ ನೋಡುವದು ಬಿಟ್ಟು ವಿಸಿಟ್ ಕೊಡಲು ಯಾಕೆ ಹೋಗಿದ್ದೆ ? ನಿನಗೆ ಹಿಂಬಡತಿ ಮಾಡಿಸುತ್ತೀನಿ,” ಎಂದರು ಇನ್ಸ್‌ಪೆಕ್ಟರು. ಅದು ಕೇವಲ ಬೆದರಿಕೆಯ ಮಾತಾಗಿದ್ದಿತಷ್ಟೆ. ತಮ್ಮ ಅಧಿಕಾರದ ಅವಧಿಯಲ್ಲಿ ಅವರು ಯಾರನ್ನೂ ಹಿಂಬಡತಿ ಮಾಡಿಸಿರಲಿಲ್ಲವೆಂಬ ಸಂಗತಿ ನಮ್ಮೆಲ್ಲರಿಗೂ ಗೊತ್ತಿದ್ದುದೇ ಆಗಿತ್ತು. ಅವರ ಪ್ರಭಾವಶಾಲಿ ವ್ಯಕ್ತಿತ್ವದೆದುರಲ್ಲಿ ಮಾತ್ರ ಎಲ್ಲರೂ ತಲೆಬಾಗುತ್ತಿದ್ದರು.

ಕಾರಕೂನರ ಕೆಲಸವೆಲ್ಲಾ ಅರೆಬರೆಯಾಗಿತ್ತು. ಎಷ್ಟೋ ಕಾಗದ ಪತ್ರಗಳು ಅಪೂರ್ಣಸ್ಥಿತಿಯಲ್ಲಿದ್ದುವು. ಅವುಗಳನ್ನೆಲ್ಲ ಅವರ ಕಪಾಟಿನಿಂದ ತೆಗೆಯಿಸಿ, ಒಂದು ಯಾದಿಯನ್ನು ತಯಾರಿಸಲಾಯಿತು. ಅವರ ರಿಕಾರ್ಡುಗಳದೂ ಅದೇ ಗತಿಯೇ.

“ ಇವನು ಸ್ವಲ್ಪ ಕೂಡಾ ಕೆಲಸ ಮಾಡಿಲ್ಲವಲ್ಲ ಜಮಾದಾರರೆ? ನೀವು ಯಾಕೆ ಸುಮ್ಮನಿದ್ದೀರಿ ?” ಎಂದು ಕೇಳಿದರು ಸಾಹೇಬರು.

“ ಕ್ಷಮಿಸಬೇಕು ಸಾಹೇಬರೆ. ಇವರು ಕಲಿತವರು. ಮುಂದೆ ಫೌಜದಾರರಾಗುವವರು. ನಾವು ರಿಪೋರ್ಟು ಮಾಡಿದರೆ ಅದಕ್ಕೆ ಕಲ್ಲು ಬಿದ್ದೀತು ಅಂತ ಸುಮ್ಮನಿದ್ದೇವೆ.”

“ ಇವನು ಆಫೀಸಿಗಾದರೂ ಬರುತ್ತಾನೋ ಇಲ್ಲವೋ ?”

“ ಬರುತ್ತಾರೆ – ಇವತ್ತು ಬಂದ ಹಾಗೆ.”

ಕದಮ ಜಮಾದಾರರು ಹಾಗೆ ಒಬ್ಬರ ವಿರುದ್ಧವಾಗಿ ಎಂದೂ ಮಾತನಾಡಿದವರಲ್ಲ. ನಮಗೆಲ್ಲರಿಗೂ ಅಚ್ಚರಿಯಾಗಿತ್ತು. ಕಾರಕೂನರಂತೂ ಜಮಾದಾರರನ್ನೇ ದಿಟ್ಟಿಸುತ್ತಿದ್ದರು.

ಕಾರಕೂನರಿಂದ ಸರಿಯಾದ ರೀತಿಯಲ್ಲಿ ಕೆಲಸಮಾಡಿಸಿಕೊಳ್ಳುವುದು ಜಮಾದಾರ್ ಮತ್ತು ಫೌಜದಾರರ ಕರ್ತವ್ಯ. ಇನ್ಸ್‌ಪೆಕ್ಟರ್ ಸಾಹೇಬರು

ತಮ್ಮ ವಿರುದ್ಧ ವರದಿ ಮಾಡಿಯಾರೆಂದು ಭಾವಿಸಿ ಹಾಗೆ ಮಾತನಾಡಿದ್ದರು ಜಮಾದಾರರು. ಅವರು ಅಸತ್ಯವನ್ನೂ ಹೇಳಿರಲಿಲ್ಲ.

ಕಾರಕೂನರ ದಫ್ತರಿನ ಪರೀಕ್ಷಣೆ ನಡೆದೇ ಇತ್ತು. ಹತ್ತು ಗಂಟೆಯಾದರೂ ಸಾಹೇಬರು ಊಟಕ್ಕೇಳಲಿಲ್ಲ. ಮಾಡಿದ ಅಡುಗೆ ಆರಿಹೋಗುವುದೆಂದು ಅಡುಗೆಯವನಿಗೆ ಯೋಚನೆಗಿಟ್ಟುಕೊಂಡಿತ್ತು. ಸಾಹೇಬರೆದುರಿಗೆ ಬಂದು ನಿಂತು ಅವರನ್ನು ಊಟಕ್ಕೆಬ್ಬಿಸುವ ಧೈರ್ಯ ಮಾತ್ರ ಅವನಲ್ಲಿರಲಿಲ್ಲ. ಜಮಾದಾರರಿಗೂ ಪೀಕಲಾಟಕ್ಕಿಟ್ಟುಕೊಂಡಿತ್ತು. ದಫ್ತರಿನ ಪರೀಕ್ಷೆ ಮುಗಿಯುವ ಹಾಗೇ ಇರಲಿಲ್ಲ. ನಾನು ಸಾಹೇಬರನ್ನು ಊಟಕ್ಕೆಬ್ಬಿಸುವ ಉಪಾಯ ಹುಡುಕತೊಡಗಿದೆ.

ಕೊನೆಗೆ ಧೈರ್ಯ ತಂದುಕೊಂಡು ನಾನೇ ಅವರ ಹತ್ತಿರ ಹೋಗಿ ನಿಂತುಕೊಂಡೆ. ಅವರು ದೃಷ್ಟಿ ಹೊರಳಿಸಿ ಒಮ್ಮೆ ನನ್ನನ್ನು ನೋಡಿದರು.

ನಾನು ಅಂಜುತ್ತಂಜುತ್ತಾ,

"ಅಡಿಗೆಯಾಗಿದೆ ಸಾಹೇಬರೇ. ಊಟಕ್ಕೇಳಬೇಕು," ಎಂದೆ.

"ನನಗೆ ಹಸಿವೆಯಿಲ್ಲ. ನನ್ನ ಅಧಿಕಾರದಲ್ಲಿರುವ ಕಚೇರಿಗಳಲ್ಲಿ ಇಂಥ ಹೊಲಸು ನೋಡಿ ಸಹಿಸಲಾರೆ. ಅಡಿಗೆಯವ ಊಟ ಮಾಡಿಬಿಡಲಿ."

"ನಿಮಗಾಗಿ ಇಲ್ಲೇ ಊಟ ತರಿಸುತ್ತೀನಿ. ನಿಮ್ಮ ಕಾರಕೂನ ಉಂಡು ಬರುವವರೆಗೆ ನಾನು ಇಲ್ಲೇ ನಿಂತು ರಜಿಸ್ಟರುಗಳನ್ನು ತೋರಿಸುತ್ತೀನಿ. ನೀವು ಊಟ ಮಾಡುತ್ತಾ ನೋಡಬಹುದು."

"ನೀನೊಬ್ಬ ಹೊಸ ಪೀಡಾ ಬಂದೆಯಪ್ಪಾ, ನನ್ನ ಡಿವಿಜನ್ನಿನಲ್ಲಿ. ನಾನು ಊಟ ಮಾಡುವದಿಲ್ಲ ಅಂದರೆ ಯಾರೂ ಮತ್ತೊಮ್ಮೆ ಎಬ್ಬಿಸುವದಿಲ್ಲ. ನೀನು ಮಾತ್ರ ಬಿಡಲೊಲ್ಲೆ," ಎಂದವರೇ ಕುರ್ಚಿಯಿಂದೆದ್ದು, "ಎಲ್ಲರೂ ಊಟ ತೀರಿಸಿಕೊಂಡು ಬಂದುಬಿಡಿರಿ," ಎಂದು ಹೇಳಿದರು.

ನರಕದಿಂದ ಬಿಡುಗಡೆ ಹೊಂದಿದ ಹಾಗಾಗಿತ್ತು ನಮ್ಮ ಕಾರಕೂನರಿಗೆ!

ಸಾಹೇಬರಿಗಾಗಿ ಫೌಜದಾರರ ಮನೆಯಿಂದ ಬಿಸಿನೀರು, ಸಾಬೂನು, ಟವಲು ಬಂದಿದ್ದುವು, ರುಚಿಕರವಾದ ಉಪ್ಪಿನಕಾಯಿ ಬಂದಿತ್ತು. ಜಮಾದಾರರ ಮನೆಯ ರೊಟ್ಟಿ, ಬೆಣ್ಣೆ, ಪುಠಾಣಿ ಚಟ್ನಿ; ಅಡುಗೆಯವನ ಆಲೂಗಡ್ಡೆ ಪಲ್ಯ. ಜೊತೆಗೆ ಕೆನೆ ಮೊಸರು.

ಸಾಹೇಬರು ಊಟ ಮಾಡತೊಡಗಿದರು. ನನಗೂ ಹಸಿವೆಯಾಗಿದ್ದಿತಾದರೂ ನಾನು ಅಲ್ಲಿಯೇ ಕುಳಿತುಕೊಂಡಿದ್ದೆ. ಊಟ ಸಾಗಿದ್ದ ಹಾಗೇ ಸಾಹೇಬರು ನನ್ನ ವಿಷಯವಾಗಿ ಕೇಳಿ ತಿಳಿದುಕೊಂಡರು.

ಕಳ್ಳೀಕಾಯಿ ನಗರದಲ್ಲಿನ ಹೈಸ್ಕೂಲಿನಲ್ಲಿ ನಾನು ಓದುತ್ತಿದ್ದಾಗ ಅವರು ಅಲ್ಲಿ ಫೌಜದಾರರಾಗಿದ್ದರು. ಆಗ ಅವರದು ಭವ್ಯ ಆಕಾರ. ಸಾಧಾರಣವಾದ ಉಡುಗೆಯಲ್ಲಿದ್ದರೂ ರಾಜಮಹಾರಾಜರಂತೆ ಕಾಣುವ ಠೀವಿ. ಅವರ ತಲೆಯ ಮೇಲೆ ರೇಶಿಮೆಯ ರುಮಾಲು ಶೋಭಿಸಿದಷ್ಟು ಇನ್ನಾರಿಗೂ ಶೋಭಿಸುತ್ತಿರಲಿಲ್ಲ. ನಾನು ಆ ನೆನಪುಗಳೆಲ್ಲವನ್ನೂ ಸಾಹೇಬರಿಗೆ ಹೇಳುತ್ತಿದ್ದೆ. ಅವರು ಆಗಾಗ ಮುಗುಳ್ನಗುತ್ತಾ ಕೇಳುತ್ತಿದ್ದರು. ಹಿಂದಿನ ದಿನಗಳ ನೆನಪು ಅವರಿಗೂ ಆನಂದ ದಾಯಕವಾಗಿತ್ತು. ಆ ಆನಂದದಲ್ಲಿ ಹೊಟ್ಟೆ ತುಂಬಾ ಊಟಮಾಡಿದರು.

“ನೀನೂ ಊಟ ಮಾಡಿ ಬಾರಪ್ಪಾ.”

ಆ ರಾತ್ರಿಯಲ್ಲಿ ಊರಲ್ಲಿ ಹೋಗಿ ಊಟಮಾಡಿ ಬರಲು ಉತ್ಸಾಹವಿರಲಿಲ್ಲ. ಆದರೂ ಹಸಿವು. ಮಧ್ಯಾಹ್ನದಿಂದ ಆಹಾರವಿರಲಿಲ್ಲ. ಜಮಾದಾರರ ಮನೆ ಯೆದುರಿಗೆ ಹಾಯ್ದು ಹೊರಟಿದ್ದ ಹಾಗೆ ಅವರು ನನ್ನನ್ನು ಕೂಗಿ,

“ಎಲ್ಲಿ, ಊಟಕ್ಕೆ ಹೊರಟಿರೇನು ?” ಎಂದರು.

ನಾನು ಅಹುದೆನ್ನುತ್ತಲೂ ಕದಮರು ನಕ್ಕು,

“ಹನ್ನೊಂದಾಗುತ್ತಾ ಬಂತು. ಈಗ ನಿಮ್ಮ ಬಂಡೆಪ್ಪ ಕಲ್ಲು ಬಂಡೆಯಂತೆ ಬಿದ್ದಿರುತಾನೆ. ಈಗೆಲ್ಲಿಯ ಊಟ ಸಿಗಬೇಕು ? ಬರ್ರಿ. ಇಲ್ಲೇ ಮುಗಿಸಿಬಿಡಿರಿ.” ಎಂದರು.

ಅಲ್ಲಿಯೇ ಊಟವಾಯಿತು. ಇನ್ಸ್‌ಪೆಕ್ಟರರ ಶಿಸ್ತುಪ್ರೇಮದ ಬಗ್ಗೆ ಮಾತು ನಡೆಯಿತು.

“ಸಾಹೇಬರೂ ಮೊದಲು ಸಿಪಾಯಿಯಾಗಿ ಭರ್ತಿಯಾದವರು ಮೇಲಕ್ಕೇರುತ್ತಾ ಬಂದು ಇನ್ಸ್‌ಪೆಕ್ಟರಾಗಿದಾರೆ,” ಎಂದರು ಕದಮರು. ಅವರ ಕರ್ತವ್ಯದಕ್ಷತೆಯೇ ಕಾರಣ ಅದಕ್ಕೆ. ಸರ್ಕಾರೀ ಕಾಯದೆ ಕಾನೂನು ಕೆಲಸದ ಪದ್ಧತಿ ಎಲ್ಲಾ ಅವರ ಮನೆಯಾಳು ಇದ್ದಂತೆ. ಅಂಥಾ ಪಾಂಡಿತ್ಯ. ಆದರೂ ಗರ್ವ ಮಾತ್ರ ಇಲ್ಲ. ಯಾರಾದರೂ ಹೋಗಿ ಸಲಹೆ ಕೇಳಿದರೆ ಬಹಳ ಪ್ರೀತಿ

ಯಿಂದ ತಿಳಿಸಿಕೊಡುತ್ತಾರೆ. ಆದರೆ ಅಧಿಕಾರಿಯಾಗಿ ಇನ್ಸ್‌ಪೆಕ್ಷನ್ನಿಗೆ ಬಂದಾಗ ಮಾತ್ರ ಬಿಗುವು ಬಹಳ."

ಹಾಗೆ ಬಿಗುವಿನಿಂದಿರಬೇಕಾದುದೂ ಅವಶ್ಯವಾಗಿತ್ತು. ಪೋಲೀಸು ಇಲಾಖೆಯ ಜೀವಾಳವೇ ಶಿಸ್ತು. ಅದನ್ನು ಕಾದುಕೊಂಡು ಬರುವುದಕ್ಕಾಗಿ ಅವರು ಬಹಳ ಶ್ರಮವಹಿಸುತ್ತಿದ್ದರು. ಅವರ ಕಚೇರಿಯೆಂದರೆ ಅಚ್ಚುಕಟ್ಟು ತನದ ವ್ಯವಸ್ಥೆಗೆ ಹೆಸರಾದುದು. ಅವರ ಕೈಕೆಳಗೆ ಒಂದೆರಡು ವರ್ಷ ಕೆಲಸ ಮಾಡಿದವರೆಲ್ಲ ಫೌಜದಾರರಾಗಿದ್ದರು. ಅಂಥ ಮಾದರಿಯ ಅಧಿಕಾರಿಯ ಕೈ ಕೆಳಗೆ ಕೆಲಸಮಾಡುವ ಸುಸಂದರ್ಭ ನನಗೂ ಲಭಿಸಿದರೆ ಎಷ್ಟು ಒಳ್ಳೆಯ ದಾಗಬಹುದು! ಎನ್ನಿಸಿತು.

ಅಂದಮಾತ್ರಕ್ಕೆ ಅವರೇನು ಹರಿಶ್ಚಂದ್ರನ ಅವತಾರವಾಗಿರಲಿಲ್ಲ. ಲಂಚದ ಹಣವನ್ನೇನೋ ಅವರೂ ಸ್ವೀಕರಿಸುತ್ತಿದ್ದರಾದರೂ ಅದರಿಂದ ಬೇರೆ ಯವರಿಗೆ ತೊಂದರೆಯಾಗದಂತೆ ನೋಡಿಕೊಳ್ಳುತ್ತಿದ್ದರು. ಸಾಕಷ್ಟು ಹಣ ವಿದ್ದವನು ತಾನಾಗಿ ಕೈಯೆತ್ತಿಕೊಟ್ಟರೆ ಸ್ವೀಕರಿಸುವುದು. ಇಲ್ಲವಾದರಿಲ್ಲ. ಈ ಒಂದು ನಿಯಮವನ್ನನುಸರಿಸುತ್ತ ಬಂದುದರಿಂದ ಅವರು ಅಷ್ಟು ಆಸ್ತಿಯನ್ನೇನೂ ಮಾಡಿಕೊಂಡಿರಲಿಲ್ಲ. ಅವರ ಹಿಂದಿನಿಂದ ಫೌಜದಾರ ರಾಗಿದ್ದವರನೇಕರು ಲಕ್ಷಾಂತರ ಸಂಪಾದಿಸಿದ್ದರು. ಅಂಥವರನ್ನು ಕಂಡು ಇನ್ಸ್‌ಪೆಕ್ಟರರು ಎಂದೂ ಕರುಬಿದವರಲ್ಲ. ಅವರ ಪತ್ನಿಯೂ ಅವರಿಗೆ ತಕ್ಕವರೇ ಆಗಿದ್ದರು. ಮೂವರು ಗಂಡುಮಕ್ಕಳು, ಇಬ್ಬರು ಹೆಣ್ಣುಮಕ್ಕಳು. ಅವರೆಲ್ಲ ರಿಗೂ ವಿದ್ಯಾಭ್ಯಾಸವಾದರಾಯಿತು ಎನ್ನುತ್ತಿದ್ದರು ಇನ್ಸ್‌ಪೆಕ್ಟರರು. ಅವರಿಗೆ ಹೆಚ್ಚಿನ ಆಸೆಯೇನೂ ಇರಲಿಲ್ಲ.

ಮಾರನೆಯ ದಿನ ಬೆಳಗಿನ ಎಂಟು ಗಂಟೆಗೆ ಮತ್ತೆ ಆರಂಭವಾಯಿತು ಕಚೇರಿಯ ಪರೀಕ್ಷೆ. ಸಾಹೇಬರು ಕಂಡು ಹಿಡಿದ ದೋಷಗಳ ಯಾದಿ ಇಪ್ಪತ್ತು ಪುಟಗಳಷ್ಟು ಉದ್ದವಾಯಿತು, ಆ ವೇಳೆಗೆ ಫೌಜದಾರರು ಓರೆಕೋರೆಯಿಂದ ಬಂದು, ಇನ್ಸ್‌ಪೆಕ್ಟರು ಬಂದಿರುವುದು ಗೊತ್ತಾಗುತ್ತಲೂ ಕಚೇರಿಗೆ ಬಂದು ಸಾಹೇಬರಿಗೆ 'ಸಲಾಂ' ಹೊಡೆದರು.

"ಸ್ನಾನ ಊಟ ತೀರಿಸಿಕೊಂಡು ಬರ್ರಿ," ಎಂದರು ಇನ್ಸ್‌ಪೆಕ್ಟರು.

ಎರೇಸೀಮೆಯವರು ನನ್ನನ್ನು ಹೊರಗಡೆ ಕರೆದು,

"ಸಾಹೇಬರ ಊಟ ವಸತಿಗೆ ಸರಿಯಾದ ವ್ಯವಸ್ಥೆ ಮಾಡಿದ್ದೀರಾ?" ಎಂದು ಕೇಳಿದರು.

"ಎಲ್ಲಾ ಚೆನ್ನಾಗಿ ಆಗಿದೆ. ನೀವೇನೂ ಚಿಂತಿಸಬೇಡಿರಿ."

ಎರೇಸೀಮೆಯವರು ಮನೆಗೆ ಹೋಗಿ ಊಟ ಮುಗಿಸಿಕೊಂಡು ಬರುತ್ತಲೂ ಕಾರಕೂನರ ಕೆಲಸದಲ್ಲಿ ಕಂಡು ಬಂದ ತಪ್ಪುಗಳ ಯಾದಿಯನ್ನು ಅವರ ಕೈಗೆ ಕೊಟ್ಟರು ಸಾಹೇಬರು.

"ಈ ಕಾರಕೂನ ನಾಲಾಯಖ್ ಇದ್ದಾನೆ. ಇವನಿಂದ ನೀವು ಯಾಕೆ ಕೆಲಸ ತೆಗೆದುಕೊಂಡಿಲ್ಲ?"

ಎರೇಸೀಮೆ ಫೌಜದಾರರ ಬಾಯಿಯಿಂದ ಮಾತೇ ಹೊರಡಲಿಲ್ಲ. ಕಾರಕೂನರ ತಪ್ಪುಗಳ ಯಾದಿ ಡಿ.ಎಸ್.ಪಿ. ಯವರ ಕಡೆಗೆ ಹೋದಲ್ಲಿ, ಫೌಜದಾರರು ಕಾರಕೂನರ ಕೆಲಸದ ಬಗ್ಗೆ ಮೇಲ್ವಿಚಾರಣೆ ಮಾಡಲಿಲ್ಲವೆಂದೇ ಸಿದ್ಧವಾಗುತ್ತಿತ್ತು. ಅದರಿಂದ ಫೌಜದಾರರಿಗೂ ಕೆಟ್ಟ ಹೆಸರು.

"ಇದೊಂದು ಸಾರಿ ಮಾಫ್‌ಮಾಡಿರಿ ಸಾಹೇಬರೆ. ಇನ್ನು ಏಳು ದಿನ ಟೈಂ ಕೊಟ್ಟರೆ ಈ ತಪ್ಪುಗಳನ್ನೆಲ್ಲಾ ಸರಿಪಡಿಸಿ ರಿಪೋರ್ಟ್ ಮಾಡುತ್ತೀನಿ," ಎಂದು ಫೌಜದಾರರು ಕೇಳಿಕೊಂಡರು.

"ಹಾಗೇ ಮಾಡಿರಿ. ಈ ಕಾರಕೂನನ ಮೇಲೆ ಮಾತ್ರ ಯಾವಾಗಲೂ ಒಂದು ಕಣ್ಣಿರಲಿ," ಎಂದರು ಸಾಹೇಬರು.

ಅದೇ ದಿನವೇ ಅವರು ಬೇರೊಂದು ಊರಿಗೆ ತೆರಳಿದರು.

ಏಳು ಹಗಲು ಏಳು ಇರುಳು ನಿದ್ದೆಯಿಲ್ಲದೆ ವಿರಾಮವಿಲ್ಲದೆ ಕೆಲಸ ಮಾಡಿ ನಾವು ಎಲ್ಲ ತಪ್ಪುಗಳನ್ನೂ ಸರಿಪಡಿಸಬೇಕಾಯಿತು.

ಅಂದಿನಿಂದ ನಮ್ಮ ಕಾರಕೂನರು ಸ್ವಲ್ಪ ಸುಧಾರಿಸಿದ ಹಾಗೆ ಕಾಣಿಸಿತು

## ೧೨

## ಜಂಬದ ಕಾರಕೂನ

ಇನ್ಸ್‌ಪೆಕ್ಟರರು ಬಂದು ಹೋದರೆನ್ನುವುದರೊಳಗಾಗಿಯೆ ಡಿ.ಎಸ್.ಪಿ. ಸಾಹೇಬರು ಆಗಮಿಸುವ ಸಮಾಚಾರವೂ ಗೊತ್ತಾಯಿತು. ಆರಂಭವಾಯಿತು ನಮ್ಮ ಗಡಿಬಿಡಿ. ಸಾಹೇಬರು ಐದು ದಿನ ಬಿಡಾರ ಹೂಡುವವರು. ನಮ್ಮ ರಿಕಾರ್ಡುಗಳನ್ನೆಲ್ಲ ಸರಿಪಡಿಸಿಕೊಂಡೆವು. ಸುಟ್ಟು ನಾಶಗೊಳಿಸಬೇಕಾಗಿದ್ದ ರಿಕಾರ್ಡುಗಳನ್ನು ತೆಗೆದು ಪ್ರತ್ಯೇಕವಾಗಿರಿಸಲಾಯಿತು. ಪೋಲೀಸರು ತಮ್ಮ ಬಂದೂಕಗಳನ್ನೂ ಇತರ ವಸ್ತುಗಳನ್ನೂ ಸ್ವಚ್ಛಗೊಳಿಸಿಕೊಂಡರು. ಮರೆತು ಹೋದ ಹಾಗಿದ್ದ ಕವಾಯತಿನ ಅಭ್ಯಾಸವೂ ನಡೆಯಿತು.

ಸಾಹೇಬರು ಪ್ರವಾಸಿಕರ ಬಂಗಲೆಯಲ್ಲಿಯೂ ಅವರ ಸಿಬ್ಬಂದಿಯವರು ಧರ್ಮಸಾಲೆಯಲ್ಲಿಯೂ ಇಳಿದುಕೊಳ್ಳುವುದೆಂದು ಗೊತ್ತಾಯಿತು. ಅವರಿಗೆ ಬೇಕಾಗುವ ಗುಡಾರಗಳು, ಪಾತ್ರೆಗಳು ಮತ್ತಿತರ ವಸ್ತುಗಳನ್ನು ಕಲೆಹಾಕಲಾಯಿತು. ಅಕ್ಕಿ, ಬೇಳೆ, ಸಕ್ಕರೆ ಮೊದಲಾದ ಅಡುಗೆಯ ಸಾಮಗ್ರಿಯನ್ನು ಶೇಖರಿಸಲಾಯಿತು. ಸಾಹೇಬರಿಗೆ ಬೇಕಾಗುವ ಹಣ್ಣು ಹಂಪಲು, ಬ್ರೆಡ್ ಬಿಸ್ಕತ್ತು ಮೊದಲಾದುವನ್ನು ನಾನೇ ನಗರಕ್ಕೆ ಹೋಗಿ ಕೊಂಡು ತಂದೆ.

ಅಡುಗೆಗಾಗಿ ಇಬ್ಬರು ಅಡಿಗೆಯವರು. ಮಾಂಸಾಹಾರ ತಯಾರಿಸುವವನೊಬ್ಬ, ಶಾಖಾಹಾರ ತಯಾರಿಸುವವನೊಬ್ಬ. ಡಿ.ಎಸ್.ಪಿ. ಯವರೆಂದರೆ ಜಿಲ್ಲೆಯ ಉಚ್ಚ ಪೋಲೀಸ್ ಅಧಿಕಾರಿ. ಅವರ ಸಿಬ್ಬಂದಿಯೂ ಬಹಳ ದೊಡ್ಡದು. ನಾಲ್ಕಾರು ಜನ ಕಾರಕೂನರು, ಒಬ್ಬ ಸಿರಸ್ತೇದಾರರು, ಅವರಿಗೆ ಇಬ್ಬರು ಸಹಾಯಕ ಪೋಲೀಸರು. ಇವರೆಲ್ಲರ ಕೆಲಸಗಳನ್ನು ಮಾಡಲು ನಾಲ್ಕು

ಜನ ಪೇದೆಗಳು. ಪ್ರತಿದಿನವೂ ಜಿಲ್ಲಾ ಸ್ಥಳದಿಂದ ಟಪಾಲು ತರಲು ಓಡಾಡುವ ಜನ ಬೇರೆಯೇ. ಸಾಹೇಬರನ್ನು ಭೆಟ್ಟಿಯಾಗಲು ಬರುವ ಅಧಿಕಾರಿಗಳು, ಫೌಜದಾರರು ಬೇರೆಯೇ. ಅವರೆಲ್ಲರಿಗೂ ಇಲ್ಲಿಯೆ ಊಟದ ವ್ಯವಸ್ಥೆಯಾಗಬೇಕಲ್ಲವೆ? ಅಂತೂ ಪ್ರತಿನಿತ್ಯ ಸುಮಾರು ೬೦ – ೭೦ ಜನರಿಗೆ ಅಡುಗೆಯಾಗಬೇಕು.

ಹಾಲು ಪೂರೈಸುವ ಹೊಣೆಯನ್ನು ನಾಲ್ಕು ಊರುಗಳ ಗೌಡರಿಗೆ ಒಪ್ಪಿಸಿದ್ದೆವು. ನಾಲ್ಕು ಮಣ ಬೆಣ್ಣೆ ಕೊಂಡುಕೊಂಡಿದ್ದೆವು. ಹತ್ತಿಪ್ಪತ್ತು ಕೋಳಿಗಳ ಕಾಲು ಕಟ್ಟಿ ಕಾದಿರಿಸಿದ್ದೆವು.

ಡಿ.ಎಸ್.ಪಿ. ಸಾಹೇಬರು ಬಿಳಿಯವರು. ಅವರೊಡನೆ ಅವರ ಹೆಂಡತಿಯೂ ಪುಟ್ಟ ಮಗುವೂ ಬರುವವರಿದ್ದರು. ಮೂವರು ಬಟ್ಲರುಗಳು, ಮಗುವನ್ನು ನೋಡಿಕೊಳ್ಳುವ ದಾಯಿ, ಮೋಟಾರಿನ ಡ್ರೈವರ್, ಭಂಗಿ, ಕಾವಲಿಗೆ ನಾಲ್ಕು ಮಂದಿ ಸಿಪಾಯಿಗಳು. ಈ ಸಿಬ್ಬಂದಿಯವರ ಜಂಬವೋ ಜಂಬ. ಸಾಹೇಬರಿಗೆ ಯಾವುದರಲ್ಲಾದರೂ ಸ್ವಲ್ಪ ಕೊರತೆಯಾದರೂ ನಡೆದೀತು. ಈ ಸಿಬ್ಬಂದಿಯವರಿಗೆ ಮಾತ್ರ ನಡೆಯಲಾರದು. ಯಾವಾಗಲೂ ಬೀಡಿಸೇದುವ ಡ್ರೈವರು ಕೂಡ ಇಲ್ಲಿಗೆ ಬರುತ್ತಲೂ ಸಿಗರೇಟು ಸೇದುವುದಕ್ಕಾರಂಭಿಸುತ್ತಿದ್ದ. ಉಳಿದವರ ವಿಚಾರವೂ ಹಾಗೆಯೇ.

ಸಾಹೇಬರು ಬರುವ ದಿನ. ಪೋಲೀಸರೆಲ್ಲರೂ ತಮ್ಮ ತಮ್ಮ ಸಮವಸ್ತ್ರ ಧರಿಸಿ ಸಾಲಾಗಿ ನಿಂತುಕೊಂಡಿದ್ದರು. ಫೌಜದಾರರೂ ತಮ್ಮ ಸಮವಸ್ತ್ರ ಧರಿಸಿ ಕೈಯಲ್ಲಿ ಖಡ್ಗ ಹಿಡಿದು ನಿಂತುಕೊಂಡಿದ್ದರು. ಸಾಹೇಬರು ಬರುವುದಕ್ಕೆ ಅರ್ಧ ಗಂಟೆ ಮುಂಚಿತವಾಗಿ ಸಿಬ್ಬಂದಿಯವರ ಮೋಟಾರು ಬಂದಿತು. ಅವರನ್ನು ನೇರವಾಗಿ ಧರ್ಮಸಾಲೆಗೆ ಕಳಿಸಲಾಯಿತು. ಅಷ್ಟರಲ್ಲಿ ಅಡುಗೆಯವರು ಫಲಾಹಾರದ ವಸ್ತುಗಳನ್ನೂ ಚಹವನ್ನೂ ತಯಾರಿಸಿದ್ದರು. ಅಡುಗೆಗೂ ಆರಂಭವಾಗಿತ್ತು. ಸಿಬ್ಬಂದಿಯಲ್ಲಿ ನಾಲ್ಕು ಮಂದಿ ಮಾಂಸಹಾರಿಗಳಿದ್ದರು, ಅವರಿಗಾಗಿ ನಾಲ್ಕು ಕೋಳಿ ಕೊಲ್ಲಲಾಯಿತು. ಬಂದವರೆಲ್ಲರೂ ಫಲಾಹಾರದ ಮೇಲೆ ಕೈಯೆಳೆದು, ಚಹ ಕುಡಿದು, ಸಿಗರೇಟು ಎಳೆಯುತ್ತಾ ರಾಜಮಹಾರಾಜರಂತೆ ಠೀವಿಯಿಂದ ವಿರಮಿಸಿಕೊಂಡರು.

ಸ್ವಲ್ಪ ಸಮಯ ಕಳೆಯುತ್ತಲೂ ಸಾಹೇಬರ ಕಾರು ಬಂತು. ಕಚೇರಿಯ ಹತ್ತಿರ ಕಾರು ನಿಲ್ಲಿಸಿ ಸಾಹೇಬರೊಬ್ಬರೇ ಇಳಿದು, ನಾವು ನಿಂತುಕೊಂಡ ಸ್ಥಳಕ್ಕೆ

ಬಂದರು. ಪದ್ಧತಿಯಂತೆ 'ಸಲಾಮಿ' ಕೊಟ್ಟು ಗೌರವ ಸೂಚಿಸಿದುದಾಯಿತು. ನಿಯಮಗಳ ಪ್ರಕಾರ ನಮ್ಮ ಸಮವಸ್ತ್ರಗಳನ್ನು ಪರೀಕ್ಷಿಸಿ ಮತ್ತೊಮ್ಮೆ 'ಸಲಾಮಿ' ಸ್ವೀಕರಿಸಿ ಅವರು ಬಂಗಲೆಗೆ ಹೊರಟರು. ನಾವೂ ನಮ್ಮ ಮನೆಗಳಿಗೆ ತೆರಳಿದೆವು.

ನಾನು ಮಾತ್ರ ವಿರಮಿಸುವ ಹಾಗಿರಲಿಲ್ಲ. ಸಮವಸ್ತ್ರವನ್ನು ತೆಗೆದಿರಿಸಿ ನಾನೂ ಫೌಜದಾರರು ಸಾಹೇಬರ ಬಂಗಲೆಗೆ ಧಾವಿಸಿದೆವು. ಬಟ್ಲರನನ್ನು ಕಂಡು, ಅಡುಗೆಗೆ ಬೇಕಾದ ಸಾಮಾನುಗಳ ಯಾದಿಯನ್ನು ಕೊಡಲು ಹೇಳಿದೆವು. ಅವನು ಐದು ದಿವಸಗಳಿಗೆ ಬೇಕಾಗಬಹುದಾದ ಸಾಮಾನುಗಳ ಪಟ್ಟಿಯೊಪ್ಪಿಸಿದ. ಅರ್ಥಾತ್ – ಅವನು ಹೆಚ್ಚಾಗಿಯೆ ಹೇಳಿದ್ದ. ಪಾಪ, ಅವನಿಗೂ ಆಸೆಯಿಲ್ಲವೆ! ಇಲ್ಲಿ ಸಾಮಾನು ಉಳಿಸಿಕೊಂಡು ತಮ್ಮ ಮನೆಗೊಯ್ಯುವುದು ಅವನ ಪದ್ಧತಿ.

ಹಣ್ಣು ಹಂಪಲುಗಳನ್ನೂ ಮೊಟ್ಟೆಗಳನ್ನೂ ಒಂದು ಪಿಂಗಾಣಿ ತಟ್ಟೆಯಲ್ಲಿ ತುಂಬಿ ಬಂಗಲೆಯ ಹಿಂದಿನಿಂದ ಹಾದು ನಾನು ಹೊರಟಿದ್ದ ಹಾಗೆ ಸಾಹೇಬರು ನನ್ನನ್ನು ಕರೆದು,

"ಐದು ದಿನಗಳಿಗೆ ಇಷ್ಟೇ ಸಾಕು. ಹೆಚ್ಚು ತರಿಸಬೇಡಿರಿ," ಎಂದರು. "ಹೊರಗಿನ ಬ್ರೆಡ್ ಬೇಡ. ನಾನೇ ಬ್ರೆಡ್ ತಯಾರಿಸುತ್ತೇನೆ. ದಿನವೂ ಮೂರು ಬಾಟ್ಲಿ ಸೇಂದಿ ತರಿಸಿಕೊಡಿರಿ. ಸಾಕು. ಟೊಮ್ಯಾಟೊ, ಆಲೂಗಡ್ಡೆ, ಕಾಲಿಫ್ಲಾವರ್ ಬೇಕಾಗುತ್ತವೆ."

"ಅವನ್ನೆಲ್ಲಾ ತರಿಸಿದ್ದೇವೆ ಸಾಹೇಬರೇ."

"ಹಾಗಾದರೆ ನಾನೇನನ್ನೂ ಹೇಳಬೇಕಾಗೇ ಇಲ್ಲ. ಎಲ್ಲಿ, ನೋಡೋಣ ನಡೆಯಿರಿ ನಿಮ್ಮ ಸಿದ್ಧತೆಯನ್ನು."

ನನ್ನ ಜೊತೆಗೆ ಅವರೂ "ಬಖರ್ಜಿ ಖಾನಾ"ಕ್ಕೆ (ಅಡುಗೆಮನೆ) ಬಂದರು. ನಾವು ತಂದುಹಾಕಿದ್ದ ಸಾಮಗ್ರಿಗಳನ್ನು ಕಂಡು,

"ಇದೇನು, ಇಷ್ಟೊಂದು ತರಿಸಿದ್ದೀರಿ? ಬಹಳವಾಯಿತು," ಎಂದರು.

"ಉಳಿದರೂ ಉಪಯೋಗವಾಗುತ್ತದಲ್ಲ ಸಾಹೇಬರೆ."

ಅವರು ಬಟ್ಲರನನ್ನೊಮ್ಮೆ ದುರುಗುಟ್ಟಿ ನೋಡಿದರು.

"ಇದೇನು ನಗರವಲ್ಲ, ಏನು ಬೇಕಾದ್ದು ಸಿಗಲು. ಇಷ್ಟು ತರಲು

ಇವರಿಗೆಷ್ಟೋ ತೊಂದರೆಯಾಗಿರಬೇಕು. ಇನ್ನೂ ತೊಂದರೆ ಕೊಡಬೇಡ," ಎಂದು ಬಟ್ಲರನಿಗೆ ಹೇಳಿದರು.

ಅವನು ತಗ್ಗಿಸಿದ ತಲೆಯನ್ನು ಮೇಲಕ್ಕೆತ್ತಲಿಲ್ಲ.

ಸಾಹೇಬರಿಂದ ತೊಂದರೆಯಾಗಲಾರದೆಂದು ನನಗೆ ಮನವರಿಕೆಯಾಯಿತು.

ಸಿಬ್ಬಂದಿಯವರ ಸಮಾಚಾರ ನೋಡಿಕೊಳ್ಳಲು ಧರ್ಮಸಾಲೆಗೆ ಬಂದೆ. ಸಾಹೇಬರ ಕಾರಕೂನರು ಪೇದೆಗಳಲ್ಲಿ ಕೆಲವರ ಪೂರ್ವಪರಿಚಯ ನನಗಿತ್ತು. ವಂದನೆ, ಪ್ರತಿ ವಂದನೆ, ಕ್ಷೇಮಸಮಾಚಾರದ ಮಾತು ನಡೆಯಿತು.

ಅಡುಗೆಯೂ ಭರದಿಂದ ನಡೆದಿತ್ತು. ಧರ್ಮಸಾಲೆಯಲ್ಲೆಲ್ಲ ಸಿಗರೇಟಿನ ಹೊಗೆ ಕವಿದಿತ್ತು.

ಆ ಕಾರಕೂನರೆಲ್ಲರೂ ಒಳ್ಳೆಯವರೇ ಆಗಿದ್ದರು. ಸಿಬ್ಬಂದಿಯ ದಫ್ತರಿನ ಕಾರಕೂನನೊಬ್ಬ ಮಾತ್ರ ಸ್ವಲ್ಪ ವಿಲಕ್ಷಣವ್ಯಕ್ತಿ. ಇತರ ಕಾರಕೂನರ ಜೊತೆಗೆ ಅವರು ಬೆರೆಯುತ್ತಿರಲಿಲ್ಲ. ಅವರ ಕೊಠಡಿಯೇ ಬೇರೆ. ಇತರರಂತೆ ಅವರು ಸಿಗರೇಟನ್ನೂ ಸೇದುವವರಲ್ಲ. ಅವರಿಗೆ ಚಿರೂಟು ಬೇಕು. ಆ ಸಂಗತಿ ನಮಗೆ ಮೊದಲೇ ಗೊತ್ತಿದ್ದಿತಾದುದರಿಂದ ಅವರಿಗಾಗಿ ಒಂದು ಡಬ್ಬ ಚಿರೂಟು ತರಿಸಿ ಇಡಲಾಗಿತ್ತು.

ಆ ಡಬ್ಬವನ್ನು ಕೈಯಲ್ಲಿ ಹಿಡಿದು, ಅವರ ಕೊಠಡಿಗೆ ಹೋಗಿ ನಮಸ್ಕಾರ ಮಾಡಿ ನಿಂತುಕೊಂಡೆ.

ಮುಖ ಮೇಲಕ್ಕೆತ್ತಿ ಅವರು ನನ್ನನ್ನು ತೀಕ್ಷ್ಣದೃಷ್ಟಿಯಿಂದ ನಿಟ್ಟಿಸಿ ನೋಡಿದರು. ನನ್ನ ವಂದನೆಯನ್ನವರು ಸ್ವೀಕರಿಸಲಿಲ್ಲ. ನನ್ನೊಡನೆ ಮಾತನಾಡಲೂ ಇಲ್ಲ.

ಕಪ್ಪುಬಣ್ಣದ ದಪ್ಪನೆಯ ಆಸಾಮಿ. ಕೋಣನಂಥ ಮುಖ. ಅವರು ಅಹಂಕಾರಿಯೆಂದು ಯಾರಾದರೂ ಸುಲಭವಾಗಿ ಕಂಡುಹಿಡಿಯುವಂತಿತ್ತು.

ಐದುನಿಮಿಷ ಕಳೆದರೂ ಆತ ಮಾತನಾಡಲಿಲ್ಲ. ಇನ್ನೇನು ಮಾಡುವುದು? ನಾನೇ ಮಾತನಾಡಿಸಿದೆ:

"ಚಹಾ ಆಗಲಿಲ್ಲವೇ ರಾಯರೇ?"

"ಇಲ್ಲಿ ಸಿಗದಿದ್ದರೆ ಹೋಟಲುಗಳಿವೆಯಲ್ಲ!" ಅವರು ಒರಟು ಧ್ವನಿಯಲ್ಲಿ ಹೇಳಿದರು.

"ಇವರಿಗೆ ಚಹಾ ಕೊಡಲಿಲ್ಲವೇ?" ಎಂದು, ಹೊರಗೆ ಬಂದು ಅಡುಗೆಯವನನ್ನು ಕೇಳಿದೆ.

"ಅವರು ಚಹಾ ಕುಡಿಯುವದಿಲ್ಲ. ಹಾಲು ಕುಡಿಯುತ್ತಾರೆ. ಇದೇ ಈಗ ಹಾಲು ಒಯ್ದು ಕೊಟ್ಟಿದ್ದೀನಿ," ಎಂದ ಅಡುಗೆಯವ.

ಹಾಲು ಕುಡಿದೂ ಇಂಥ ಸೊಕ್ಕಿನ ಮಾತಾಡುವನಲ್ಲ ಈತ – ಎಂದು ನನಗೆ ವಿಸ್ಮಯ.

"ಇವರ್ಯಾಕೆ ಹೀಗೆ ಮಾಡುತ್ತಾರೆ?" ಎಂದು, ಒಬ್ಬ ಪೇದೆಯವನನ್ನು ಕೇಳಿದೆ.

"ಅದೊಂದು ಹಂದಿ. ಅದನ್ನು ಮಾತಾಡಿಸಬೇಡಿರಿ. ಹೊಟ್ಟೆ ಹಸಿದರೆ ತಾನೇ ತಿನ್ನುತ್ತದೆ, ಕುಡಿಯುತ್ತದೆ," ಎಂದ ಪೇದೆ. ಆ ಕಾರಕೂನನ ಬಗೆಗೆ ಸಿಬ್ಬಂದಿಯವರಿಗೆಲ್ಲ ಬೇಸರವಿದ್ದುದು ಸ್ಪಷ್ಟವಾಯಿತು.

ಅವನು ಅಷ್ಟು ಅಹಂಕಾರಿಯಾಗಲು ಕಾರಣವೇನೆಂಬುದೂ ನನಗೆ ಗೊತ್ತೇ ಇದ್ದಿತು. ಡಿ.ಎಸ್.ಪಿ. ಕಚೇರಿಯಲ್ಲಿ ಅವನದು ಮಹತ್ವದ ಸ್ಥಾನ. ಜಿಲ್ಲೆಯ ಪೋಲೀಸರ ವರ್ಗಾವರ್ಗಿ, ಬಡ್ತಿ, ರಜೆ ಮೊದಲಾದ ವಿಷಯಗಳನ್ನೆಲ್ಲ ನೋಡಿಕೊಳ್ಳುತ್ತಿದ್ದವನು ಈತನೇ. ಬೇರೂರಿಗೆ ವರ್ಗವಾದ ಸಂದರ್ಭಗಳಲ್ಲಿ ಅದನ್ನು ರದ್ದುಪಡಿಸಿಕೊಳ್ಳಲು ಪೋಲೀಸರನೇಕರು ಇವನಿಗೆ ಸಲಾಂ ಹೊಡೆಯಬೇಕಾಗಿತ್ತು. ಇವನ ಕೃಪೆಯಾದರೆ ಮಾತ್ರ ಅವರ ಕಾರ್ಯವಾಗುತ್ತಿತ್ತು. ಬಡ್ತಿಯ ವಿಚಾರವೂ ಹಾಗೆಯೇ. ಹೆಚ್ಚು ಲಂಚ ಕೊಟ್ಟವರಿಗೆಲ್ಲಾ ಈತ ಬಡ್ತಿಯ ಭರವಸೆ ಕೊಡುತ್ತಿದ್ದ. ಎಲ್ಲರಿಗಿಂತ ಹೆಚ್ಚು ಹಣ ಕೊಟ್ಟವನಿಗೆ ಬಡ್ತಿ ಕೊಡಿಸುತ್ತಿದ್ದ. ಹೀಗೆ ಲಂಚ ತಿಂದು, ನಲವತ್ತು ಐವತ್ತು ಸಾವಿರದವರೆಗೂ ಗಳಿಸಿದ್ದನೆಂದು ಪ್ರತೀತಿಯಿತ್ತು. ಅಷ್ಟು ಗಳಿಸಿದವನಿಗೆ ಅಹಂಕಾರವಿರುವುದೂ ಸಹಜವಷ್ಟೆ.

ಆ ದಫ್ತರಿನ ಕೆಲಸಕ್ಕೆ ಆತ ಬಂದುದಕ್ಕೆ ಆಗಲೆ ನಾಲ್ಕು ವರುಷ ಕಳೆದು ಹೋಗಿದ್ದುವು. ಯಾವ ಕೆಲಸವನ್ನು ಹೇಗೆ ಸಾಧಿಸಬೇಕು, ಯಾವ ಕೆಲಸವನ್ನು ಹೇಗೆ ಕೆಡಿಸಬೇಕು ಎಂಬುದೆಲ್ಲಾ ಇವನಿಗೆ ಗೊತ್ತು. ಇವನಿಂದ ಅನ್ಯಾಯ

ನಡೆದ ಸಂದರ್ಭಗಳಲ್ಲಿ ಪೋಲೀಸರು ಇವನಿಗಂಜಿಕೊಂಡು ಮೇಲಾಧಿಕಾರಿಗಳಿಗೆ ದೂರು ಹೇಳದೆ ಬಾಯಿ ಮುಚ್ಚಿಕೊಂಡಿರುತ್ತಿದ್ದರು. ಅಂತೆಯೆ, ನಿರಾತಂಕ ವಾಗಿ ನಡೆದಿತ್ತು ಅವನ ಚೆಲ್ಲಾಟ.

ತೊಂಡೇಬಾವಿಯ ಕೆಲವರು ಪೋಲೀಸರಿಗೂ ಅಲ್ಲಿಂದ ವರ್ಗವಾಗಿ ಹೋಗುವ ಬಯಕೆಯಿತ್ತು. ಆ ಕಾರಕೂನನಿಗೆ ನೂರಿನ್ನೂರು ರೂಪಾಯಿ ಕೊಟ್ಟು ಆ ಕೆಲಸ ಮಾಡಿಸಿಕೊಳ್ಳಲು ಅವರೂ ಸಿದ್ಧರಿದ್ದರು.

ಸಿಬ್ಬಂದಿಯ ಹಿರಿಯ ಕಾರಕೂನ ಕೇತಕರ್ ಬಹಳ ಸಾಧುಸ್ವಭಾವ ದವರು. ಅವರಿಗೆ 'ಸೀಯಾಳ' (ಎಳನೀರು) ಎಂದರೆ ಬಹಳ ಆಸೆ. ಒಬ್ಬ ಪೋಲೀಸನನ್ನು ಒಂದು ತೋಟಕ್ಕೆ ಕಳಿಸಿ ಹತ್ತಿಪ್ಪತ್ತು ತೆಂಗಿನಕಾಯಿ ತರಿಸ ಲಾಯಿತು. ಕಾಯಿಗಳ ತುದಿಯನ್ನು ಕೆತ್ತಿ ತೆಗೆದೆವು. ಅದನ್ನು ಹಾಗೇ ಬಾಯಿಗೆ ಹಿಡಿದು ಕುಡಿಯುವುದೇ ಆರೋಗ್ಯಕರವೆಂಬುದು ಕೇತಕರರಿಗೆ ಗೊತ್ತಿದ್ದಿತಾದುದರಿಂದ ಅವರು ಹಾಗೇ ಕುಡಿದರು. ಉಳಿದವರೂ ಹಾಗೇ ಕುಡಿದರು. ಅವರಿಗೆಲ್ಲರಿಗೂ ಎಳನೀರು ಕೊಟ್ಟು ಸಿಬ್ಬಂದಿಯ ಕಾರಕೂನರಿಗೆ ಮಾತ್ರ ಕೊಡದಿರುವುದು ಉಚಿತವಲ್ಲವೆಂದು ಬಗೆದು ನಾನು ಅವರಿಗಾಗಿ ಎರಡು ಕಾಯಿ ಕೆತ್ತಿಸಿ ತುದಿಯಲ್ಲಿ ರಂಧ್ರ ತೆಗೆದು ಅವರ ಹತ್ತಿರ ತೆಗೆದುಕೊಂಡು ಹೋದೆ.

"ಇದೇನಿದು?" ಎಂದರವರು.

"ಎಳನೀರು," ಎನ್ನುತ್ತಾ ಒಂದು ತೆಂಗಿನಕಾಯಿಯನ್ನು ಅವರ ಕೈಗೆ ಕೊಟ್ಟೆ. ಅವರು ಕೋಪದಿಂದ ಮುಖ ಸಿಂಡರಿಸಿಕೊಂಡು ಕಾಯಿಯನ್ನೆತ್ತಿ ಬಿಸುಟರು.

"ಗ್ಲಾಸು ಸಿಗುವದಿಲ್ಲವೇನು?"

"ಸಿಗುವದಿಲ್ಲ. ಅವೆಲ್ಲಾ ಇಲ್ಲಿ ಎಲ್ಲಿಂದ ಬರಬೇಕು? ಕಪ್ಪುಗಳಿವೆ. ತಂದು ಕೊಡಲೇನು?"

ಅವರ ಕೋಪ ಮಿತಿಮೀರಿ ಏರಿತು.

"ಇಲ್ಲಿ ಸರಬರಾಜಿನ ವ್ಯವಸ್ಥೆಗೆ ಯಾರಿದ್ದಾರೆ?" ಎಂದರು.

"ನಾನೇ."

"ನಿನಗೊಂದು ಗ್ಲಾಸು ಸಿಗುವದಿಲ್ಲವೇನು? ಕೊಂಡು ತರಬೇಕಾಗಿತ್ತು?"

"ಎರಡು ಬಿಲ್ಲಿಯ ಗಾಜಿನ ಗ್ಲಾಸು ಯಾತಕ್ಕೆ? ಬೆಳ್ಳಿಯ ಬಟ್ಟಲಿವೆ. ತರಲೇನು?"

"ಅದೇನೂ ಬೇಡ. ತಗೋ ಈ ಎಂಟಾಣೆ. ಒಂದು ಗ್ಲಾಸು ತರಿಸು," ಎಂದು ಹೇಳಿ ಎಂಟಾಣೆಯ ನಾಣ್ಯವನ್ನು ನನ್ನ ಎದುರಿಗೆಸೆದರವರು.

"ಎಂಟಾಣೆಗೆ ಗ್ಲಾಸು ಸಿಗಬಹುದು. ಅದನ್ನು ತರಲು ನಗರಕ್ಕೆ ಹೋಗಬೇಕು. ಅವರ ಪ್ರವಾಸದ ಖರ್ಚು ಯಾರು ಕೊಡುವವರು? ಮೇಲಾಗಿ ಎಲ್ಲರೂ ಸರಕಾರೀ ನೌಕರರು. ನಿಮಗೆ ಗ್ಲಾಸು ತರಲು ಅವರು ಹೋಗುವದಾದರೂ ಹ್ಯಾಗೆ? ರಜೆ ಕೊಡುವವರು ಯಾರು? ಅದೂ – ಸಾಹೇಬರ ಕ್ಯಾಂಪ್ ಇರುವಾಗ? ಒಂದುವೇಳೆ ನೀವು ರಜೆ ಕೊಡಿಸಿದರೂ ಕೂಡಾ ತಮ್ಮ ರಜೆಯನ್ನು ಅವರು ನಿಮಗಾಗಿ ಯಾಕೆ ಖರ್ಚು ಮಾಡಬೇಕು?"

ನನಗೂ ವಿಪರೀತ ಕೋಪ ಬಂದುಬಿಟ್ಟಿತ್ತು; ಎಷ್ಟೋ ಕಡೆಗಳಲ್ಲಿ ಔಷಧಿಗಾಗಿ ಎಳನೀರು ಸಿಕ್ಕುವುದೂ ದುರ್ಲಭವಾಗಿರುವಾಗ ಈ ಮನುಷ್ಯ ಅದನ್ನು ಸೊಕ್ಕಿನಿಂದ ಎಸೆದು ಬಿಟ್ಟನಲ್ಲಾ ಎಂದು.

"ನೀನಿಲ್ಲಿಗೆ ಬಂದು ಎಷ್ಟು ದಿವಸವಾಯ್ತು?" ಎಂದು ಅವರು ಮತ್ತೆ ಕೇಳಿದರು.

"ಅದೆಲ್ಲಾ ನಿಮಗೇಕೆ?"

"ಹಾಂ!" ಎಂದು ಅವರು ಬೆಚ್ಚಿಬಿದ್ದು ನನ್ನನ್ನೇ ಮಿಕಿಮಿಕಿ ನೋಡತೊಡಗಿದರು.

"ಅದನ್ನು ಕೇಳಲು ನಿಮಗಿರುವ ಅಧಿಕಾರವೇನು? ನಾನು ಕಾರ್ಯನಿರ್ವಾಹಕ ಪಡೆಯುವನು. ನೀನು ಒಬ್ಬ ಕಾರಕೂನ. ಕಾರಕೂನನಿಗೆ ಇವನ್ನೆಲ್ಲಾ ಕೇಳಲು ಅಧಿಕಾರವಿಲ್ಲ. ಸಾಹೇಬರು ಕೇಳಿದರೆ ಹೇಳುತ್ತೇನೆ."

ಅವರಿಗೆ ಅಚ್ಚರಿಯಾಗಿರಲು ಸಾಕು: ಜಿಲ್ಲೆಯಲ್ಲಿನ ಪೋಲೀಸರೆಲ್ಲ ತನ್ನ ಕಾಲು ಹಿಡಿಯುತ್ತಾರೆ, ಈ ಹುಡುಗನಿಗೆ ಇಷ್ಟು ಧೈರ್ಯವೇ – ಎಂದು.

ಇತರ ಕಾರಕೂನರು, ಶಿರಸ್ತೆದಾರರು, ಪೋಲೀಸರು, ಪೇದೆಗಳು, ಎಲ್ಲರೂ ನಮ್ಮ ವಾಗ್ವಾದವನ್ನು ಕುತೂಹಲದಿಂದ ನಿರೀಕ್ಷಿಸುತ್ತಿದ್ದರು. ಎಲ್ಲರಿಗೂ ಮನಸ್ಸಿನಲ್ಲಿಯೇ ಸಮಾಧಾನವಾದ ಹಾಗಿತ್ತು.

"ನಿನ್ನನ್ನು ನೋಡುತ್ತೇನೆ, ಹೋಗು," ಎಂದರು ಕಾರಕೂನರು.

ನನಗೆ ಭಯಂಕರ ಕೋಪ ಬಂದಿತು.

"ಈ ಶಬ್ದಗಳನ್ನು ನೀವು ತಿರುಗಿ ತೆಗೆದುಕೊಳ್ಳಿರಿ. ಇಲ್ಲದಿದ್ದರೆ ನಾನು ನೆಟ್ಟಗೆ ಸಾಹೇಬರಲ್ಲಿಗೆ ಹೋಗಿ ರಿಪೋರ್ಟ್ ಮಾಡುತ್ತೇನೆ. ನಾನೇನೂ ತಪ್ಪು ಮಾಡಿರದಿದ್ದರೂ ನನ್ನನ್ನು ನೋಡುತ್ತೇನಿ ಅಂತ ಬೆದರಿಸುತ್ತೀರಾ?"

"ಹೆಚ್ಚು ಮಾತಾಡಬೇಡ. ಇಲ್ಲಿಂದ ಹೋಗು ಮೊದಲು."

"ನೀವು ಮಾತಾಡಿದ್ದನ್ನು ತಿರುಗಿ ತೆಗೆದುಕೊಳ್ಳದಿದ್ದರೆ ನಾನು ಸಾಹೇಬರ ಹತ್ತಿರ ಹೋಗಲೇಬೇಕಾದೀತು!"

ಶಿರಸ್ತೆದಾರರು ಎದ್ದು ಬಂದು ನನ್ನನ್ನು ಸಮಾಧಾನಪಡಿಸಿದರು. ನಾನು ಫೌಜದಾರರಲ್ಲಿಗೆ ಬಂದು ನಡೆದ ಸಂಗತಿಯನ್ನೆಲ್ಲ ತಿಳಿಸಿದೆ.

"ಅವನು ಏನು ಮಾಡುತ್ತಾನೋ ನೋಡೋಣ," ಎಂದು ಅವರೂ ಹೇಳಿದರು.

ಅದೇ ದಿನ ಸಂಜೆ ಅವನು ಕಚೇರಿಗೆ ಬಂದು, ನನ್ನ ದಫ್ತರು ನೋಡುವು ದಾಗಿ ಹೇಳಿದ. ನಾನು ತೆಗೆದು ತೋರಿಸಿದೆ. ಅದರಲ್ಲಿ ತಪ್ಪುಗಳನ್ನು ಹುಡುಕಿ ತೆಗೆಯಲು ಅವನು ಎಷ್ಟು ಯತ್ನಿಸಿದರೂ ಒಂದು ತಪ್ಪೂ ಕಾಣಲಿಲ್ಲ. ರಿಕಾರ್ಡು ನೋಡಿದ. ಅದೂ ಅತ್ಯುತ್ತಮವಾಗಿತ್ತು. ಅವನ ಮುಖ ಕಪ್ಪಿಟ್ಟಿತು. ಧರ್ಮ ಸಾಲೆಗೆ ಹಿಂದಿರುಗಿ ಹೋದ. ಅಡುಗೆ ಸಿದ್ಧವಾಗಿತ್ತು. ಅವನು ಮಾಂಸಾಹಾರಿ. ಅಡುಗೆಯಲ್ಲಾದರೂ ಏನಾದರೂ ದೋಷ ಕಂಡುಹಿಡಿಯಬೇಕೆಂದು ಅವನು ಯತ್ನಿಸಿದುದೂ ವಿಫಲವಾಯಿತು. ಇನ್ನುಳಿದವರೆಲ್ಲರೂ ಅಡುಗೆಯ ರುಚಿಯನ್ನು ಪ್ರಶಂಸಿಸುತ್ತಿದ್ದರು. ಇವನೊಬ್ಬನೇ ಅದನ್ನು ತೆಗಳುವುದು ಹೇಗೆ? ಸರಿ. ಪಿಟ್ಟೆಂದು ಮಾತಾಡದೆ ತಿಂದು ಬಿದ್ದುಕೊಂಡ.

ಮರುದಿವಸ ಬೆಳಿಗ್ಗೆ ಕವಾಯತು ನಡೆಯಿತು. ಅನಂತರ "ಕಿಟ್ ಇನ್ಸ್‌ಪೆಕ್ಶನ್:" ಎಂದರೆ ಸಮವಸ್ತ್ರ ಮೊದಲಾದುವುಗಳ ಪರೀಕ್ಷಣೆ. ಸಾಹೇಬರು ವಿಶೇಷ ತೊಂದರೆ ಕೊಡಲಿಲ್ಲ. ಪ್ರತಿಯೊಬ್ಬ ಪೋಲೀಸನ ಬಗೆಗೂ ಅವರೇ ಸ್ವತಃ ಬರೆದುಕೊಳ್ಳುತ್ತಿದ್ದರು. ನಮ್ಮ ಕಾರಕೂನನ ಕೈವಾಡವೇನೂ ನಡೆಯುವಂತಿರಲಿಲ್ಲ.

ಕೊನೆಯ ದಿನ ತಪ್ಪು ತಡೆಗಳ ವರದಿಯೋದುವುದು ನಡೆಯಿತು. ಎಲ್ಲ

ರಿಜಿಸ್ಟರುಗಳನ್ನೂ ಸಾಹೇಬರು ನೋಡಿ ಸಹಿ ಹಾಕಿದರು. ಕೊನೆಯದಾಗಿ "ಶೀಟ್ ಇನ್ಸ್‌ಪೆಕ್ಶನ್:" ಎಂದರೆ, ಪ್ರತಿಯೊಬ್ಬ ಪೋಲೀಸನ ನೌಕರಿಯ ಇತಿಹಾಸವನ್ನೋದಿ ಅಭಿಪ್ರಾಯ ಬರೆಯುವುದು. ಪೋಲೀಸರಲ್ಲಿ ಯಾರಿಗಾದರೂ ವರ್ಗ, ಬಡ್ತಿ, ರಜೆ ಏನೇ ಬೇಕಾಗಿದ್ದರೂ ಈ ಸಮಯದಲ್ಲಿ ಸಾಹೇಬರನ್ನು ಬಿನ್ನವಿಸಿಕೊಳ್ಳುವ ವಾಡಿಕೆ. ಅವರು ಆ ಬಗೆಗೆ ಯೋಚಿಸಿ ತಮ್ಮ ಅಭಿಪ್ರಾಯ ತಿಳಿಸುತ್ತಿದ್ದರು.

ನಮ್ಮಲ್ಲಿ ಕೆಲವರು ಆ ಕಾರಕೂನನಿಗೆ ಮೊದಲೇ ರೂಪಾಯಿ ಕೊಟ್ಟು ವರ್ಗ ಮಾಡಿಸಲು ಕೇಳಿಕೊಂಡಿದ್ದರು. ಆ ವಿಷಯ ಸಾಹೇಬರ ಮುಂದೆ ಬರುತ್ತಲೂ ಅವರು,

"ಈ ಪೋಲೀಸರು ಇಲ್ಲಿಗೆ ಬಂದು ಇನ್ನೂ ಒಂದು ವರ್ಷವೂ ಆಗಿಲ್ಲ. ಈಗಲೇ ವರ್ಗ ಮಾಡಲು ಸಾಧ್ಯವಿಲ್ಲ. ಮುಂದಿನ ಸಾರಿ ನೋಡೋಣ," ಎಂದುಬಿಟ್ಟರು.

ಕಾರಕೂನ ಅಷ್ಟಕ್ಕೇ ಬಿಡದೆ ಆ ಪೋಲೀಸರ ಪರವಾಗಿ ವಕೀಲಿ ಮಾಡಲು ಬಂದ. ಸಾಹೇಬರಿಗೆ ಸ್ವಲ್ಪ ಸಿಟ್ಟು ಬಂತು. ಅವರು,

"ಈಗ ವರ್ಗ ಬೇಕಾದದ್ದು ಪೋಲೀಸರಿಗೆ. ಅವರು ಮಾತಾಡಲಿ. ನಿಮಗೆ ಬೇಕಾದಾಗ ನೀವು ಮಾತಾಡಬಹುದು," ಎಂದರು.

ಕಾರಕೂನ ಬಾಯಿ ಮುಚ್ಚಿಕೊಳ್ಳಬೇಕಾಯಿತು.

ನನ್ನ ಸರದಿ ಬರುತ್ತಲೂ ನಾನು ಸಾಹೇಬರ ಮುಂದೆ ನಿಂತು 'ಸಲಾಂ' ಹಾಕಿದೆ. ನನ್ನ 'ಶೀಟು' ನೋಡಿದರು. ಹಿಂದಿನ ಸಾಹೇಬರೆಲ್ಲರೂ ನನ್ನ ಬಗೆಗೆ ಉತ್ತಮ ಅಭಿಪ್ರಾಯಗಳನ್ನೇ ಬರೆದಿದ್ದರು. ಇವರೂ ಹಾಗೇ ಬರೆದರು.

"ಇವನು ಬಾರನಿಸಿ ಕೆಲಸವನ್ನು ಚೆನ್ನಾಗಿ ಮಾಡುತ್ತಿದಾನೆ. ಪರೇಡೂ ಗೊತ್ತಿದೆ. ಶಿಸ್ತು ಚೆನ್ನಾಗಿದೆ. ಮುಂದೆ ಇವನು ಒಳ್ಳೆಯ ಅಧಿಕಾರಿಯಾಗುವ ಚಿಹ್ನೆಗಳಿವೆ," ಎಂದು ಬರೆದು,

"ಏನಾದರೂ ಹೇಳುವದಿದೆಯೋ?" ಎಂದು ಕೇಳಿದರು.

"ಏನೂ ಇಲ್ಲ," ಎಂದೆ.

ಮುಗಿಯಿತು. ನಾನೇ ಕೊನೆಯವನಾಗಿದ್ದೆ. ಅಲ್ಲಿಗೆ 'ಇನ್ಸ್‌ಪೆಕ್ಶನ್' ಕೊನೆಗಂಡಿತು.

ಮರುದಿನ ಬೆಳಿಗ್ಗೆ ಅವರ ಪಯಣವೆಂದು ಗೊತ್ತಾಗಿತ್ತು.

ಸಾಯಂಕಾಲ, ಕೊನೆಯದಾಗಿ ಮೇಜವಾನಿಯ ವ್ಯವಸ್ಥೆಯಾಗಿತ್ತು. ಸಿಬ್ಬಂದಿಯವರೊಡನೆ ನಾವೂ ಊಟಕ್ಕೆ ಕುಳಿತಿದ್ದೆವು. ಆಗ ಆ ಕಾರಕೂನ ನನ್ನು ಮಾತನಾಡಿಸುತ್ತಾ ನಾನು ಹೇಳಿದೆ:

"ನೀವು ನನಗೆ ಏನೋ ಅಂದಿರಿ. ನಾನೂ ಏನೋ ಅಂದೆ. ಸಿಟ್ಟಾಗ ಬೇಡಿರಿ. ಆ ತೆಂಗಿನಕಾಯಿಯ ಹಿಂದೆ ಇದ್ದ ಪ್ರೇಮವನ್ನು ಗುರುತಿಸಿಕೊಳ್ಳದೆ ನನಗೆ ಎಂಟಾಣೆ ಕೊಡಲು ಬಂದು ಅವಮಾನ ಮಾಡಿದಿರಿ. ನೀವೇನೋ ಸುದೈವದಿಂದ ಕಾರಕೂನರಾಗಿದ್ದೀರಿ. ನಾನೂ ನಿಮ್ಮಷ್ಟೇ ಕಲಿತವನಾದರೂ ಪೋಲೀಸನಾಗಬೇಕಾಯಿತು. ಅಂದ ಮಾತ್ರಕ್ಕೆ ನನ್ನ ಮರ್ಯಾದೆಯೇ ಹೋದಂತಾಯಿತೇ?"

ಆ ಕಾರಕೂನನೂ ಮನುಷ್ಯನೇ ಅಲ್ಲವೆ? ನನ್ನ ಮಾತು ಅವನಿಗೂ ಒಪ್ಪಿಗೆಯಾಗಿರಬೇಕು. ಎದ್ದು ಬಂದು ನನ್ನ ಕೈಹಿಡಿದು, "Excuse," ಎಂದು ಶಾಂತ ಸ್ವರದಲ್ಲಿಯೇ ಹೇಳಿದ.

ಅಂದಿನಿಂದ ಅವನು ನನ್ನೊಬ್ಬನಮಟ್ಟಿಗಾದರೂ ಸ್ನೇಹಿತನಂತೆ ನಡೆದು ಕೊಳ್ಳುತ್ತಿದ್ದ. ನಾನು ಹೇಳಿದ ಕೆಲಸವನ್ನು ಸಾಧಿಸಿಕೊಡುತ್ತಿದ್ದ.

ಮರುದಿನ ಅವರೆಲ್ಲರೂ ಅಲ್ಲಿಂದ ಪಯಣ ಬೆಳೆಸಿದರು.

ಸಾಹೇಬರ ಶಿಬಿರಕ್ಕೆಂದು ಸುಮಾರು ಏಳುನೂರು ರೂಪಾಯಿಗಳ ವರೆಗೂ ಕೈಬಿಟ್ಟು ಹೋಗಿತ್ತು.

ಒಂದು ವಾರದೊಳಗಾಗಿ ನಾವು ಅಷ್ಟು ಹಣವನ್ನು ಅಲ್ಲಿ ಇಲ್ಲಿ ಕಿತ್ತು ಸಮಾಧಾನದ ಉಸಿರು ಹಾಕಿದೆವು.

೧೩

## ಅವಲಕ್ಕಿ - ಮೊಸರು !

ಹದಿನೈದು ದಿನಗಳ ತರುವಾಯ ಒಂದು ಸಂಜೆ ನಾನು ಪೇಟೆಗೆ ಹೋಗಿ ತಿರುಗಿ ಮನೆಗೆ ಬಂದು ಕುಳಿತಿದ್ದಾಗ ಓಲೇಕಾರನೊಬ್ಬ ಬಂದು ನನ್ನನ್ನು ಕೂಗಿದ.

"ಯಾಕಪ್ಪಾ, ಏನು ಬೇಕು ?"

"ಹವಾಲ್ದಾರರು ಕರೆಯುತ್ತಾ ಇದಾರೆ, ಬರ್ರಿ," ಎಂದನಾತ.

ಅಂದು ಫೌಜದಾರರು ಊರಲ್ಲಿರಲಿಲ್ಲ. ಚಿಲ್ಲರೆ ಮಾರಾಮಾರಿಯ ಪ್ರಕರಣವೊಂದರ ತನಿಖೆಗಾಗಿ ಜಮಾದಾರರು ಹಳ್ಳಿಗೆ ಹೋಗಿದ್ದರು. ಅಂತೆಯೆ, ಹವಾಲ್ದಾರ್ ಶಂಕರರಾಯರು ಕಚೇರಿಯ 'ಚಾರ್ಜ್' ವಹಿಸಿಕೊಂಡಿದ್ದರು.

ನಾನು ಕಚೇರಿಗೆ ಹೋಗಿ ನೋಡಿದಾಗ ಸಮೀಪದ ಹಳ್ಳಿಯ ಗೌಡನಿಂದ ಒಂದು ವರದಿ ಬಂದ ಸಂಗತಿ ತಿಳಿದುಬಂದಿತು. ಅದರಲ್ಲಿ ಹೆಚ್ಚಿನ ವಿವರಗಳೇನೂ ಇರಲಿಲ್ಲ. ಹಳ್ಳಿಯ ಹೊರಭಾಗದಲ್ಲೊಂದು ಕೆರೆ. ಅದರ ಹತ್ತಿರವೇ ಪ್ರಾಥಮಿಕ ಶಾಲೆ. ಬಿಡುವಿನ ಸಮಯದಲ್ಲಿ ಹುಡುಗರು ಕೆರೆಗೆ ಹೋಗಿ ಅಲ್ಲಿಯ ಮಣ್ಣು ತೆಗೆದುಕೊಂಡು ಎತ್ತು – ಹೋರಿಗಳ ಬೊಂಬೆಗಳನ್ನು ತಯಾರಿಸಿ ಆಟವಾಡವುದಿತ್ತು. ಅಂದು ಕೂಡಾ ಎಂದಿನಂತೆ ಆ ಹುಡುಗರು ಮಣ್ಣು ಹೆಕ್ಕಿಕೊಳ್ಳುತ್ತಿದ್ದಾಗ ಕೆರೆಯ ದಂಡೆಯ ಮೇಲೆ ಎಳೆ ಮಗುವಿನ ಶವವೊಂದನ್ನು ಕಂಡು ಶಿಕ್ಷಕರಿಗೆ ತಿಳಿಸಿದ್ದರು. ಶಿಕ್ಷಕರಿಂದ ಆ ಸಮಾಚಾರ ಗೌಡರಿಗೂ ಗೌಡರಿಂದ

ನಮಗೂ ಗೊತ್ತಾಯಿತು. ಆ ಮಗುವಿನ ವಯಸ್ಸು ಎಷ್ಟೆಂಬುದನ್ನು ಗೌಡ ತಿಳಿಸಿರಲಿಲ್ಲ. ಶಂಕರರಾಯರು ತಲೆ ಕೆರೆದುಕೊಳ್ಳುತ್ತಾ ಕುಳಿತಿದ್ದರು.

ಪೋಲೀಸ್ ಖಾತೆಯಲ್ಲಿ ಇಪ್ಪತ್ತೊಂಭತ್ತು ವರ್ಷ ನೌಕರಿ ಮಾಡಿದ್ದವರು ಶಂಕರರಾಯರು. ಆ ಅವಧಿಯಲ್ಲಿ ಅವರ ಬುದ್ಧಿ ಮಾತ್ರ ಸ್ವಲ್ಪವೂ ಅಲುಗಾಡಿರಲಿಲ್ಲ. ನಾನು ಮನೆಯಿಂದ ಬರುವುದರೊಳಗಾಗಿ ಅವರು ಹತ್ತು ಬಾರಿಯಾದರೂ ಆ ವರದಿಯನ್ನೋದಿ ನೋಡಿದ್ದರು. ಮುಂದಿನ ಕ್ರಮವೇನೆಂಬುದೇ ಅವರಿಗೆ ಹೊಳೆಯದ ಹಾಗಾಗಿತ್ತು.

"ಇಷ್ಟ್ಯಾಕೆ ಗಾಬರಿಯಾಗಿದ್ದೀರಿ?" ಎಂಬ ನನ್ನ ಪ್ರಶ್ನೆಗೆ ಅವರು ಉತ್ತರವನ್ನೇನೂ ಕೊಡದೆ ಆ ವರದಿಯನ್ನೇ ನನ್ನ ಕೈಗಿತ್ತರು.

ಸರಿ. ಅದರ ಬಗೆಗೆ ಠಾಣಾ ದಿನಚರಿಯಲ್ಲಿ ಬರೆದುದಾಯಿತು. ಇನ್ನು ನಾವು ಆ ಊರಿಗೆ ಹೊರಡಬೇಕು. ಚಕ್ಕಡಿಯೊಂದನ್ನು ತರಿಸಿ ಅದರಲ್ಲಿ ಕುಳಿತು ಹೋಗುವುದೆಂದು ಗೊತ್ತುಮಾಡಿಕೊಂಡು, ವರದಿಯನ್ನು ತಂದಿದ್ದ ಓಲೇಕಾರನನ್ನು ಮುಂಚೆ ಕಳಿಸಿದೆವು.

ಊರಲ್ಲಿಂದ ಚಕ್ಕಡಿ ಬಂದು ನಾವು ಹೊರಡಲು ರಾತ್ರಿಯೇ ಆಯಿತು. ತೊಂಡೇಬಾವಿಯಿಂದ ಹತ್ತು ಮೈಲು ದೂರದಲ್ಲಿ ಆ ಊರು. ನಡುವೆ, ದಾರಿಯಲ್ಲಿ ಒಂದು ಮೈಲಿನಷ್ಟು ಗುಡ್ಡಗಾಡು ಭಾಗ. ಆ ಅಡವಿಯಲ್ಲಿ ಕಿರುಬಗಳೂ ಚಿರತೆಗಳೂ ಇದ್ದುವು. ಹತ್ತಿರವಿದ್ದರೊಳ್ಳೆಯದೆಂದು ಯೋಚಿಸಿ ನಾನು ಬಂದೂಕವೊಂದನ್ನು ಜೊತೆಗಿಟ್ಟುಕೊಂಡೆ. ಆದರೂ ಸ್ವಾಭಾವಿಕವಾಗಿಯೇ ಎಲ್ಲರಿಗೂ ಭಯ. ಚಕ್ಕಡಿ ಹೊಡೆಯುತ್ತಿದ್ದ ರೈತನಂತೂ ಬಹಳ ಪುಕ್ಕಲು ಆಸಾಮಿ. ಅಂಜಿ ಗಾಬರಿಗೊಂಡಿದ್ದ ಆತ ದಾರಿಯನ್ನು ನೋಡುತ್ತಿರಲಿಲ್ಲ, ಎತ್ತುಗಳನ್ನೂ ನೋಡುತ್ತಿರಲಿಲ್ಲ. ಎತ್ತುಗಳೇ ದಾರಿ ಹುಡುಕಿಕೊಂಡು ನಡೆದಿದ್ದುವು.

ರಾತ್ರಿ ಗಂಟೆ ಒಂದಾದರೂ ನಾವು ಊರು ಮುಟ್ಟಲಿಲ್ಲ. ನಾವು ಹಾದಿ ತಪ್ಪಿರಬೇಕೆಂದು ನನಗೆ ಅನುಮಾನ. ಚಕ್ಕಡಿಯವನನ್ನು ವಿಚಾರಿಸಿದಾಗ ಅವನು ತನಗೆ ಹಾದಿ ತಿಳಿಯದೆಂದು ಹೇಳಿದ. ಆ ಅರಣ್ಯ ಪ್ರದೇಶದಲ್ಲಿ ಚಕ್ಕಡಿಯಿಂದಿಳಿದು ಹಾದಿ ನೋಡುವವರಾದರೂ ಯಾರು? ಬಂದೂಕನ್ನು ಬಲಗೈಯಲ್ಲಿ ಹಿಡಿದುಕೊಂಡು ನಾನೇ ಕೆಳಕ್ಕಿಳಿದೆ. ಬ್ಯಾಟ್ರಿ ಹಿಡಿದು ಬೆಳಕು

ತೋರಿಸಲು ಯಾರಾದರೂ ಬೇಡವೇ? ಶಂಕರರಾಯರಂತೂ ಚಳಿಜ್ವರ ಬಂದವರಂತೆ ನಡುಗುತ್ತಾ ಮುಸುಕು ಹಾಕಿಕೊಂಡು ಕುಳಿತಿದ್ದರು.

"ಬರ್‍ರೀ ರಾಯರೆ!"

"ಊ ಹೂಂ. ನಾನೊಲ್ಲೆ."

"ನೀವು ಹೀಗೇ ಕೂತಿದ್ದರೆ ಬೆಳಗಾಗುವವರೆಗೂ ಇಲ್ಲೇ ಕೂಡ ಬೇಕಾಗುವದು."

"ಅಯ್ಯೋ, ರಾಮ ರಾಮಾ!" ಎಂದರವರು.

ಎತ್ತುಗಳ 'ಕೊರಳು ಹರಿದು' (ನೊಗದ ನೇಣು ಬಿಚ್ಚಿ) ಚಕ್ಕಡಿ ಯನ್ನಿಳಿಸಿ, ರೈತನ ಕೈಯಲ್ಲಿ ಬ್ಯಾಟ್ರಿ ಕೊಟ್ಟು ಒಂದು ಮೈಲಿನವರೆಗೂ ಹಿಂದೆ ಬಂದು ನೋಡಿದುದಾಯಿತು. ಮೂರು ಹಾದಿಗಳು ಕವಲೊಡೆದ ಜಾಗವದು. ನಾವು ಬಂದ ಹಾದಿಯನ್ನುಳಿದು ಇನ್ನಿತರ ಎರಡು ಹಾದಿಗಳಲ್ಲಿ ಯಾವುದಾದ ರೊಂದನ್ನು ನಾವು ಹಿಡಿಯಬೇಕಾಗಿತ್ತು.

ಮತ್ತೆ ನಡೆದು ಚಕ್ಕಡಿಯ ಬಳಿ ಬಂದೆವು. ಶಂಕರರಾಯರ ಜೀವದಲ್ಲಿ ಜೀವ ಉಳಿದಿರಲಿಲ್ಲ. ಉಸಿರನ್ನು ಕೂಡಾ ವೇಗವಾಗಿ ಬಿಡದೆ, ಒಂದೇಸಮನೆ 'ರಾಮ, ರಾಮ' ಎಂದು ಜಪಿಸುತ್ತಿದ್ದರು. ಮತ್ತೆ ಎತ್ತುಗಳ ಕೊರಳು ಕಟ್ಟಿ ಚಕ್ಕಡಿಯನ್ನು ತಿರುಗಿಸಿದೆವು. ಕವಲೊಡೆದ ಹಾದಿಗಳಲ್ಲಿ ನಡುವಿನದನ್ನು ಹಿಡಿದು ಹೊರಟು ಬಳಿಕ ಅರ್ಧ ತಾಸಿನಲ್ಲಿ ಒಂದು ಹಳ್ಳಿ ಸಿಕ್ಕಿತು. ಚಕ್ಕಡಿ ಯನ್ನು ನಿಲ್ಲಿಸಿ, ಒಂದು ಮನೆಯೆದುರಿಗೆ ನಿಂತು ಕೂಗಿದಾಗ ಆ ಮನೆಯವನು ನಿದ್ದೆಗಣ್ಣಿನಲ್ಲಿ ಹೊರಬಂದು ಬ್ಯಾಟ್ರಿಯನ್ನೂ ಬಂದೂಕನ್ನೂ ಹಿಡಿದು ನಿಂತಿದ್ದ ನನ್ನನ್ನು ಕಂಡು ಗಾಬರಿಗೊಂಡ. ನಾವು ಬರಬೇಕಾಗಿದ್ದುದು ಅದೇ ಊರಿಗೇ ಎಂಬುದು ಗೊತ್ತಾಯಿತು.

ಚಾವಡಿಯಿರಲಿಲ್ಲ ಆ ಹಳ್ಳಿಯಲ್ಲಿ. ಹೊರಗಿನಿಂದ ಬರುತ್ತಿದ್ದ ನಮ್ಮಂಥ ವರಿಗೆಲ್ಲ ಗುಡಿಯೇ ಚಾವಡಿಯಾಗುತ್ತಿತ್ತು. ನಾವು ಬರುವುದರ ನೆನಪೂ ಇಲ್ಲದೆ ಸುಖವಾಗಿ ನಿದ್ರಿಸುತ್ತಿದ್ದರು ಓಲೇಕಾರರು. ಅವರನ್ನು ಬಯ್ದು ಎಬ್ಬಿಸಿ ದೆವು. ಗೌಡರನ್ನು ಕರೆಯಿಸಲಾಯಿತು.

ಹತ್ತು ಗಂಟೆಯೊಳಗಾಗಿ ಹಳ್ಳಿಗೆ ಮುಟ್ಟಬಹುದು, ಅಲ್ಲಿಯೇ ಊಟ ವಾಗಬಹುದು – ಎಂದು ಯೋಚಿಸಿಕೊಂಡು ತೊಂಡೇಬಾವಿಯಿಂದ ಹೊರಟ

ವರು ನಾವು. ಹಾದಿ ತಪ್ಪಿ ಕೊನೆಗೆ ಹಳ್ಳಿಗೆ ತಲಪಿದಾಗ ಎರಡು ಗಂಟೆ ಯಾಗುತ್ತ ಬಂದಿತ್ತು. ಶಂಕರರಾಯರಿಗೂ ನನಗೂ ತುಂಬಾ ಹಸಿವೆಯಾಗಿತ್ತು. ನಾನು ಊಟದ ಬಗೆಗೆ ಯಾವ ನಿಯಮ ನಿಬಂಧನೆಗಳನ್ನೂ ಇಟ್ಟುಕೊಂಡವ ನಲ್ಲ. ಯಾರ ಮನೆಯಲ್ಲಾದರೂ ಊಟ ಮಾಡುವವನು. ಶಂಕರರಾಯರ ವಿಷಯ ಹಾಗಲ್ಲ. ಅವರು ಬ್ರಾಹ್ಮಣರು. ಬ್ರಾಹ್ಮಣರ ಮನೆಯಲ್ಲಿ ಮಾತ್ರ ಅನ್ನ - ನೀರು ಮುಟ್ಟುವವರು.

"ಈ ಹಳ್ಳಿಯಲ್ಲಿ ಬ್ರಾಹ್ಮಣರಿಲ್ಲವೆ?" ಎಂದು ಅವರು ಗೌಡರನ್ನು ಕೇಳಿದರು.

ಅವನು ನಗುತ್ತಾ, "ಇಲ್ಲೆಲ್ಲಿಂದ ಬಂದಾರ್ರೀ ಬ್ರಾಹ್ಮಣರು?" ಎಂದ.

ಸರಿ. ಊಟ ಸಿಕ್ಕುವ ಆಸೆಯಂತೂ ಫಲಿಸುವಂತಿರಲಿಲ್ಲ. ಅಂದ ಮಾತ್ರಕ್ಕೆ ಹಸಿವೆಯನ್ನು ತಡೆಯಲಾಗುತ್ತದೆಯೆ?

"ಅವಲಕ್ಕಿ ಮೊಸರನ್ನಾದರೂ ತರಿಸು ಮಾರಾಯಾ," ಎಂದರು.

ಗೌಡರ ಮನೆಯಿಂದ ಅವಲಕ್ಕಿ, ಪುಠಾಣಿ ಚಟ್ನಿ ಬಂದುವು. ರಾತ್ರಿ ಹೆಪ್ಪು ಹಾಕಿದ್ದ ಮೊಸರಿನದೊಂದು ಗಡಿಗೆಯೂ ಬಂತು. ಬಾಳೆಯ ಎಲೆಯೂ ಬಂದಿತು. ಹಾಲು ಪೂರ್ಣವಾಗಿ ಮೊಸರಾಗಿರಲಿಲ್ಲ. ಆದರೂ ಅದನ್ನು ನೋಡುತ್ತಲೂ ಶಂಕರರಾಯರ ಹಸಿವೆ ಮತ್ತಷ್ಟು ಹೆಚ್ಚಾಯಿತು.

ಬಾವಿಗೆ ಹೋಗಿ, ಒಂದು ತಂಬಿಗೆ ನೀರು ತಂದು ಅವಲಕ್ಕಿ ಮೊಸರನ್ನು ಎಲೆಯ ಮೇಲೆ ಹರಡಿ ಕುಳಿತುಕೊಂಡರು ಶಂಕರರಾಯರು.

"ನೀವು ನಮ್ಮಲ್ಲೇ ಊಟ ಮಾಡಬರ್ರಿ," ಎಂದರು ಗೌಡರು - ನನ್ನನ್ನು ಕುರಿತು.

"ಇಂಥಾ ರಾತ್ರಿಯಲ್ಲಿ ನಿಮ್ಮ ಮನೆಯವರಿಗ್ಯಾಕೆ ತ್ರಾಸ? ನಾನೂ ಸ್ವಲ್ಪ ಅವಲಕ್ಕಿ ತಿಂದು ಮುಗಿಸುತ್ತೀನಿ," ಎಂದು ಶಂಕರರಾಯರ ಜೊತೆಗೆ ಕುಳಿತುಕೊಂಡೆ.

ರಾತ್ರಿಯ ಮೂರು ಗಂಟೆಯ ಸಮಯ. ನಿಜವಾಗಿ ಅದು ಊಟದ ಸಮಯವಲ್ಲ. ನಾನಾದರೋ ತರುಣ. ಅಂಥ ಅವೇಳೆಯಲ್ಲಿ ತಿಂದರೂ ಜೀರ್ಣಿಸಿಕೊಳ್ಳಬಲ್ಲ ಶಕ್ತಿಯಿತ್ತು. ಶಂಕರರಾಯರಾದರೋ ಐವತ್ತು ವರ್ಷ ವಯಸ್ಸಿನವರು. ಮನೆತನದ ತಾಪತ್ರಯಗಳಿಂದ ಹಣ್ಣಾದ ಜೀವ. ಬಾಯಲ್ಲಿ

ಒಂದೆರಡು ಹಲ್ಲುಗಳುಳಿದಿದ್ದುವು, ಅಷ್ಟೆ. ದೇಹದಲ್ಲಿ ಬಲವೇನೂ ಇರಲಿಲ್ಲ. ಆದರೂ ಹಸಿವು. ನಾಲಗೆಯನ್ನು ಕುಣಿಸುವಂಥ ರುಚಿಕರವಾದ ಮೊಸರು. ಸರಿ. ಹಿಂದುಮುಂದಿನ ವಿಚಾರಮಾಡದೆ ಅವಲಕ್ಕಿ ಮೊಸರು ಮುಕ್ಕತೊಡಗಿದರು. ನಾನೂ ಯಥೇಚ್ಛವಾಗಿ ತಿಂದು ಎದ್ದೆ. ಅವರು ಗಡಿಗೆಯಲ್ಲಿದ್ದ ಮೊಸರನ್ನೆಲ್ಲಾ ಮುಗಿಸಿದ ತರುವಾಯವೇ ಎದ್ದರು.

"ಇಂಥಾ ಮೊಸರನ್ನು ನಾನೆಂದೂ ತಿಂದಿರಲಿಲ್ಲಪ್ಪಾ ಶಿವಣ್ಣಾ!" ಎನ್ನುತ್ತಾ ತೃಪ್ತಿಯಿಂದ ಹೊಟ್ಟೆಯ ಮೇಲೆ ಕೈಯೆಳೆಯುತ್ತಾ ಅವರು ಹಾಸಿಗೆಯ ಮೇಲೆ ದೇಹ ಚೆಲ್ಲಿದರು.

ಬೆಳಿಗ್ಗೆ ನಾನು ಏಳುವುದರೊಳಗಾಗಿಯೆ ಶಂಕರರಾಯರೂ ಎದ್ದು ಊರಾಚೆ ಹೋಗಿದ್ದವರು ಮರಳಿ ಬಂದಿರಲಿಲ್ಲ. ರಾತ್ರೆ ತಿಂದ ಅವಲಕ್ಕಿ ಮೊಸರು ಅವರ ಹೊಟ್ಟೆಯಲ್ಲಿ ತಾಂಡವವಾಡುತ್ತಿದ್ದಿತು.

"ಈಗಾಗಲೇ ಹತ್ತು ಸಲ ಶೌಚವಾಯಿತು," ಎಂದು ನುಡಿದು ನಕ್ಕರು ಗೌಡರು.

ಹಾಗೆ ಆದರೂ ಆಗಬಹುದೆಂದು ರಾತ್ರೆಯೇ ನನಗೆನಿಸಿತ್ತು.

"ಏನು ಮಾಡುವದು ಗೌಡರೇ. ವಿಚಾರಣೆಗಾಗಿ ಬಂದಾಗ ಇದೊಂದು ತೊಂದರೆ. ಸರಿ. ನಾವು ಕೆಲಸಕ್ಕಾರಂಭಿಸೋಣ."

ಕೆರೆಗೆ ಹೋಗಿ ಮಗುವಿನ ಶವದ ಪಂಚನಾಮೆ ಮಾಡಿಸಿದೆ. ನಿನ್ನೆಯೋ ಮೊನ್ನೆಯೋ ಹುಟ್ಟಿದ ಮಗು. ಬಹಳ ಮುದ್ದಾಗಿತ್ತು. ಅದರ ಶವವನ್ನು ಕಂಡು ನನ್ನ ಕಣ್ಣಲ್ಲಿ ನೀರೂರುವಂತಾಗಿತ್ತು.

ನಿಯಮಗಳ ಪ್ರಕಾರ ಆ ಶವವನ್ನು ಪರೀಕ್ಷೆಗಾಗಿ ಆಸ್ಪತ್ರೆಗೆ ರವಾನಿಸಲಾಯಿತು. ಪ್ರಾಥಮಿಕ ಶಾಲೆಯ ವಿದ್ಯಾರ್ಥಿಗಳ, ಶಿಕ್ಷಕರ, ಮತ್ತಿತರರ ಹೇಳಿಕೆ ತೆಗೆದುಕೊಂಡು, ಅಪರಾಧವನ್ನು ಉಲ್ಲೇಖಿಸಿಕೊಳ್ಳಲು ಕಚೇರಿಗೆ ಫಿರ್ಯಾದು ಕಳಿಸಿದೆವು.

ಆ ವೇಳೆಗೆ ಮಧ್ಯಾಹ್ನವಾಗಿತ್ತು. ಇನ್ನು ಆ ಮಗುವಿನ ತಾಯಿಯ ಶೋಧವಾಗಬೇಕು.

ಊಟ ಮಾಡಿ ಯೋಚಿಸಿದರಾಯಿತೆಂದುಕೊಳ್ಳುತ್ತಾ ನಾನು ಗೌಡರ

ಮಧ್ಯನೆಗೆ ಊಟಕ್ಕೆ ಹೊರಟೆ. ಶಂಕರರಾಯರು ಚಾವಡಿಯಲ್ಲಿ ಬಿದ್ದುಕೊಂಡಿದ್ದಾಗಿನ. ಇನ್ನು ಮೂರು ದಿನಗಳವರೆಗೆ ಅವರು ಅನ್ನವನ್ನೇ ಮುಟ್ಟದಂತಾಗಿತ್ತು ಅವರ ಸ್ಥಿತಿ.

"ಮೊಸರು ಹ್ಯಾಗಿತ್ತು ರಾಯರೇ?" ಎಂದೆ ನಾನು, ನಗುತ್ತಾ.

"ಅಯ್ಯೋ! ರಾಮ ರಾಮಾ!" ಎಂದು ನರಳಿದರವರು.

೧೪

# ಗೌಡರ ಹೆಂಡತಿ : ಕುರುಬರ ಮೂಳಣ್ಣ

ಗೌಡರು ತುಂಬಾ ಸ್ಥಿತಿವಂತರು. ಮನೆಯೂ ದೊಡ್ಡದಾಗಿತ್ತು. ಆದರೆ, ಅಲ್ಲಿ ಹೆಚ್ಚು ಜನರಿರಲಿಲ್ಲ. ಗೌಡರು, ಅವರ ಹೆಂಡತಿ ಇಬ್ಬರೇ.

"ಹುಡುಗರೆಲ್ಲಾ ಎಲ್ಲಿ ಗೌಡರೇ ?"

"ಇನ್ನೂ ದೇವರು ಸರಿಮಾಡಲಿಲ್ಲ," ಎಂದರು ಗೌಡರು ವಿಷಾದದಿಂದ ಭಾರವಾದ ದನಿಯಲ್ಲಿ.

ಅವರಿಗಾಗ ಮೂವತ್ತೋ ಮೂವತ್ತೈದೋ ವಯಸ್ಸು. ಹೆಂಡತಿ ಇಪ್ಪತ್ತೈದು ವರ್ಷದಾಕೆ. ಬಡವರ ಮನೆಯ ಆ ಹೆಣ್ಣಿನ ಚೆಲುವಿಕೆಗೆ ಮರುಳಾಗಿ ಗೌಡರು ಅವಳನ್ನು ಮದುವೆಯಾಗಿದ್ದರು. ಬಡವರ ಮನೆಯಲ್ಲಿ ಹುಟ್ಟಿ ಬೆಳೆದ ಹೆಣ್ಣು ಸಿರಿವಂತರ ಮನೆ ಸೇರಿಕೊಂಡರೆ ಸಹಜವಾಗಿಯೇ ಅವಳಿಗೆ ಅಹಂಕಾರ ಬರುತ್ತದೆ. ಇವಳಿಗಾದುದೂ ಹಾಗೆಯೇ. ಮೇಲಾಗಿ ಇದು ಗೌಡರ ಮನೆ. ಹಳ್ಳಿಯ ಜನರ ಮೇಲೆಲ್ಲ ಅಧಿಕಾರ. ಓಲೇಕಾರರು ಮತ್ತು ಹಳಬರ ಮೇಲೆ ದರಬಾರು. ಗೌಡರಿಗಿಂತ ಅವರ ಹೆಂಡತಿಯ ದರ್ಪವೇ ಹೆಚ್ಚು ಎನ್ನುವಂತಾಗಿತ್ತು. ಅವಳ ಚೆಲುವಿಕೆಯ ಗುಲಾಮರಾಗಿದ್ದ ಗೌಡರು ಅವಳಿಗೆ ಎಂದೂ ಕಟುನುಡಿಗಳನ್ನಾಡುತ್ತಿರಲಿಲ್ಲ. ಅಷ್ಟು ಮಾತ್ರವಲ್ಲ, ಅವಳನ್ನು ಯಾವಾಗಲೂ ಪ್ರಸನ್ನವಾಗಿಡಲು ಪರಿಪರಿಯಾಗಿ ಯತ್ನಿಸುತ್ತಿದ್ದರು. ಹಳ್ಳಿಯವರಿಗೂ ಆ ಸಂಗತಿ ತಿಳಿದು "ಇವನೊಬ್ಬ ಹೆಣ್ಣ್ಯಾ ಗೌಡ," ಎಂದು ಅವರು ಕರೆಯಲಾರಂಭವಾಗಿತ್ತು.

ಸ್ನಾನಕ್ಕೆಂದು ನಾನು ಬಚ್ಚಲಿಗಿಳಿಯುತ್ತಲೂ ಗೌಡರ ಹೆಂಡತಿ

ಬಂದಳು. ಅದೇ ಮೊದಲಬಾರಿ ನಾನು ಅವಳನ್ನು ನೋಡುತ್ತಿದ್ದುದು. ನಿಜ ವಾಗಿಯೂ ಅವಳು ಸುಂದರಿ. ಹಳ್ಳಿಯ ಯುವತಿಯರಿಗೆ ಸಹಜವಾದ ಪುಷ್ಟ ಮೈಕಟ್ಟು ಅವಳದು.

"ನೀರು ಸುಡುತ್ತೈತೋ ಏನೋ. ತಣ್ಣೀರು ತರಲೇ?" ಎಂದಳಾಕೆ.

"ಏನೂ ಬೇಡ," ಎಂದು ನಾನು ಹೇಳಿದರೂ ಅವಳು ಅಲ್ಲಿಯೇ ನಿಂತು ಕೊಂಡಿದ್ದಳು. ಅವಳೆದುರಿಗೆ ನಿಂತು ಸ್ನಾನಮಾಡಲು ನನಗೇ ಸಂಕೋಚ ವಾಗುತ್ತಿತ್ತು. ಅವಳಿಗೆ ಮಾತ್ರ ಯಾವ ಸಂಕೋಚವೂ ಇರಲಿಲ್ಲ. ಚಿರಪರಿ ಚಿತರೆದುರಿಗೆ ನಿಲ್ಲುವ ಹಾಗೇ ನನ್ನೆದುರು ನಿಂತಿದ್ದಳವಳು. ಆಗಾಗ ಅನಾವಶ್ಯಕ ವಾಗಿ ಎದೆಯ ಮೇಲಿನ ಸೆರಗು ಸರಿಸುತ್ತಿದ್ದಳು, ಮತ್ತೆ ಮುಚ್ಚುತ್ತಿದ್ದಳು. ಹಾಗೆ ಮುಚ್ಚುವಾಗ ಎದೆಯ ಇನ್ನೊಂದು ಭಾಗ ಕಾಣುತ್ತಿತ್ತು. ನನ್ನನ್ನು ಪರೀಕ್ಷಿಸಲೆಂದೇ ಅವಳು ಸ್ತನಪ್ರದರ್ಶನ ನಡಸಿದ್ದುದು ಸ್ಪಷ್ಟವಾಗಿತ್ತು. ಅಂಥ ಎಷ್ಟೋ ಹೆಣ್ಣುಗಳನ್ನು ಕಂಡಿದ್ದ ನಾನು ಅವಳ ಆಶಯವೇನೆಂಬುದನ್ನು ಕೂಡಲೆ ಅರಿತುಕೊಂಡೆ.

ಸ್ನಾನ ಮುಗಿಸಿ, ಹೊರಗೆ ಬಂದು ಮಡಿಯರಿವೆ ಧರಿಸಿ, ಕ್ರಾಪು ಬಾಚಿ ಕೊಂಡು, "ಇನ್ನು ಊಟ ಮಾಡೋಣವೋ?" ಎಂದು ಕೇಳಿದೆ, ಗೌಡರನ್ನು.

"ನಡೆಯಿರಿ," ಎಂದು ಅವರು ನನ್ನನ್ನು ಊಟದ ಕೊಠಡಿಗೆ ಕರೆದು ಕೊಂಡು ಬಂದರು.

ಅಲ್ಲಿ ಒಂದೇ ಮಣೆಯನ್ನು ಮಾತ್ರ ಇರಿಸಲಾಗಿತ್ತು. ನನಗೆ ಆಶ್ಚರ್ಯ ವಾಗದಿರಲಿಲ್ಲ.

"ಯಾಕೆ ಗೌಡರೇ, ನೀವು ಉಣ್ಣುವದಿಲ್ಲವೆ?"

ಅವರ ಮುಖದ ಮೇಲೆ ಗೊಂದಲದ ಭಾವ ಮೂಡಿತ್ತು.

"ಇನ್ನೊಂದು ಮಣೆ ಹಾಕಲ್ಲ!" ಎಂದು ಅವರು ಹೆಂಡತಿಯನ್ನು ಕುರಿತು ಹೇಳಿದರು.

"ಮೊದಲು ಬಂದವರು ಉಣ್ಣಲಿ. ನೀವು ಆಮ್ಯಾಲ ಉಣ್ಣರಿ," ಎಂದಳಾ ಹೆಂಡತಿ! ಸೇವಕನಿಗೆ ಆದೇಶವೀಯುವ ಮಹಾರಾಣಿಯ ದರ್ಪವಿತ್ತು ಅವಳ ಧ್ವನಿಯಲ್ಲಿ.

ಮತ್ತೆ ಗೌಡರು ಮಾತನಾಡಲಿಲ್ಲ.

"ಆಗಲಿ. ಮೊದಲು ನಿಮ್ಮದು ಮುಗಿಯಲಿ," ಎನ್ನುತ್ತಾ ಅವರು ಹೊರಗೆ ಹೋದರು.

ನಾನು ಅವಳನ್ನು ಕುರಿತು,

"ಒಬ್ಬನೇ ಉಣ್ಣುವ ಚಟವಿಲ್ಲ ನನಗೆ. ಗೌಡರೂ ಬರಲಿ," ಎಂದೆ.

"ನಮ್ಮ ಊರವರು ಬಂದಿದ್ದಾರೆ. ಅವರ ಸಂಗಡ ಗೌಡರೂ ಕೂಡುತ್ತಾರೆ." ಎಂದು ಹೇಳಿದವಳೇ ಅವಳು ಬಡಿಸಲು ಆರಂಭಿಸಿದಳು. ಅವಳೊಡನೆ ವಾದಿಸುವುದರಿಂದೇನೂ ಉಪಯೋಗವಾಗುವಂತಿಲ್ಲವೆಂಬುದು ನನಗಾಗಲೆ ಗೊತ್ತಾಗಿ ಹೋಗಿತ್ತು. ನನಗೊಬ್ಬನಿಗೇ ಊಟಕ್ಕೆ ನೀಡುವುದರಲ್ಲಿ ಅವಳಿಗಿದ್ದ ಉದ್ದೇಶವೂ ನನಗೆ ತಿಳಿದಿತ್ತು.

ಬಡಿಸುವಾಗಿನ ಅವಳ ಸಡಗರವಂತೂ ವರ್ಣಿಸಲಸದಳವಾದುದು. ಕೈಯಲ್ಲಿ ತಟ್ಟೆ ಹಿಡಿದುಕೊಂಡು ಬಳುಕುತ್ತ ಬಳುಕುತ್ತ ಬರುತ್ತಿದ್ದ ಆ ಆಕರ್ಷಕ ದೇಹ ಎಂಥ ಯತಿಯನ್ನು ಮರುಳುಗೊಳಿಸುವಂತಿತ್ತು. ಮೈತುಂಬಾ ಬಂಗಾರದ ಆಭರಣ ತೊಟ್ಟು ಗದಗಿನ ರೇಶಿಮೆ ಸೀರೆಯನ್ನುಟ್ಟುಕೊಂಡಿದ್ದಳಾಕೆ. ಗುಲಾಬಿ ಬಣ್ಣದ ಜರದಂಚಿನ ಕುಬುಸ. ಕೊರೆದು ಮಾಡಿದಂತಿದ್ದ ಹುಬ್ಬು. ದೊಡ್ಡ ದೊಡ್ಡ ಕಣ್ಣು. ಮಾಟವಾದ ಬಾಯಿ. ಮುದ್ದಿಡಲೆಂದೇ ಮಾಡಿದಂತಿದ್ದ ತುಟಿ. ಗೌಡರನ್ನು ಅವಳು ಅಂಕೆಯಲ್ಲಿಟ್ಟುಕೊಂಡುದುದರಲ್ಲಿ ಆಶ್ಚರ್ಯವೇನೂ ಇರಲಿಲ್ಲ.

ಬಡಿಸುತ್ತಿದ್ದ ಹಾಗೇ ಅವಳು ಅಂದು ನಡೆದ ಅಪರಾಧದ ವಿಚಾರವಾಗಿ ಮಾತನಾಡುತ್ತಿದ್ದಳು.

"ಹಡೆದ ಕೂಸನ್ನ ಹೀಗೆ ಒಗೆಯುವಂಥಾಕೆ ಎಂಥಾ ಕಲ್ಲುಮನಸಿನಾಕೆಯಿದ್ದಾಳು ನೋಡಿರಿ. ಯಾರಾದರೂ ಒಗೆದಾರೇ ಹೀಗೆ! ಪಾಪ. ಆ ಕೂಸಿನದೇನು ತಪ್ಪು ಇದರಲ್ಲಿ. ನನಗಾದರೂ ಕೊಟ್ಟಿದ್ದರೆ ನಾನು ಬೆಳಿಸಿ ಜೋಪಾನ ಮಾಡುತ್ತಿದ್ದೆ."

"ನಿನಗೆ ಮಕ್ಕಳೆಂದರೆ ಬಹಳ ಆಸೆಯಲ್ಲವೆ?"

"ಹೆಂಗಸಾಗಿ ಹುಟ್ಟಿದಮ್ಯಾಲ ಮಕ್ಕಳಿರದಿದ್ದರೆ ಹ್ಯಾಗೆ? ನಾನೂ ಎಷ್ಟು ದೇವರಿಗೆ ಹರಕೆ ಹೊತ್ತೆ. ಎಷ್ಟು ಮುಡುಪು ಕಟ್ಟಿದೆ! ಅಂತೂ ಶಿವನ ಮನಸಿನಾಗ ದಯಾ ಬರಲಿಲ್ಲ."

“ಡಾಕ್ಟರರಿಗೆ ತೋರಿಸಿದರೆ ಒಳ್ಳೆಯದು.”

“ಆಯ್ತು! ನಾನೇನು ನಿಮ್ಮ ಹಾಗೆ ಪಟ್ಣಣದವರೇ, ಡಾಕ್ಟರಿಗೆ ತೋರಿಸುವದಕ್ಕೆ! ಕೇಳಿದವರು ನಕ್ಕಾರು!” ಎನ್ನುತ್ತಾ ಅವಳು ನನ್ನ ಮುಖವನ್ನೇ ದಿಟ್ಟಿಸುತ್ತ ಗಟ್ಟಿಯಾಗಿ ನಕ್ಕಳು.

“ಇನ್ನೂ ಸ್ವಲ್ಪ ತುಪ್ಪ ಹಾಕುತೀನಿ.”

“ಬೇಡ, ಬೇಡ. ಸಾಕು,” ಎಂದು ನಾನು ಹೇಳುತ್ತಿದ್ದರೂ ಬಿಡದೆ ನಾನು ಮುಂದೆ ಚಾಚಿದ ಕೈಯನ್ನು ಬದಿಗೆ ಸರಿಸಿ ಅವಳು ತುಪ್ಪ ನೀಡಿದಳು.

“ನಿಮ್ಮದೇ ಮನೆ ಅಂತ ತಿಳಕೊಂಡು ನೆಟ್ಟಗೆ ಊಟಾ ಮಾಡಿರಿ.”

ಅವಳ ದಿಟ್ಟತನವನ್ನು ಕಂಡು ನನಗೇ ಸಂಕೋಚವೆನ್ನಿಸಿತು.

ಅವಳು ತನ್ನ ಗಂಡನನ್ನು ಕೂಗಿ ಕರೆದು, ಅವರು ಬರುತ್ತಲೂ ನಗು ನಗುತ್ತ ಹೇಳಿದಳು:

“ಊಟ ಮಾಡುವದಕ್ಕೆ ನಾಚುತಾರೆ ನೋಡಿರಿ ಇವರು. ಅರಹೊಟ್ಟೆ ಉಂಡು ಹೋಗುತಾರೋ ಏನೋ.”

ನನ್ನ ಆದರಾತಿಥ್ಯದಲ್ಲಿ ತನ್ನ ಹೆಂಡತಿ ವ್ಯಕ್ತಗೊಳಿಸುತ್ತಿದ್ದ ಆಸಕ್ತಿಯನ್ನು ಕಂಡು ಗೌಡರಿಗೂ ಆನಂದವಾಗಿತ್ತು.

“ಏನೂ ಸಂಕೋಚಮಾಡಿಕೊಳ್ಳದೆ ಹೊಟ್ಟೆತುಂಬಾ ಊಟ ಮಾಡಿರಿ,” ಎಂದು ಹೇಳಿ ಅವರು ಮತ್ತೆ ಹೊರಗೆ ಹೋದರು.

ಅವಳ ಮನಸ್ಸಿನಲ್ಲಿ ಬೇರಾವ ವಿಕಾರವೂ ಇರಲಾರದು, ಕೇವಲ ಆದರಾತಿಥ್ಯಕ್ಕಾಗಿ ಅವಳು ನನ್ನೊಡನೆ ಸಲುಗೆಯಿಂದ ವರ್ತಿಸುತ್ತಿರಬಹುದು – ಎಂದೂ ನನಗೆನ್ನಿಸಿತು. ಆದರೆ, ಅವಳ ನಗು, ಕಣ್ಣಿನ ಚಲನವಲನ, ಎದೆ ಮತ್ತು ಇತರ ಅಂಗಾಂಗಗಳ ಪ್ರದರ್ಶನ – ಇವೆಲ್ಲದರ ಅರ್ಥವೇನು ?

“ನಿಮ್ಮ ಲಗ್ನವಾಗಿ ಎಷ್ಟು ವರ್ಷ ಆಯಿತು ?” ಎಂದು ನಾನು ಬೇಕೆಂತಲೇ ಅವಳನ್ನು ಪ್ರಶ್ನಿಸಿದೆ.

“ಹನ್ನೆರಡು ಹದಿಮೂರು ವರ್ಷವಾಗುತ್ತಾ ಬಂತು,” ಎಂದು ಉತ್ತರ ವಿತ್ತು ಅವಳು ನಿಟ್ಟುಸಿರು ಹಾಕಿದಳು –

“ಹದಿಮೂರು ವರ್ಷ ಅಂದರೇನು ಬಹಳವಲ್ಲ. ಈಗ ನಿಮಗೆ ಇಪ್ಪತ್ತು ವರ್ಷ ವಯಸ್ಸಿದ್ದೀತು, ಅಲ್ಲವೆ ”?

“ಇಪ್ಪತ್ತು – ಇಪ್ಪತ್ತೈದು.”

“ಹಾಗಾದರೆ ನಿರಾಸೆಗೇನು ಕಾರಣ? ಎಷ್ಟೋ ಹೆಂಗಸರಿಗೆ ಮೂವತ್ತು ನಲವತ್ತು ವರ್ಷಕ್ಕೆ ಮಕ್ಕಳಾಗುವುದುಂಟು.”

“ಹೌದು. ಆಗುತ್ತವೆ. ನನಗೂ ಆದಾವು, ಆದರೆ....” ಅವಳು ವಾಕ್ಯವನ್ನು ಪೂರ್ಣಗೊಳಿಸಲಿಲ್ಲ. ಹಾಲು ಮೊಸರು ತೆಗೆದುಕೊಂಡು ಬರಲೆಂದು ಅಡುಗೆಯ ಮನೆಗೆ ಹೋದಳು.

ಅವಳು ಹಿಂದಿರುಗಿ ಬಂದೊಡನೆಯೆ ನಾನು ಕೇಳಿದೆ:

“ನಿಮಗೆ ಮಕ್ಕಳಾಗಬಹುದು. ಗೌಡರಿಗೆ ಆಗಲಾರವು ಅನ್ನುತ್ತೀರಾ?”

“ಮಂದಿ ಹಾಗೆ ಮಾತಾಡುತಾರೆ.”

“ಹಾಗಾದರೆ....” ಎನ್ನುತ್ತಾ ನಾನು ಊಟ ಮುಗಿಸಿ, ಕೈತೊಳೆದುಕೊಂಡು ಎದ್ದುಬಿಟ್ಟೆ. ಅಲ್ಲಿ ನಿಂತುಕೊಳ್ಳುವುದಕ್ಕೂ ಭಯವಾಗತೊಡಗಿತು.

ಹೊರಗೆ ಬಂದು ಕಟ್ಟೆಯ ಮೇಲೆ ಕುಳಿತುಕೊಂಡೆ.

“ಚೆನ್ನಾಗಿ ಊಟ ಮಾಡಿದಿರಾ?” ಎಂದರು ಗೌಡರು.

“ನಿಮ್ಮ ಮನೆಯವರು ಅನ್ನಪೂರ್ಣೆಯಿದ್ದಂತೆ ಇದಾರೆ. ಎರಡು ದಿನಗಳಿಗಾಗುವಷ್ಟು ಊಟ ಮಾಡಿಸಿಬಿಟ್ಟರು.”

“ಅವಳು ಯಾವಾಗಲೂ ಹಾಗೇ. ಬಂದವರಿಗೆ ಊಟಕ್ಕೆ ಹಾಕುವದೆಂದರೆ ಅವಳಿಗೆ ಬಹಳ ಪ್ರೀತಿ.”

ಸಾಯಂಕಾಲ ಆ ಊರಿನ ಹತ್ತಿಪ್ಪತ್ತು ಹೆಂಗಸರನ್ನು ಚಾವಡಿಗೆ ಕರೆಯಿಸಿದರು ಶಂಕರರಾಯರು ಮಗುವನ್ನು ಹೆತ್ತ ತಾಯಿಯನ್ನು ಕಂಡುಹಿಡಿಯಬೇಕಷ್ಟೆ. ಶಂಕರರಾಯರು. ಆ ಹೆಂಗಸರ ಮುಖಲಕ್ಷಣಗಳನ್ನು ಪರೀಕ್ಷಿಸಿ, ಹಲವಾರು ಪ್ರಶ್ನೆ ಹಾಕಿ ಉತ್ತರ ಪಡೆಯುತ್ತಿದ್ದರು. ಪಾಪ. ಆ ಹೆಂಗಸರಿಗೆಲ್ಲ ಅದೊಂದು ಅತ್ಯಂತ ಅವಮಾನಕಾರಕ ವಿಷಯವಾಗಿತ್ತು. ಈ ಸಂದರ್ಭದ ದುರ್ಲಾಭ ಪಡೆಯಲೆಂದು ಗೌಡರೂ ಓಲೇಕಾರರೂ ತಮಗಾಗದ ಜನರ ಮನೆಯ ಹೆಂಗಸರನ್ನು ಚಾವಡಿಗೆ ಕರೆಯಿಸತೊಡಗಿದ್ದರು. ಅರ್ಥಾತ್ ಅವರ ಮನೆಯವರಿಗೆಲ್ಲ ಅದು ಅಸಹನೀಯವಾಗಿತ್ತು. ತಮ್ಮ ಹೆಂಡಿರನ್ನೂ ಅಕ್ಕ ತಂಗಿಯರನ್ನೂ ವ್ಯಭಿಚಾರದ ಸಂದೇಹದಿಂದ ಚಾವಡಿಗೆ ಕರೆಯಿಸುವುದೆಂದರೇನು! ಹಾಗೆ ಕೆರಳಿದ ಗಂಡಸರೆಲ್ಲಾ ಚಾವಡಿಯೆದುರಿಗೆ ನೆರೆದರು.

ಯಾರೋ ಒಬ್ಬಾಕೆ ಹಾದರಗಿತ್ತಿ ಮಾಡಿದ ಕೆಲಸಕ್ಕೆ ಊರ ಹೆಂಗಸರನ್ನೆಲ್ಲಾ ಅವಮಾನ ಮಾಡುವವರೇನು ನೀವು?" ಎಂದು ಒಬ್ಬ ಆಕ್ಷೇಪದ ಧ್ವನಿಯೆತ್ತಿದ.

"ಸಂಶಯವಿದ್ದವರನ್ನು ಕೇಳಿ ನೋಡಿರಿ ಬೇಕಾದರೆ. ಉಳಿದವರನ್ನೆಲ್ಲಾ ಈಗಿಂದೀಗ ಬಿಟ್ಟುಬಿಡಿರಿ," ಎಂದು ಇನ್ನೊಬ್ಬ ಹೇಳಿದ.

ಅವನ ಮಾತು ನನಗೂ ಸರಿಯೆನ್ನಿಸಿತು. ಹೆಂಗಸರೆಲ್ಲರೂ ಮನೆಗೆ ಹೋಗಬಹುದೆಂದು ಹೇಳಿದೆವು.

"ಇನ್ನು ಆರೋಪಿಯನ್ನು ಪತ್ತೆ ಮಾಡುವದು ಹ್ಯಾಗೆ?" ಎಂದರು ಶಂಕರರಾಯರು.

"ನೋಡೋಣ. ದೇವರಿದ್ದಾನೆ," ಎಂದೆ ನಾನು, ಶಾಂತವಾಗಿಯೇ.

"ನೀವೇನೋ ಎರಡು ಮೂರು ದಿನವಾದರೂ ಇಲ್ಲಿ ಕೂಡಬಹುದು. ನನಗೋ ಸಂಕಟ ಬಂದಿದೆ. ಕೂಡುವಂತಿಲ್ಲ, ನಿಲ್ಲುವಂತಿಲ್ಲ," ಎಂದು ಗೋಳಾಡಿದರು ಶಂಕರರಾಯರು.

"ಇನ್ನಿಷ್ಟು ಅವಲಕ್ಕಿ ಮೊಸರು ಹೊಡೆದುಬಿಟ್ಟರೆ ಎಲ್ಲಾ ಸರಿಹೋಗಬಹುದಲ್ಲಾ!"

"ಸರಿ. ನಿಮಗೆ ಚೇಷ್ಟೆ. ನನಗೆ ಕುತ್ತಿಗೆಗೆ ಬಂದಿದೆ," ಎಂದು ಹೇಳುತ್ತಾ ಅವರು ಹಾಸಿಗೆಯ ಮೇಲುರುಳಿದರು.

ಮೂರನೆಯ ದಿನ ಬೆಳಗಿನ ಎಂಟು ಗಂಟೆಗೆ ನಾನು ಚಾವಡಿಯ ಮುಂದಿನ ಕಟ್ಟೆಯ ಮೇಲೆ ಕುಳಿತು ಗೌಡರೊಡನೆ ಹರಟುತ್ತಿದ್ದಾಗ, ಕೊಡ ಹೊತ್ತುಕೊಂಡು ಕೆರೆಗೆ ಹೊರಟಿದ್ದ ಒಬ್ಬ ಹೆಂಗಸು ನನ್ನ ಗಮನವನ್ನು ಸೆಳೆದಳು. ಅಕಸ್ಮಾತ್ತಾಗಿ ಅವಳ ಕಾಲುಗಳತ್ತ ನನ್ನ ದೃಷ್ಟಿ ಹರಿಯಿತು. ಅವಳ ಪಾದಗಳ ಹಿಂಬದಿಯಲ್ಲಿ ರಕ್ತ ಹರಿಯುತ್ತಿದ್ದುದನ್ನು ಕಂಡೊಡನೆ ನನ್ನ ಕುತೂಹಲ ಜಾಗ್ರತವಾಯಿತು. ಅವಳ ಪಾದಗಳನ್ನೇ ಸೂಕ್ಷ್ಮವಾಗಿ ದಿಟ್ಟಿಸಿ ನೋಡಿದೆ. ಅಲ್ಲಿ ಗಾಯವಾದ ಚಿಹ್ನೆಗಳೇನೂ ಇರಲಿಲ್ಲ. ಮೇಲ್ಭಾಗದಿಂದಲೇ ಹರಿದು ಬರುತ್ತಿದ್ದ ಹಾಗಿತ್ತು ರಕ್ತ. ಸರಿ. ಅವಳೇ ಆರೋಪಿಯಿರಬಹುದೆಂದು ನನಗೆನ್ನಿಸಿತು.

"ಇವಳು ಯಾರು ಗೌಡರೇ?"

"ಇವಳೇ? ಕುರುಬರಾಕೆ. ಮಾಳವ್ವ ಅಂತ ಹೆಸರು. ಯಾಕೆ?"

"ಮದುವೆಯಾಗಿದೆಯೋ ಇಲ್ಲೋ?"

"ಆಗಿತ್ತು. ಗಂಡ ಸತ್ತಿದಾನೆ."

ನನಗೆ ಸಂದೇಹವೇ ಉಳಿಯಲಿಲ್ಲ. ಗೌಡರಿಗೆ ಅಲ್ಲಿಯೇ ಕುಳಿತಿರಲು ತಿಳಿಸಿ ಅವಳನ್ನು ಹಿಂಬಾಲಿಸಿಕೊಂಡು ಕೆರೆಗೆ ಹೋದೆ. ಅವಳು ನೀರು ತುಂಬಿದಳು. ನಾನು ಹತ್ತಿರದಲ್ಲಿಯೇ ನಿಂತು ಮುಖ ತೊಳೆದುಕೊಳ್ಳುವ ನಟನೆ ಮಾಡುತ್ತಿದ್ದೆ. ಅವಳು ನಿಧಾನವಾಗಿ ಕೊಡ ಎತ್ತಿದಳು. ಭಾರಿ ಕೊಡ! ನಮ್ಮ ನಗರಗಳಲ್ಲಿನ ಪುರುಷರೂ ಕೂಡಾ ಅದನ್ನೆತ್ತಲಾರರು. ಅಂಥದನ್ನು ಇವಳು ತೀರ ಸುಲಭವಾಗಿ ಎತ್ತಿ ತಲೆಯಮೇಲಿಟ್ಟುಕೊಂಡು ಮನೆಗೆ ಹೊರಟಳು. ನಾನೂ ಹಿಂದಿನಿಂದ ಹೊರಟೆ. ಅವಳ ಕಾಲುಗಳಿಂದ ನಿಧಾನವಾಗಿ ರಕ್ತ ತೊಟ್ಟಿಕ್ಕುತ್ತಲೇ ಇತ್ತು.

ಚಾವಡಿಗೆ ಬರುತ್ತಲೂ ಅವಳನ್ನು ಕರೆದು ಒಂದು ಸ್ಥಳದಲ್ಲಿ ಕುಳಿತಿರುವಂತೆ ಹೇಳಿದೆ. ಅರ್ಧ ತಾಸಿನವರೆಗೆ ಅವಳನ್ನು ಯಾರೂ ಮಾತನಾಡಿಸಲಿಲ್ಲ. ಅನಂತರ ಮೇಲಕ್ಕೇಳಲು ತಿಳಿಸಿದಾಗ ಅವಳು ಕುಳಿತಿದ್ದ ಸ್ಥಳವೆಲ್ಲ ರಕ್ತದಿಂದ ಒದ್ದೆಯಾಗಿದ್ದುದು ಕಾಣಿಸಿತು.

ಗೌಡರೊಬ್ಬರನ್ನು ಬಿಟ್ಟು ಉಳಿದವರನ್ನೆಲ್ಲ ಹೊರಗೆ ಕಳಿಸಿ ಮಾಳವ್ವ ನನ್ನು ಕುರಿತು,

"ಏನು ಮಾಳವ್ವಾ, ಈಗೇನು ಹೇಳುತ್ತೀ? ನಿನಗೆ ಅವಮಾನಮಾಡುವ ಇಚ್ಛೆ ನಮಗಿಲ್ಲ. ಆದದ್ದು ಒಪ್ಪಿಕೊಂಡು ಬಿಡುತ್ತೀಯಾ?" ಎಂದು ಕೇಳಿದೆ.

ಪಾಪ. ಅವಳೇನು ಹೇಳಿಯಾಳು? ಮತ್ತೆ ನೆಲಕ್ಕೆ ಕುಸಿದು ಕುಳಿತವಳೇ ಮುಖಕ್ಕೆ ಸೆರಗು ಹಾಕಿಕೊಂಡು ಬಿಕ್ಕತೊಡಗಿದಳು. ನಿಧಾನವಾಗಿ ಅವಳ ಕಥೆಯೆಲ್ಲವೂ ಹೊರಬಂದಿತು. ಅವರ ಮನೆಯಲ್ಲಿದ್ದ ಆಳು ಮಗನೊಡನೆ ಅವಳಿಗೆ ಸಂಬಂಧವುಂಟಾಗಿತ್ತು. ಅವನೂ ಅವರ ಜಾತಿಯವನೇ ಆಗಿದ್ದ. ಮನೆಯ ಜನರಿಗೂ ಆ ವಿಚಾರ ಗೊತ್ತಾಗಿ ಹೋಗಿತ್ತು. ಅವನಿಗೇ ಇವಳನ್ನು ಕೊಟ್ಟು ಮದುವೆ ಮಾಡಬೇಕೆಂದು ಅವರೂ ಯೋಚಿಸಿಕೊಂಡಿದ್ದರು. ಆದರೆ ಅದು ಮದುವೆಗೆ ಯೋಗ್ಯವಾದ ಸಮಯವಾಗಿರಲಿಲ್ಲ. ಅವಳ ಗಂಡನ ಮನೆಯ ಆಸ್ತಿಯಲ್ಲಿ ಅವಳದೂ ಒಂದು ಭಾಗವಿದ್ದಿತಲ್ಲ. ಈ ವರ್ಷ ಅಲ್ಲಿಗೆ ಹೋಗಿ

ತನ್ನ ಭಾಗವನ್ನು ವಶಪಡಿಸಿಕೊಂಡು ಮಾರಾಟಮಾಡಿ ಹಣ ತೆಗೆದುಕೊಂಡು ಬಂದ ಬಳಿಕ ಈ ಆಳು ಮಗನನ್ನು ಮದುವೆಯಾಗುವುದೆಂದು ಅವಳು ಗೊತ್ತು ಮಾಡಿಕೊಂಡಿದ್ದಳು. ಅಷ್ಟರಲ್ಲಿಯೇ ಗರ್ಭ ಬೆಳೆದುಬಂದಿತ್ತು. ಮಗು ಮಾತ್ರ ಹುಟ್ಟುವಾಗಲೇ ಸತ್ತುಹೋಗಿತ್ತು. ಸತ್ತು ಹುಟ್ಟಿದ ಆ ಮಗುವಿಗಾಗಿ ತನ್ನ ಹೆಸರು ಕೆಡಿಸಿಕೊಳ್ಳುವ ಇಚ್ಛೆ ಅವಳಿಗಿರಲಿಲ್ಲ. ಅಂತೆಯೇ, ರಾತ್ರಿ ಹೆರಿಗೆ ಯಾಗುತ್ತಲೂ ಬೆಳಗಾಗುವುದರೊಳಗಾಗಿ ಶಿಶುವನ್ನೊಯ್ದು ಕೆರೆಯ ಕೆಸರಿನಲ್ಲಿ ಮುಚ್ಚಿ ಬಂದಿದ್ದಳು.

"ದೇವರಾಣೆಮಾಡಿ ಖರೇ ಹೇಳುತೀನಿ ಸರದಾರರೇ. ಕೂಸು ಸತ್ತೇ ಹುಟ್ಟಿತ್ತು," ಎಂದಳು ಮಾಳವ್ವ.

"ಅದೇನೋ ನಿಜವಿರಬಹುದು. ಆದರೂ ನೀನು ಹೀಗೆ ಅದನ್ನು ಚೆಲ್ಲಿ ಕೊಟ್ಟದ್ದೂ ಅಪರಾಧವೇ."

ಮಗು ಹುಟ್ಟುವ ಮೊದಲೇ ಮೃತವಾಗಿದ್ದಿತೆಂದು ಡಾಕ್ಟರರು ಅಭಿಪ್ರಾಯ ಕೊಡುವವರೆಗೂ ಅವಳು ಕೊಲೆಯ ಅಪರಾಧಿಯೇ ಸರಿ. ಅವಳನ್ನು ಬಂಧಿಸಿ, ಕೂಸಿನ ಶವದ ಜೊತೆಗೆ ಆಸ್ಪತ್ರೆಗೆ ಕಳಿಸಲಾಯಿತು. ಡಾಕ್ಟರರ ಅಭಿಪ್ರಾಯದ ಹಾದಿ ಕಾಯುತ್ತಾ ನಾವು ಅಲ್ಲೇ ಕುಳಿತಿರ ಬೇಕಾಯಿತು.

ಅದೇ ದಿನ ಎರೇಸೀಮೆ ಫೌಜದಾರರೂ ಅಲ್ಲಿಗೆ ಬಂದು, ನಾವು ಸಿದ್ಧ ಗೊಳಿಸಿದ್ದ ಕಾಗದ ಪತ್ರಗಳನ್ನು ನೋಡಿ, ಸಾಕ್ಷಿದಾರರನ್ನು ಬರಮಾಡಿಕೊಂಡು, ಪ್ರಶ್ನೆಗಳನ್ನು ಹಾಕಿ ಉತ್ತರಗಳನ್ನು ಪಡೆದು ವಿಚಾರಣೆಗೆ ಸಮರ್ಪಕವಾಗಿ ನಡೆದುದನ್ನು ಮನವರಿಕೆ ಮಾಡಿಕೊಂಡು ತೊಂಡೇಬಾವಿಗೆ ಮರಳಿದರು.

ಮಾಳವ್ವನ ಮನೆಯವರ ಒತ್ತಾಯಕ್ಕೆ ಕಟ್ಟುಬಿದ್ದು ಗೌಡರೂ ಅವ ರೊಡನೆ ನಗರಕ್ಕೆ ಹೋಗಿದ್ದರು. ಡಾಕ್ಟರರ ಕಾಲು ಹಿಡಿದುಕೊಂಡು, ಮಗು ಮೃತಾವಸ್ಥೆಯಲ್ಲೇ ಜನಿಸಿದ ಬಗೆಗೆ ಸರ್ಟಿಫಿಕೇಟು ದೊರಕಿಸಲು ಗೌಡರ ನೆರವು ಅಗತ್ಯವಿತ್ತು ಆ ಜನರಿಗೆ. ಶಂಕರರಾಯರೇ ಆ ಉಪಾಯವನ್ನು ಹೇಳಿ ಕೊಟ್ಟಿದ್ದರು. ಅದಕ್ಕಾಗಿ ಶಂಕರರಾಯರಿಗೆ ನೂರು ರೂಪಾಯಿ, ಗೌಡರಿಗೆ ಇಪ್ಪತ್ತೈದು ರೂಪಾಯಿ ಲಾಭವಾಗಿತ್ತು. ಈ ಮಲೆನಾಡ ಗೌಡರಿಗೆ ಇಂಥ

ದೊಡ್ಡಸ್ತಿಕೆಯೆಂದರೆ ಬಹಳ ಆಸೆ. ಬೇರೊಬ್ಬರ ಕಾಸಿನಲ್ಲಿ ಇವರ ಮೋಜು ನಡೆಯಬೇಕು. ಕೆಲಸ ಸಿದ್ಧಿಸಿದಾಗ ಅದರ ಶ್ರೇಯಸ್ಸೂ ಅವರದೇ ಅಲ್ಲವೆ!

"ನಾನು ಬರುವವರೆಗೆ ನಮ್ಮಲ್ಲೇ ಊಟಮಾಡುತ್ತಾ ಇರಿ ಶಿವಣ್ಣ ನವರೇ. ನಮ್ಮ ಮನೆಯಾಕೆ ಎಲ್ಲಾ ವ್ಯವಸ್ಥೆ ಮಾಡುತ್ತಾಳೆ," ಎಂದು ನನಗೆ ಹೇಳಿಹೋಗಿದ್ದರು ಗೌಡರು. ಅವರಿಲ್ಲದ ವೇಳೆಯಲ್ಲಿ ಅವರ ಮನೆಗೆ ಹೋಗಲು ನನಗೇ ಸಂಕೋಚವಾಗುತ್ತಿತ್ತು. ನಿಜವಾಗಿ ಗೌಡರು ಸರಳಹೃದಯದವರು. ಅಂಥವರನ್ನು ವಂಚಿಸಿ ಅವರ ಹೆಂಡತಿಯೊಡನೆ ಸರಸವಾಡಲು ನನ್ನ ಮನಸ್ಸು ಒಪ್ಪಲಿಲ್ಲ. ಅವಳ ಮನಃಸ್ಥಿತಿಯಂತೂ ನನಗೆ ಚೆನ್ನಾಗಿ ಗೊತ್ತಾಗಿತ್ತು. ಒಂದು ಮಗುವಿನ ತಾಯಿಯಾಗಲು ಅವಳು ಏನನ್ನು ಮಾಡಲೂ ಸಿದ್ಧಳಿದ್ದಳು. ನಾನೇನು ಅಂಥ ಪಾಪಬೀರುವಲ್ಲ. ವ್ಯಭಿಚಾರವೆಂದರೆ ನಾಚಿಕೆಪಟ್ಟುಕೊಳ್ಳು ವವನೂ ಅಲ್ಲ. ಆದರೂ ಗೌಡರ ಹೆಂಡತಿಯ ಸಂಗ ಮಾತ್ರ ನನಗೆ ಬೇಡ ವೆನ್ನಿಸಿತು.

ಆ ಮಧ್ಯಾಹ್ನ ನಾನು ಅವರ ಮನೆಗೆ ಊಟಕ್ಕೆ ಹೋಗಲಿಲ್ಲ. ಬೇರೊಬ್ಬರ ಮನೆಯಿಂದ ಚಾವಡಿಗೇ ಊಟ ಬರುವಹಾಗೆ ವ್ಯವಸ್ಥೆಮಾಡಿದೆ.

"ಯಾಕೆ? ಗೌಡರು ಅಷ್ಟು ಪ್ರೀತಿಯಿಂದ ಹೇಳಿಕಳಿಸಿದ್ದರಲ್ಲ. ಹೋಗಿ ಬಂದರೇನಾಗುತ್ತದೆ?" ಎಂದರು ಶಂಕರರಾಯರು.

"ಏನೋ ನನಗೆ ಮನಸ್ಸಿಲ್ಲ."

ನಾನು ಊಟ ಮಾಡುತ್ತಿದ್ದ ಹಾಗೇ ಓಲೇಕಾರನೊಬ್ಬ ಬಂದು ಹೇಳಿದ:

"ಗೌಡಸಾನಿಯವರು ಊಟಕ್ಕೆ ಕರೆಯುತ್ತಿದಾರೆ ಸರದಾರರೆ."

ಶಂಕರರಾಯರ ಮನಸ್ಸಿನಲ್ಲಿ ಯಾವ ವಿಚಾರ ಬಂದಿತೇನೊ, ಅವರು ನನ್ನನ್ನು ದಿಟ್ಟಿಸುತ್ತಾ ಕಣ್ಣು ಮಿಟುಕಿಸಿದರು. ನಾನು ಅತ್ತ ಗಮನಪೀಯದೆ ಓಲೇಕಾರನನ್ನು ಕುರಿತು ಹೇಳಿದೆ:

"ನನ್ನ ಊಟವಾಯಿತೆಂದು ಹೇಳು ಗೌಡಸಾನಿಯವರಿಗೆ."

"ನೀವು ಬರ್ತೀರಿ ಅಂತ ಹೋಳಿಗೆ ಮಾಡಿದ್ದಾರಂತ್ರೀ ಅವರು!"

ಗಂಡ ಊರಲ್ಲಿಲ್ಲದ ವೇಳೆಯಲ್ಲಿ ಹೋಳಿಗೆ ಮಾಡುವ ಅವಳ ಉತ್ಸಾಹವೆ! ಹೋಗೋಣವೇ? ಎಂದು ಆಸೆಯಾಗದಿರಲಿಲ್ಲ ನನಗೂ. ಆದರೂ ಅದನ್ನು ಹಾಗೇ ಹತ್ತಿಕ್ಕಿಕೊಂಡೆ. ಹೋಳಿಗೆಯ ಆಸೆಯಿಂದ ಅಲ್ಲಿಗೆ

ಹೋದರೆ ಅವಳ ತೋಳುಗಳಲ್ಲಿ ಸಿಲುಕಿಕೊಳ್ಳಬೇಕಾಗುವುದು. ನಾನೂ ಅಂಥ ಸಂಯಮಿಯೇನೂ ಅಲ್ಲ. ಅಂಥ ಸುಂದರಿಯೊಡನೆ ಏಕಾಂತದಲ್ಲಿರುವಾಗ ಮನಸ್ಸಿನ ಮೇಲೆ ಹತೋಟಿಯಿಟ್ಟುಕೊಳ್ಳಲು ಸಾಧ್ಯವಾಗದು.

"ಸಂಜೆಗೆ ಆ ಹೋಳಿಗೆಗಳನ್ನು ಇಲ್ಲಿಗೇ ಕಳಿಸಲು ಹೇಳು," ಎಂದು ತಿಳಿಸಿ ಓಲೇಕಾರನನ್ನು ಅಟ್ಟಿದುದಾಯಿತು.

"ಎಂಥವರಪ್ಪಾ ನೀವು! ಅಷ್ಟು ಪ್ರೀತಿಯಿಂದ ಕರೆದವರಿಗೆ ಇಲ್ಲ ಅಂದು ಕಳಿಸುತ್ತಾರೇನು? ನಾನು ಲಿಂಗಾಯತನಲ್ಲ ಅಂತ ಸುಮ್ಮನಿದ್ದೀನಿ. ಇಲ್ಲದಿದ್ದರೆ ಕುಣಿಯುತ್ತಾ ಹೋಗುತ್ತಿದ್ದೆ," ಎಂದರು ಶಂಕರರಾಯರು.

ಮಾರನೆಯ ದಿನ ಡಾಕ್ಟರರ ಅಭಿಪ್ರಾಯ ಬಂತು. ಮಗು ಮೃತಾವಸ್ಥೆಯಲ್ಲಿ ಜನಿಸಿದುದೆಂದೇ ಅವರೂ ಬರೆದಿದ್ದರು. ಮಾಳವ್ವ ಉಳಿದುಕೊಂಡಳು. ನಾವು ತೊಂಡೇಬಾವಿಗೆ ಮರಳಿದೆವು.

೧೫

# ರಂಗಪ್ಪ ಮತ್ತು ಅಕ್ಕನ್ನ

೧೯೪೧ ನೆಯ ಇಸವಿಯ ಅಂತ್ಯಕಾಲವದು. ಕಾಂಗ್ರೆಸ್ಸಿಗರು ಹೊಸ ಚಳವಳಿ ಹೂಡುವ ಸಿದ್ಧತೆಯಲ್ಲಿದ್ದುದರಿಂದ ಬ್ರಿಟಿಷ್ ಸರಕಾರದ ದೃಷ್ಟಿಯೆಲ್ಲವೂ ಕಾಂಗ್ರೆಸ್ ಚಟುವಟಿಕೆಗಳ ಕಡೆಗೇ ಇತ್ತು. ಪೋಲೀಸರಾದ ನಾವು ಕಾಂಗ್ರೆಸ್ ಚಲನವಲನಗಳನ್ನು ಕುರಿತು ಮೇಲಿಂದ ಮೇಲೆ ವರದಿ ಮಾಡಬೇಕಾಗಿತ್ತು. ಆ ಕೆಲಸದಲ್ಲಿ ನಮಗೆ ಉತ್ಸಾಹವೇನೂ ಇರಲಿಲ್ಲವಾದರೂ ಕರ್ತವ್ಯದೃಷ್ಟಿಯಿಂದ ನಾವು ಅದನ್ನು ನಿರ್ವಹಿಸಲೇಬೇಕಾಗುತ್ತಿತ್ತು.

ತೊಂಡೇಬಾವಿಯ ಸನಿಯದಲ್ಲಿದ್ದ ಎಮ್ಮೇಹಳ್ಳಿಯಲ್ಲಿ ರೈತ ಸಭೆಯೊಂದು ಜರಗುವುದಿತ್ತು. ಹಿಂದೆ ಮಂತ್ರಿಗಳಾಗಿದ್ದ ಕಾಂಗ್ರೆಸ್ಸಿಗರೊಬ್ಬರು ಆ ಸಭೆಯ ಅಧ್ಯಕ್ಷತೆ ವಹಿಸುವವರಿದ್ದರು. ತೊಂಡೇಬಾವಿಯ ನಿವಾಸಿಗಳೇ ಆಗಿದ್ದ ಪ್ರಸಿದ್ಧ ಕಾಂಗ್ರೆಸ್ ನಾಯಕ ರಂಗಪ್ಪನವರೂ ಇನ್ನಿತರ ಮುಂದಾಳುಗಳೂ ಭಾಷಣ ಮಾಡುವರೆಂದು ಪ್ರಕಟವಾಗಿತ್ತು. ಅಂತೆಯೆ, ಸುತ್ತಲಿನ ಹಳ್ಳಿಗರ ರೈತರೆಲ್ಲರೂ ಉತ್ಸಾಹದಿಂದ ಆ ಸಭೆಯ ಸಿದ್ಧತೆ ನಡಸುತ್ತಿದ್ದರು. ಪೋಲೀಸರಾದ ನಾವೂ ನಮ್ಮ ಸಿದ್ಧತೆಗಾರಂಭಿಸಿದ್ದೆವು. ಸಭೆಗೆ ಸೇರಿದ ಜನ, ನಡೆದ ಭಾಷಣ, ಇತರ ಕಾರ್ಯಕ್ರಮ ಎಲ್ಲವುಗಳ ವರದಿಯಾಗಬೇಕಲ್ಲವೆ? ಎರೇಸೀಮೆ ಫೌಜದಾರರಿಗೆ ಸ್ವತಃ ತಾವೇ ಸಭೆಗೆ ಉಪಸ್ಥಿತರಾಗಲು ಬಹಳ ಸಂಕೋಚವೆನ್ನಿಸಿತು. ಸಭೆ ನಡೆಯಬೇಕಾದ ದಿನವೇ ಅವರು ಗೊಬ್ಬೂರಿಗೆ ಹೊರಟುನಿಂತರು. ವರದಿ ಮಾಡುವ ಅಪ್ರಿಯ ಕೆಲಸ ನನ್ನ ಪಾಲಿಗೆ ಬಂದಿತು.

ಶಂಕರರಾಯರೂ ನಾನೂ ಸೈಕಲ್ ಏರಿ ಎಮ್ಮೇಹಳ್ಳಿಗೆ ಬಂದೆವು.

ಸಭಾಸ್ಥಾನ ಜನರಿಂದ ತುಂಬಿಹೋಗಿತ್ತು. ಊರಲ್ಲಿದ್ದ ಕುರ್ಚಿ, ಮೇಜು, ಬೆಂಚುಗಳೆಲ್ಲವೂ ಅಲ್ಲಿಯೆ ಒಟ್ಟುಗೂಡಿದ್ದುವು. ಒಂದು ಕುರ್ಚಿಯೂ ತೆರವಾಗಿರಲಿಲ್ಲ. ಕಾಂಗ್ರೆಸ್ಸಿಗರ ಸಭೆಯಲ್ಲಿ, ಸರಕಾರದ ದಸ್ಯುಗಳಾದ ನಮ್ಮನ್ನು ಮಾತನಾಡಿಸುವವರಾರು? ವೇದಿಕೆಯ ಸಮೀಪಲ್ಲಿದ್ದ ಗಿಡದ ಬುಡವೊಂದರಲ್ಲಿ ನಾವು ಕುಳಿತುಕೊಂಡೆವು.

ವಂದೇ ಮಾತರಂ ಗೀತೆಯೊಡನೆ ಸಭಾಕಾರ್ಯಕ್ಕಾರಂಭವಾಯಿತು. ಮೊದಲನೆಯದಾಗಿ ತೊಂಡೇಬಾವಿ ರಂಗಪ್ಪನವರ ಅಮೋಘ ಭಾಷಣ. ರೈತರ ಒಕ್ಕಟ್ಟು, ಒಕ್ಕಟ್ಟಿನಿಂದ ಶಕ್ತಿ, ಶಕ್ತಿಯಿಂದ ಸುಧಾರಣೆ, ಅದರಿಂದ ದೇಶದ ಉದ್ಧಾರ, ದೇಶದ ಉದ್ಧಾರದಿಂದ ರೈತನ ಉದ್ಧಾರ; ಗಾಂಧೀಜಿ ಹೀಗೆ ಹೇಳಿದ್ದಾರೆ, ನೆಹರೂಜಿ ಹೀಗೆ ಹೇಳಿದ್ದಾರೆ, ನಾವೂ ಹಾಗೇ ಹೇಳುತ್ತೇವೆ ಎಂದು ಮುಂತಾಗಿ ಹೇಳಿ "ಒಕ್ಕಲಿಗರಿಗೆ ಜಯವಾಗಲಿ," ಎಂದು ಮುಗಿಸಿ ಅವರು ಕುಳಿತುಕೊಂಡರು. ಚಪ್ಪಾಳೆಗಳಿಂದ ಹೆಚ್ಚು ಸಪ್ಪುಳವಾಗಲಾರದೆಂದು ಕೆಲವರು ಹುಡುಗರು, ತಾವು ತೆಗೆದುಕೊಂಡು ಬಂದಿದ್ದ ಡಬ್ಬಗಳನ್ನು ಬಾರಿಸಿ ಭಯಂಕರ ಸದ್ದು ಮಾಡಿದರು. ರಂಗಪ್ಪನವರು ಮತ್ತೆ ಮೇಲಕ್ಕೆದ್ದು ಆ ಹುಡುಗರನ್ನು ಬೆದರಿಸಿ, "ಇಂದಿನ ಹುಡುಗರೆಂದರೆ ನಾಳಿನ ನಾಗರಿಕರು. ನೀವು ಇಂದಿನಿಂದಲೂ ಶಾಂತಿಯಿಂದ ಅಹಿಂಸೆಯಿಂದ ಶಿಸ್ತಿನಿಂದ ವ್ಯವಸ್ಥೆಯಿಂದ ತಾಳ್ಮೆಯಿಂದ ಸೌಹಾರ್ದದಿಂದ ವರ್ತಿಸಲು ಕಲಿಯಬೇಕು," ಎಂದು ಬುದ್ಧಿವಾದಮಾಡಿ ಕುಳಿತುಕೊಂಡರು. ಹುಡುಗರು ಮುಸಿಮುಸಿ ನಗುತ್ತ ಸುಮ್ಮನಾದರು.

ಎರಡನೆಯವರಾಗಿ, ತೊಂಡೇಬಾವಿಯ ಇಂಗ್ಲಿಷ್‌ಶಾಲೆಯ ಹೆಡ್ ಮಾಸ್ತರ್ ದೇಸಾಯಿಯವರು ಭಾಷಣಕ್ಕೆದ್ದರು. ಅವರ ಮಾತಿನ ರೀತಿಯೇ ಬೇರೆ. ರಂಗಪ್ಪನವರದು ಗ್ರಾಮಫೋನ್ ರಿಕಾರ್ಡಿನಂಥ ಭಾಷಣವಾದರೆ ದೇಸಾಯಿಯವರದು ಸರಳ, ಸ್ಫೂರ್ತಿದಾಯಕ. ತುಂಬಿ ಹರಿಯುವ ಹೊಳೆಯಂತೆ ಗಂಭೀರ. ರಂಗಪ್ಪನವರು, ಅವರಿವರು ಹೇಳಿದ ಮಾತುಗಳನ್ನು ಗಿಳಿಯಂತೆ ಪಠಿಸಿದ್ದರು. ದೇಸಾಯಿಯವರು ಮಾತ್ರ ಯಾವ ನಾಯಕರ ಹೆಸರನ್ನೂ ಎತ್ತದೆ, ರೈತರ ಮುಂದಿರುವ ಸಮಸ್ಯೆಗಳನ್ನು ವಿವೇಚಿಸಿ ಅವುಗಳನ್ನು ಪರಿಹರಿಸುವ ಮಾರ್ಗಗಳನ್ನು ಸೂಚಿಸಿದರು. ರಂಗಪ್ಪನವರದು

ರಾಜಕೀಯ ದೊಡ್ಡಾಟದ ಮಾತು, ನಾಟಕೀಯತೆಯ ಮಾತು. ಮಾಸ್ತರ ಮಾತಿನಲ್ಲಿ ಕೃತ್ರಿಮತೆಯ ಲವಲೇಶವೂ ಇರಲಿಲ್ಲ.

ಸಭೆಗೆ ಸೇರಿದ ರೈತ ಸ್ತ್ರೀಯರಿಗಾಗಿ ಒಬ್ಬ ಹೆಣ್ಣು ಮಗಳೂ ಭಾಷಣ ಮಾಡಬೇಕಷ್ಟೆ. ಅದಕ್ಕೆಂದೇ ರಂಗಪ್ಪನವರು ತಮ್ಮ ಪ್ರೇಯಸಿಯೂ, ತೊಂಡೇ ಬಾವಿಯ ಹೆಣ್ಣುಮಕ್ಕಳ ಶಾಲೆಯ ಶಿಕ್ಷಿಕೆಯೂ ಆದ ಅಕ್ಕವ್ವನನ್ನು ಹುರಿ ದುಂಬಿಸಿ, ಸಭೆಗೆ ಕರೆದುಕೊಂಡು ಬಂದಿದ್ದರು. ಅವಳೇನು ಬುದ್ಧಿವಂತಳಲ್ಲ, ಮಾತುಗಾರ್ತಿಯೂ ಅಲ್ಲ. ರಂಗಪ್ಪನವರ ಬಲವಂತದಿಂದಾಗಿ ಅಲ್ಲಿಗೆ ಬಂದಿದ್ದಳಷ್ಟೆ.

"ಇನ್ನು ಪ್ರಸಿದ್ಧ ಮಹಿಳಾ ಮುಂದಾಳುಗಳಾದ ಶ್ರೀಮತಿ ಅಕ್ಕವ್ವನವರು ರೈತರ ಹೆಣ್ಣುಮಕ್ಕಳನ್ನು ಕುರಿತು ನಾಲ್ಕು ಉಪದೇಶಪರ ಮಾತು ಹೇಳು ತ್ತಾರೆ," ಎಂದರು ಅಧ್ಯಕ್ಷರು.

ಅಕ್ಕವ್ವ ನಡುಗುತ್ತ ನಡುಗುತ್ತ ಎದ್ದುಬಂದು ಮೇಜಿನ ಬಳಿ ನಿಂತು ಕೊಂಡಳು. ಕೈಯಲ್ಲಿ ಕಾಗದವನ್ನೂ ಲೇಖಣಿಯನ್ನೂ ಹಿಡಿದುಕೊಂಡು ನಾನು ಅವಳನ್ನೇ ದಿಟ್ಟಿಸುತ್ತಾ ಅವಳ ಉಪನ್ಯಾಸದ ಟಿಪ್ಪಣಿ ತೆಗೆದುಕೊಳ್ಳಲು ಸಿದ್ಧನಾಗಿ ಕುಳಿತಿದ್ದೆ. ಮೊದಲೇ ಅಂಜಿಕೊಂಡಿದ್ದ ಅಕ್ಕವ್ವ ನನ್ನನ್ನು ನೋಡುತ್ತಲೂ ಪೂರ್ತಿಯಾಗಿ ಹೆದರಿದಳು. ನಾನು ಪೋಲೀಸನೆಂಬುದು ಅವಳಿಗೂ ಗೊತ್ತಿತ್ತು. ಭಾಷಣದ ಬಗೆಗೆ ಸ್ಕೂಲ್‌ಬೋರ್ಡಿಗೆ ವರದಿ ಹೋಗುವುದು, ಮುಂದೆ ತನ್ನ ನೌಕರಿಗೆ ಕಲ್ಲು ಬೀಳುವುದು ಎಂದು ಅವಳಿಗೆ ಭೀತಿ. ಕನಿಕರವನ್ನು ಯಾಚಿಸುವಂತೆ ಅವಳು ಒಂದು ನಿಮಿಷ ನನ್ನನ್ನೇ ದಿಟ್ಟಿಸುತ್ತಿದ್ದಳು. "ನನಗೆ ಮಾತಾಡಲು ಇಚ್ಛೆಯಿಲ್ಲ. ಅಷ್ಟೇಕೆ, ನನಗೆ ಮಾತಾಡುವುದಕ್ಕೆ ತಿಳಿಯುವುದೂ ಇಲ್ಲ. ನನ್ನ ಪ್ರಿಯಕರರಾದ ರಂಗಪ್ಪನವರ ಬಲವಂತಕ್ಕೆ ಒಪ್ಪಿಬಂದಿದ್ದೇನೆ. ದಯಮಾಡಿ ನನ್ನ ಭಾಷಣದ ರಿಪೋರ್ಟು ಮಾಡಬೇಡಿರಿ. ನನ್ನ ಹೊಟ್ಟೆಯ ಮೇಲೆ ಕಲ್ಲು ಹಾಕಬೇಡಿರಿ," ಎಂದೆಲ್ಲ ಬೇಡಿಕೊಳ್ಳುವ ಹಾಗಿತ್ತು ಅವಳ ದೃಷ್ಟಿ.

ಅವಳು ನನ್ನನ್ನೇ ದಿಟ್ಟಿಸುತ್ತಿದ್ದುದನ್ನು ಗಮನಿಸಿದ ರಂಗಪ್ಪನವರ ದೃಷ್ಟಿಯೂ ನನ್ನ ಮೇಲೆ ಬಿತ್ತು. ನನ್ನನ್ನು ಕಂಡೇ ಅವಳು ನಡುಗು ತ್ತಿದ್ದುದನ್ನು ಗುರುತಿಸಿದ ರಂಗಪ್ಪನವರು ಅವಳಿಗೆ ಧೈರ್ಯ ತಂದುಕೊಡಲು

ಒಂದು ಉಪಾಯ ಹುಡುಕಿದರು. ಅವರದು ಬಹಳ ಚುರುಕು ಬುದ್ಧಿ. ಅದರಿಂದಾಗಿಯೆ ಅವರು ಅಖಿಲ ಕರ್ನಾಟಕ ಖ್ಯಾತಿಯ ನಾಯಕರಾಗಿದ್ದುದು!

ರಂಗಪ್ಪನವರು ಒಬ್ಬ ರೈತನನ್ನು ಕರೆದು, ಪೋಲೀಸರಾದ ನಾವು ಸ್ವಲ್ಪ ದೂರ ಕುಳಿತುಕೊಂಡಿರಬೇಕೆಂದು ಹೇಳಿಕಳಿಸಿದರು.

ನಮಗೆ ಹಾಗೆ ಅಪ್ಪಣೆ ಮಾಡಲು ರಂಗಪ್ಪನವರಿಗೇನೂ ಅಧಿಕಾರವಿರಲಿಲ್ಲ. ನಾವು ಅಲ್ಲಿಂದ ಕದಲುವುದಿಲ್ಲವೆಂದು ಹೇಳಿದ್ದರೂ ಅವರೇನನ್ನೂ ಮಾಡುವಂತಿರಲಿಲ್ಲ. ಏನೋ ಸ್ವಲ್ಪ ವಾದವಿವಾದ ನಡೆಯಬಹುದಾಗಿದ್ದಿತಷ್ಟೆ. ಆ ಸಮಯದಲ್ಲಿ ವಿನಾಕಾರಣವಾಗಿ ಗದ್ದಲವುಂಟುಮಾಡುವ ಇಚ್ಛೆ ನನಗಿರಲಿಲ್ಲ. ನಾನೂ ಶಂಕರರಾಯರೂ ಅಲ್ಲಿಂದೆದ್ದು ಅಕ್ಕವ್ವನ ದೃಷ್ಟಿಯಿಂದ ಮರೆಯಾಗಿ ತುಸುದೂರದಲ್ಲಿ ಕುಳಿತುಕೊಂಡೆವು.

ರಂಗಪ್ಪನವರೂ ಅಧ್ಯಕ್ಷರ ಪಕ್ಕದಲ್ಲಿಯೇ ವಿರಾಜಮಾನರಾಗಿದ್ದರು. ಅಲ್ಲಿ ಕೂತುಕೊಳ್ಳಬೇಕೆಂದು ಯಾರೂ ಅವರಿಗೆ ಹೇಳಿರಲಿಲ್ಲ. ಹೇಳಬೇಕಾದ ಸಂದರ್ಭವನ್ನೇ ಬರಗೊಡುತ್ತಿರಲಿಲ್ಲ ರಂಗಪ್ಪನವರು. ಸಭಿಕರಿಗೆಲ್ಲ ಎದ್ದು ಕಾಣುವ ಸ್ಥಳ ಹಿಡಿದುಕೊಂಡು ಅವರೇ ಕುಳಿತುಬಿಡುತ್ತಿದ್ದರು. ಅವರನ್ನು ಅಲ್ಲಿಂದ ಎಬ್ಬಿಸುವ ಧೈರ್ಯವಾದರೂ ಯಾರದು? ರಂಗಪ್ಪನವರ ಪದ್ಧತಿಯೇ ಹಾಗಿತ್ತು. ಸೌಜನ್ಯಕ್ಕಾಗಿ ಜನರೂ ಸುಮ್ಮನಿದ್ದು ಬಿಡುತ್ತಿದ್ದರು.

ಅಕ್ಕವ್ವನಿಗೆ ಸ್ಫೂರ್ತಿಯೊದಗಿಸಲು ರಂಗಪ್ಪನವರು ಬಗೆಬಗೆಯಾಗಿ ಯತ್ನಿಸಿದರು. ಅವಳಲ್ಲಿ ಆತ್ಮವಿಶ್ವಾಸ ಮೂಡಲೆಂದು, "ಬಂಧುಭಗಿನಿಯರೇ," ಎಂದು ಎರಡು ಮೂರು ಸಲ ತಾವೇ ಹೇಳಿದರು. ಆದರೇನು, ಅಕ್ಕವ್ವನ ಬಾಯಿಯೇ ತೆರೆಯಲೊಲ್ಲದು. ಅವಳ ನಿಜಸ್ಥಿತಿಯನ್ನು ಗಮನಿಸಿದ ತುಂಟ ಹುಡುಗರು ಮತ್ತೆ ಡಬ್ಬಾವಾದನಕ್ಕಾರಂಭಿಸಿದರು. ಅಕ್ಕವ್ವನಿಗೆ ಮೂರ್ಛೆ ಬರುವಂತಾಯಿತು. ಮತ್ತೆ ರಂಗಪ್ಪನವರಿಗೆ ಮೇಲಕ್ಕೆದ್ದು ಮಾತನಾಡುವ ಸಂಧಿ ಲಭಿಸಿತು.

"ಅಕ್ಕವ್ವನವರಿಗೆ ಮಾತಾಡಿ ರೂಢಿಯಿಲ್ಲ. ನೀವು ಗಲಾಟೆ ಮಾಡಬೇಡಿರಿ. ಹೆಂಗಸರಿಗಾಗಿ ನಾಲ್ಕು ಮಾತು ಹೇಳುವರು. ಶಾಂತರಾಗಿ ಕೇಳಿರಿ."

ಹೆಂಗಸರಿಗಾಗಿ ಮಾತು ಆರಂಭವಾಗುವುದೆಂದು ಕೆಲವರು ಗಂಡಸರು ಎದ್ದು ಹೊರಡುವುದರಲ್ಲಿದ್ದರು. ರಂಗಪ್ಪನವರು ಮತ್ತೆ ಎದ್ದು,

" ಗಂಡಸರು ಯಾರೂ ಹೋಗಬಾರದು. ಇನ್ನೂ ನಿಮಗಾಗಿ ಅಧ್ಯಕ್ಷರ ಭಾಷಣವಾಗಬೇಕಾಗಿದೆಯಲ್ಲ!" ಎಂದರು.

ಹೊರಟಿದ್ದವರೆಲ್ಲರೂ ಗೊಣಗಿಕೊಳ್ಳುತ್ತಾ ಕುಳಿತುಕೊಂಡರು.

ಅಕ್ಕವ್ವ ಒಂದುಬಾರಿ ಕೆಮ್ಮಿದಳು, ಅಲ್ಲಿಯೇ ಉಗುಳಿದಳು, ಗಂಟಲು ಸರಿಪಡಿಸಿಕೊಂಡಳು.

" ನ....ನ....ನ್ನ....ಬ....ಬ....ಬಂಗಿನಿಯರೇ ....ಅ ಲ್ಲ ಲ್ಲ....ನ....ನ.... ನನ್ನ ಬಂಧುಗಳೇ....ಅಲ್ಲಲ್ಲ....ಭಾಗಿನಿಯರೇ....ಅ ಲ್ಲ ಲ್ಲ.... ಭಗಿನಿಯರೇ...." ಎಂದು ಆರಂಭಿಸಿದಳು ಅಕ್ಕವ್ವ.

" ಶಹಬ್ಬಾಸ್ !" ಎಂದರು ರಂಗಪ್ಪನವರು.

ಆ ಪೋಲಿ ಹುಡುಗರು ಮತ್ತೆ ಡಬ್ಬ ಬಾರಿಸಿದರು.

" ಕೋಣದ ಮರಿ ಆಗಿದ್ದಾಳ. ಮಾತಾಡುವದಕ್ಕೆ ಬರುವದಿಲ್ಲ," ಎಂದು ಒಬ್ಬ ಹುಡುಗ ಕೂಗಿಕೊಂಡ. ರಂಗಪ್ಪನವರ ಸೂಚನೆಯ ಮೇರೆಗೆ ರೈತ ನೊಬ್ಬ ಎದ್ದುಹೋಗಿ ಆ ಹುಡುಗನನ್ನು ಹಿಡಿದು ನಾಲ್ಕು ಏಟು ಹಾಕಿದ.

" ಪೋಲೀಸ್, ಪೋಲೀಸ್," ಎಂದರು ರಂಗಪ್ಪನವರು.

ನಾನೇನು ಎದ್ದು ಹೋಗಲಿಲ್ಲ –

" ನೀವೇ ನಮ್ಮನ್ನು ದೂರ ಕಳಿಸಿದಿರಿ. ಈಗ ನಾವೇನು ಮಾಡೋಣ ?" ಎಂದು ಹೇಳಿ ಅಲ್ಲಿಯೇ ಕುಳಿತುಕೊಂಡಿದ್ದೆ.

ಅಧ್ಯಕ್ಷರು ಮುಖ ಕಿವುಚಿದರು. ರಂಗಪ್ಪನವರು ಮತ್ತೆ ಎದ್ದು ಬಿಟ್ಟರು. ಮತ್ತೊಮ್ಮೆ ಭಾಷಣ ಹೊಡೆಯುವ ಸುಸಂದರ್ಭ ಅಲ್ಲವೇ ಅದು !

" ನೀವು ರೈತರೆಂದರೆ ಶುದ್ಧ ಹುಂಬರು. ಅದಕ್ಕಾಗಿಯೇ ನೀವು ಹಿಂದೆ ಬಿದ್ದಿರುವದು. ನಿಮ್ಮ ಸಹೋದರಿಯೊಬ್ಬಳು ಬೇರೆ ಅಕ್ಕತಂಗಿಯರಿಗೆ ನಾಲ್ಕು ಬುದ್ಧಿಯ ಮಾತು ಹೇಳಲು ಎದ್ದರೆ ಅವರಿಗೆ ಅಸಹ್ಯವಾಗುವಂತೆ ನಡೆದು ಕೊಂಡು, ನಿಮಗೆ, ನಮಗೆ, ಅಧ್ಯಕ್ಷರಿಗೆ, ನಿಮ್ಮ ಊರಿಗೆ, ಪ್ರಾಂತಕ್ಕೆ, ರಾಷ್ಟ್ರಕ್ಕೆ, ಕಲಂಕ ಹಚ್ಚುತ್ತೀರಿ. ರಾಷ್ಟ್ರಕ್ಕೆ ಅಂದರೇನು, ಆ ಪೂಜ್ಯ ಗಾಂಧೀಜಿ, ನೆಹರೂ ಜಿಯವರ ಮುಖಕ್ಕೇ ಕಪ್ಪುಮಸಿ ಸವರುತ್ತೀರಿ. ಇಂಥ ನಿಮ್ಮ ಹೊಲಸುತನ ಕ್ಕಾಗೇ ನೀವು ಹಿಂದೆ ಬಿದ್ದದ್ದು. ಅದಕ್ಕೇ ನೀವು ಬಡವರಾಗಿ ಉಳಿದದ್ದು.

ನಿಮ್ಮ ಕಲ್ಯಾಣಕ್ಕಾಗಿ ನಾವು, ಹಿಂದೆ ಮಂತ್ರಿಗಳಾಗಿದ್ದ ಈ ದೊಡ್ಡ ಮುಖಂಡ ರನ್ನು ಕರೆಸಿದ್ದೇವೆ. ಅವರ ಉಪದೇಶ ಕೇಳಿರಿ. ನಿಮಗೆ ಬುದಿ ಬಂದೀತು."

ಹಿರಿಯ ರೈತನೊಬ್ಬ ಎದ್ದು,

"ಈ ಹಿಂದಿನ ಮಂತ್ರಿಗಳೂ ಹೊಲದಾಗ ದುಡೀತಾರೆ. ಎತ್ತು ಹೂಡಿ ನೇಗಿಲು ಹೊಡೀತಾರೆ. ಮುಂಜಾನೆ ನಮ್ಮ ನಿಮ್ಮ ಹಾಗೇ ದನಕರುಗಳ ಸಗಣೀ ಬಳೀತಾರಂತೆ. ಅವರ ಮಾತು ಕೇಳಬೇಕು. ಸುಮ್ಮನಿರಿ," ಎಂದು ಕೂಗಿ ಹೇಳಿದ. ಇಂಥ ಮಾತುಗಳನ್ನೆಲ್ಲ ಇವನೇಕೆ ಹೇಳಿದನೋ ಎಂದು ಅಧ್ಯಕ್ಷರು ಪರಿತಪಿಸಿದರು. ಅಕ್ಕವ್ವ ಯಾವಾಗಲೋ ಕುಳಿತುಕೊಂಡಿದ್ದಳು.

ಅಧ್ಯಕ್ಷರು ಆರಂಭಿಸಿದರು :

"ಗೆಳೆಯ ರಂಗಪ್ಪನವರೆ, ಬಂಧುಭಗಿನಿಯರೇ, ನಿಮ್ಮೆಲ್ಲರ ನಡುವೆ ನಿಂತು ನಾಲ್ಕು ಮಾತು ಹೇಳುವ ಸಂಧಿಯನ್ನೊದಗಿಸಿಕೊಟ್ಟದ್ದಕ್ಕಾಗಿ ರಂಗಪ್ಪ ನವರನ್ನು ಅಭಿನಂದಿಸುತ್ತೇನೆ. ನಾನೂ ರೈತ. ರೈತರ ಕಷ್ಟನಷ್ಟಗಳೇನೆಂಬುದು ಹಿರಿಯರಿಂದಲೂ ನಮಗೂ ಗೊತ್ತಿದೆ. ರೈತರು ಒಕ್ಕಟ್ಟನ್ನು ಕಳೆದುಕೊಂಡಿ ದ್ದಾರೆ. ಅದಕ್ಕೇ ಹಿಂದೆ ಬಿದ್ದಿದ್ದಾರೆ. ನೀವು ಒಂದಾದಾಗ ನಿಮ್ಮ ಉದ್ಧಾರ. ಗಾಂಧಿಯವರೂ ಹಾಗೆ ಹೇಳಿದ್ದಾರೆ....ನೆಹರೂ ಹಾಗೆ ಹೇಳಿದ್ದಾರೆ. ಪಟೇಲರೂ ಹಾಗೆ ಹೇಳಿದ್ದಾರೆ...." ಇತ್ಯಾದಿಯಾಗಿ ಒಂದು ಗಂಟೆಯವರೆಗೆ ಭಾಷಣ ಮಾಡಿದರು. ವರದಿಯೊಪ್ಪಿಸುವಂಥ ಅಂಶಗಳೇನೂ ಇರಲಿಲ್ಲ ಅವರ ಮಾತಿನಲ್ಲಿ. ಸಭೆ ಮುಕ್ತಾಯವಾಯಿತು.

ರೈತರು ತಮ್ಮ ತಮ್ಮಲ್ಲಿಯೇ ಮಾತನಾಡಿಕೊಳ್ಳುತ್ತಿದ್ದರು :

"ಬಿಡೋ ನಿನ! ನಮಗೆ ಗೊತ್ತಿಲ್ಲದ್ದು ಏನು ಹೇಳಿದರು ಇವರು! ನಮ್ಮ ಪಾಳೆ ಸೂಟು ಆಗುತ್ತೈತಿ, ಹೊಲದಾಗ ದುಡೀದಿದ್ದರೂ ಬೆಳೀ ಬರುತ್ತೈತಿ, ತಿನ್ನದಿದ್ದರೂ ಹೊಟ್ಟೆ ತುಂಬುತ್ತೈತಿ, ಅಂಥಾ ಉಪಾಯ ಇವರು ಹೇಳಿಯಾರು ಅಂತ ನಾವು ತಿಳಿದಿದ್ದೆವು. ಇವರು ಬರೀ ಒಕ್ಕಟ್ಟು ಒಕ್ಕಟ್ಟು ಅಂತಾರ. ಸುಳ್ಳೇ ಮನಿಮನಿಗೆ ೫ ರೂಪಾಯಿ ಪಟ್ಟೀಹಾಕಿ ಒಂದು ದಿವಸದ ಕೆಲಸಾನೂ ಕೆಡಿಸಿದ ಗೌಡ. ಕೂಡಿಸಿದ ದುಡ್ಡಿನಾಗ ಎಷ್ಟು ತಿಂದೋ ದೇವರಿಗೇ ಗೊತ್ತು. ನಾವು ರಟ್ಟೀ ಮುರಿದು ದುಡಿದರೆ ಅನ್ನ. ಇಲ್ಲದಿದ್ದರೆ ಎಲ್ಲೀದು ನಡೀರಿ."

ಆ ಮಾತುಗಳನ್ನಾಲಿಸಿದ ಕಾಂಗ್ರೆಸ್ ಸ್ವಯಂಸೇವಕನೊಬ್ಬ ಸಿಟ್ಟಿನಿಂದ ಅವರ ಕಡೆ ತಿರುಗಿ ಹೇಳಿದ:

"ಕಮ್ಯೂನಿಸ್ಟರ ಹಾಗೆ ಮಾತಾಡುತೀರಲ್ಲ. ಬಾಯಿ ಬಂದು ಮಾಡಿರಿ."

ಸೈಕಲುಗಳನ್ನು ಕೈಯಲ್ಲಿ ಹಿಡಿದುಕೊಂಡು ನಾವು ತೊಂಡೇಬಾವಿಯ ಹಾದಿ ಹಿಡಿದು ಹೊರಟೆವು. ಸಭೆಗೆ ಬಂದಿದ್ದವರಲ್ಲಿ ಅನೇಕರು ನಮ್ಮ ಪರಿಚಿತರು. ಆದರೆ ಆ ದಿನ ಮಾತ್ರ ನಮ್ಮನ್ನು ಯಾರೂ ಮಾತನಾಡಿಸುವಂತಿರಲಿಲ್ಲ. ನಾವೂ ಯಾರನ್ನೂ ಮಾತನಾಡಿಸಲಿಲ್ಲ. ಊರು ದಾಟಿದ ಬಳಿಕ ಒಂದು ಫರ್ಲಾಂಗಿನಷ್ಟು ಅಂತರದಲ್ಲಿ ಒಂದು ತೊರೆಯಿತ್ತು. ಸೈಕಲುಗಳನ್ನೆತ್ತಿ ಹಿಡಿದುಕೊಂಡು ನಾವು ತೊರೆಯನ್ನು ದಾಟುತ್ತಿದ್ದ ಹಾಗೆ ಅಕ್ಕವ್ವ ಎದುರಾದಳು.

"ಸರದಾರರೇ...."

ತೊರೆಯನ್ನು ದಾಟಿ, ಸೈಕಲು ನೆಲಕ್ಕಿಳಿಸಿ ನಾನು ಅವಳತ್ತ ಹೊರಳಿಡೆ.

"ನನ್ನ ಹೆಸರು ರಿಪೋರ್ಟು ಮಾಡಬೇಡಿರಿ ಸರದಾರರೆ. ನಾನು ಮಾತೇ ಆಡಲಿಲ್ಲ. ಸ್ಕೂಲ್‌ಬೋರ್ಡಿಗೆ ರಿಪೋರ್ಟ್ ಹೋದರೆ ನನ್ನ ನೌಕರಿ ಹೋಗುವದು."

"ಏನು ಅಕ್ಕವ್ವನವರೆ, ನೀವು ಹೀಗೆ ಮಾತಾಡುವಿರಲ್ಲ! ನಾಳೆ ಸ್ವಾತಂತ್ರ್ಯ ಬಂದ ಮೇಲೆ ನೀವೂ ಮಂತ್ರಿಯಾಗಬಹುದು, ಇಂದು ನೌಕರಿ ಕಳಕೊಂಡರೆ. ಇವತ್ತು ರಾಜದ್ರೋಹಿಯಾಗಿರುವವರೇ ನಾಳೆ ದೇಶಪ್ರೇಮಿಗಳು. ನಿಮ್ಮ ಹೆಸರು ಸರಕಾರದ ದಾಖಲೆಯಲ್ಲಿದ್ದರೆ ನಿಮಗೇ ಲಾಭ."

"ಅದೆಲ್ಲಾ ನನಗ್ಯಾತಕ್ಕೆ ಸರದಾರರೆ! ಈಗ ನೌಕರಿ ಹೋದರೆ ನನ್ನದು ಹ್ಯಾಗೆ ನಡೆಯಬೇಕು! ನಾನು ಗಂಡನ ಮನೆಗಂತೂ ಹೋಗುವಂತಿಲ್ಲ. ಆಮೇಲೆ ಭಿಕ್ಷೆ ಬೇಡಬೇಕಾದೀತು."

"ನಿಮಗೇನ್ರೀ ಅಂಥಾದ್ದು ಬರಲಿಕ್ಕೆ! ರಂಗಪ್ಪನವರಿದ್ದಾರಲ್ಲ – ನೋಡಿಕೊಳ್ಳಲಿಕ್ಕೆ!"

"ಹೂಂ. ಇದ್ದಾರೆ! ಅವರಿಂದಾಗಿಯೇ ಗಂಡನನ್ನೂ ಕಳಕೊಂಡು ಕೂತಿದ್ದೀನಿ. ಇನ್ನು ನೌಕರಿಯೊಂದು ಹೋದರೆ ಇವರಲ್ಲೇ ಇರಬೇಕಾದೀತು.

ನಿಮಗೆಲ್ಲಾ ಗೊತ್ತಿದ್ದರೂ ಹುಡುಗಾಟ ಮಾಡುತ್ತಿದ್ದೀರಿ. ದಯಮಾಡಿ ಬಿಟ್ಟು ಬಿಡಿರಿ. ನಿಮ್ಮ ಕಾಲು ಹಿಡಿದು ಬೇಡಿಕೊಳ್ಳುತ್ತೀನಿ."

"ನೋಡೋಣ. ನಮ್ಮ ಫೌಜದಾರರಿಗೆ ಹೇಳಿ ನಿಮ್ಮ ಹೆಸರು ತೆಗೆದು ಬಿಡಲು ಯತ್ನಿಸುತ್ತೀನಿ. ನಿಮ್ಮಂತೆ ನಾವೂ ನೌಕರರು. ನಾವಾಗೇ ನಿಮ್ಮ ಹೆಸರು ಬಿಟ್ಟುಬಿಟ್ಟರೆ, ಅದು ಫೌಜದಾರರಿಗೆ, ಅವರಿಂದ ಸಾಹೇಬರಿಗೆ ಗೊತ್ತಾಗದಿರದು. ಸಾಹೇಬರು ಯೂರೋಪಿಯನ್ನರು. ನಾವೂ ರಾಜದ್ರೋಹಿ ಗಳೇ ಅಂತ ಅವರು ಭಾವಿಸಿದರೆ ನಮ್ಮ ನೌಕರಿಯೂ ಉಳಿಯಲಾರದು. ಆದರೂ ಚಿಂತೆ ಮಾಡಬೇಡಿರಿ. ನಾನು ಪ್ರಯತ್ನಿಸುತ್ತೀನಿ."

ಕೃತಜ್ಞತೆ ತುಂಬಿದ ದೃಷ್ಟಿಯಿಂದ ನನ್ನನ್ನು ನೋಡುತ್ತಾ ಅವಳು ಹೊರಟುಹೋದಳು. ಅಕ್ಕವ್ವನ ಚೆಲುವಿಕೆ ನನ್ನನ್ನು ಆಕರ್ಷಿಸಿಕೊಂಡಿತ್ತು. ನಾನು ಒಂದು ಮಾತು ಕೇಳಿದ್ದರೆ ಅವಳೂ ಒಪ್ಪಿಕೊಳ್ಳಬಹುದಾಗಿತ್ತು. ಆದರೆ ರಂಗಪ್ಪನವರ ಹಕ್ಕಿ ಅದು. ಅದನ್ನು ನಾನು ಹಾರಿಸಿದ ಸಂಗತಿ ಗೊತ್ತಾದರೆ ಅವರು ನನ್ನ ವಿರುದ್ಧ ಯಾವುದಾದರೊಂದು ಪ್ರಕರಣ ಎಬ್ಬಿಸಿ, ನಾಲ್ಕು ಸುಳ್ಳು ಸಾಕ್ಷಿ ಸಿದ್ಧಗೊಳಿಸಿ ನನ್ನನ್ನು ಮನೆಗೆ ಕಳಿಸುವ ಆಸಾಮಿ. ಸತ್ಯ – ಅಹಿಂಸೆಗಳ ಮಹಾ ಪೂಜಾರಿಗಳಲ್ಲವೇ ಅವರು!

ಸರಿ. ಕಛೇರಿಗೆ ಬಂದು ಎಲ್ಲರ ಭಾಷಣಗಳನ್ನೂ ಇಂಗ್ಲಿಷಿನಲ್ಲಿ ಬರೆದು ಸಿದ್ಧಗೊಳಿಸಿದೆ. ಅಕ್ಕವ್ವನ ಹೆಸರನ್ನು ಮಾತ್ರ ಉಲ್ಲೇಖಿಸಿರಲಿಲ್ಲ.

ಮರುದಿನ ಫೌಜದಾರರು ಬರುತ್ತಲೂ ನನ್ನ ವರದಿಯನ್ನೋದಿ ನೋಡಿ,

"ಅಕ್ಕವ್ವನ ಹೆಸರು ಯಾಕೆ ಬಿಟ್ಟದೀರಿ?" ಎಂದರು.

ಸಭೆಯಲ್ಲಿ ಅವಳು ಎದ್ದು ನಿಂತ ಸಂಗತಿ ಅವರಿಗೆ ಹೇಗೆ ಗೊತ್ತಾಯಿತೋ ಎಂದು ಅಚ್ಚರಿಪಟ್ಟುಕೊಳ್ಳುತ್ತಾ ನಾನು ಅವಳ ಭಾಷಣದ ವೈಖರಿಯನ್ನು ಬಣ್ಣಿಸಿದೆ. ಫೌಜದಾರರು ನಕ್ಕರು.

"ದೇಸಾಯಿ ಮಾಸ್ತರರಿಂದ ಚೀಟಿ ಬರೆಯಿಸಿ ಕಳಿಸಿದ್ದಾಳೆ – ತನ್ನ ಹೆಸರು ರಿಪೋರ್ಟ್ ಮಾಡಬಾರದೆಂದು," ಎಂದು ವಿವರಿಸಿದರು ಫೌಜದಾರರು.

ರಸಿಕತನದಲ್ಲಿ ಅವರೂ ಯಾರಿಗೂ ಹಿಂದುಳಿದವರಲ್ಲ. ಪಿ. ಡಬ್ಲ್ಯೂ. ಡಿ. ಯ ಮೇಸ್ತ್ರಿಯೊಬ್ಬನ ಹೆಂಡತಿಯನ್ನು ಅವರು ಮಡಗಿಕೊಂಡಿದ್ದರು. ಮೇಸ್ತ್ರಿಯ ಮನೆಯೂ ಸಮೀಪದಲ್ಲಿಯೇ ಇದ್ದುದರಿಂದ ಫೌಜದಾರರು ಅಲ್ಲಿಗೆ

ಹೋಗಿಬರಲು ಅನುಕೂಲವಾಗಿತ್ತು. ಫೌಜದಾರರ ಹೆಂಡತಿಗೆ ಆ ವಿಷಯ ಗೊತ್ತಾಗುತ್ತಲೂ ಒಂದುಸಲ ದೊಡ್ಡ ಜಗಳವಾಗಿತ್ತು. ಮೇಸ್ತ್ರಿಯ ಹೆಂಡತಿ, ಫೌಜದಾರರ ಹೆಂಡತಿ ಇಬ್ಬರೂ ಅವಾಚ್ಯ ಶಬ್ದಗಳನ್ನು ಕೂಗುತ್ತಾ ಪೋಲೀಸ್ ವಠಾರವನ್ನೆಲ್ಲ ನಡುಗಿಸಿದ್ದರು. ಎರೇಸೀಮೆ ಫೌಜದಾರರು ಮಾತ್ರ ಅವರಿಬ್ಬರಲ್ಲಿ ಯಾರಿಗೂ ಏನನ್ನೂ ಹೇಳದೆ ಮನೆಯಲ್ಲಿ ಸುಮ್ಮನೆ ಕುಳಿತುಕೊಂಡಿದ್ದರು. ನಮ್ಮ ಪೋಲೀಸರಲ್ಲೆಲ್ಲಾ ಹಾಸ್ಯಗಾರನೆಂದು ಹೆಸರು ಪಡೆದವನು ಸೋಮಪ್ಪ. ಆ ಜಗಳವನ್ನು ಕಂಡು ಆತ, "ಅತ್ತ ಕೈಕೇಯಿಗೂ ಹೇಳುವದು ಕಷ್ಟ, ಇತ್ತ ಕೌಸಲ್ಯೆಗೂ ಹೇಳುವದು ಕಷ್ಟ. ಅದಕ್ಕೇ ನಮ್ಮ ದಶರಥರಾಜರು ಅಡಿಗೇ ಮನೆಯಲ್ಲಿ ಅಡಗಿಕೊಂಡಿದ್ದಾರೆ," ಎಂದು ಟೀಕಿಸಿ ಎಲ್ಲರನ್ನೂ ನಗೆಗಡಲಲ್ಲಿ ಮುಳುಗಿಸಿದ್ದ. ಅಂಥ ರಾದ್ಧಾಂತವಾಗಿದ್ದರೂ ಮೇಸ್ತ್ರಿಯ ಹೆಂಡತಿಯ ಹತ್ತಿರ ಹೋಗುವುದನ್ನು ಬಿಟ್ಟಿರಲಿಲ್ಲ ಫೌಜದಾರರು. ಪಾಪ, ಆ ಮೇಸ್ತ್ರಿ ತಿಂಗಳಿನಲ್ಲಿ ಇಪ್ಪತ್ತಾರು ದಿನ ಹಳ್ಳಿ ಪಳ್ಳಿ ಸುತ್ತುವವನು. ಅವನಿಗೆ ಇದೊಂದೂ ಗೊತ್ತಿರಲಿಲ್ಲ. ಒಂದು ಸಮಯ ಗೊತ್ತಾದರೂ ಅವನು ಏನನ್ನೂ ಮಾಡುವಹಾಗಿರಲಿಲ್ಲ. ಫೌಜದಾರರ ವಿರುದ್ಧ ಹೊಡೆದಾಡುವುದಕ್ಕೂ ಬಹಳ ಶಕ್ತಿ ಬೇಕು. ಮೂವತ್ತು ರೂಪಾಯಿ ಸಂಬಳದ ಆ ಬಡಮೇಸ್ತ್ರಿಗೆ ಎಲ್ಲಿಂದ ಬಂದೀತು ಅಂಥ ಶಕ್ತಿ?

ಫೌಜದಾರರಂಥ ರಸಿಕಶಿಖಾಮಣಿಗಳಿಗೆ ಒಬ್ಬಿಬ್ಬರು ಹೆಂಗಸರಿಂದ ತೃಪ್ತಿಯಾಗದು. ಹೊಸಹೊಸ ಹೆಣ್ಣುಗಳು ಸಿಕ್ಕಿದರೆ ಮಾತ್ರ ಅವರಿಗೆ ಸಮಾಧಾನ. ಅಕ್ಕವ್ವನಂಥ ಹೆಂಗಸರ ಮಾತೂ ಹಾಗೇಯೇ. ಪಾತರಗಿತ್ತಿಗಳಂಥ ಸ್ವಭಾವ ಅವರದು.

ಅಕ್ಕವ್ವನಂಥ ಬೆಡಗುಗಾರ್ತಿ ಸುಲಭವಾಗಿ ತಮ್ಮ ಬಲೆಗೆ ಬೀಳುವ ಸಂದರ್ಭ ಬಂದಿರುವಾಗ ಅದನ್ನು ಹಾಗೇ ಬಿಟ್ಟುಕೊಡುವರೇ ಫೌಜದಾರರು! ಅವರು ಬಲೆ ಬೀಸಿದರು: ಉಪಾಯವಾಗಿ.

ರಂಗಪ್ಪನವರು ರಾಷ್ಟ್ರಕಾರ್ಯದ ನಿಮಿತ್ತ ಪ್ರವಾಸ ಹೋಗಿದ್ದ ಸಂಧಿ ಸಾಧಿಸಿ ಫೌಜದಾರರು ಸೋಮಪ್ಪನಿಗೆ ಹೇಳಿ ಮೂಕೀ ಅರ್ಜಿಯೊಂದನ್ನು ಬರೆಯಿಸಿದರು. "ಎಮ್ಮೆಹಳ್ಳಿಯಲ್ಲಿ ಅಕ್ಕವ್ವ ಭಾಷಣ ಮಾಡಿದ್ದಾಳೆ. ಅವಳು ಸ್ಕೂಲ್‌ಬೋರ್ಡಿನ ನೌಕರಳಿದ್ದು ಹೀಗೆ ಭಾಷಣ ಮಾಡುವದು ರಾಜದ್ರೋಹ

ವಾಗುವದು. ಅವಳನ್ನು ನೌಕರಿಯಿಂದ ತೆಗೆಯಿಸುವ ವ್ಯವಸ್ಥೆ ಮಾಡಬೇಕು," ಎಂದು ಮೊದಲಾಗಿ ಅದರಲ್ಲಿ ಬರೆಯಲಾಗಿತ್ತು.

ಫೌಜದಾರರ ಹೇಳಿಕೆಯ ಮೇರೆಗೆ ಸೋಮಪ್ಪನೇ ಆ ಅರ್ಜಿಯನ್ನು ತೆಗೆದುಕೊಂಡು ಅಕ್ಕವ್ವನ ಹತ್ತಿರ ಹೋಗಿ ಅದನ್ನು ತೋರಿಸಿ, ಒಂದು ರಾತ್ರಿ ಎಂಟುಗಂಟೆಯ ಸಮಯಕ್ಕೆ ಅವಳನ್ನು ಕಚೇರಿಗೆ ಕರೆದುಕೊಂಡು ಬಂದ.

" ನೀವೆಲ್ಲ ಹೋಗಬಹುದು. ನಾನು ಇವರ ಸ್ಟೇಟ್‌ಮೆಂಟ್ ತೆಗೆದು ಕೊಳ್ಳುತ್ತೀನಿ," ಎಂದರು ಫೌಜದಾರರು.

ಅವರು ತೆಗೆದುಕೊಳ್ಳುವ ' ಸ್ಟೇಟ್‌ಮೆಂಟ್ ' ಎಂಥದೆಂಬುದನ್ನು ಚೆನ್ನಾಗಿ ಅರಿತಿದ್ದ ನಾವು ಒಳಗೊಳಗೇ ನಗುತ್ತಾ ಹೊರಟುಬಂದೆವು. ಕಚೇರಿಯ ಹೊರಗಡೆ ಸೋಮಪ್ಪ ಕಾವಲು ನಿಂತ. ಫೌಜದಾರರ ಬಯಕೆ ಪೂರೈಸಲು ವಿಲಂಬವಾಗಲಿಲ್ಲ.

ಅಕ್ಕವ್ವ ಕಚೇರಿಯಿಂದ ಹೊರಬಂದಾಗ ಹತ್ತು ಗಂಟೆಯಾಗಿತ್ತು. ಊಟ ತೀರಿಸಿಕೊಂಡು ಮನೆಗೆ ಬರುತ್ತಿದ್ದ ನನಗೆ ಅವಳು ಹಾದಿಯಲ್ಲಿ ಭೆಟ್ಟಿಯಾದಳು.

" ಏನು ಅಕ್ಕವ್ವಾ, ಸ್ಟೇಟ್‌ಮೆಂಟ್ ಕೊಟ್ಟು ಬಂದಿರಾ ?"

" ಅಯ್ಯೋ ಬಿಡಿರಿ. ನನ್ನನ್ನು ನೀವೂ ಕಾಡಿಸಬೇಡಿರಿ."

" ನೀವು ನನ್ನನ್ನು ನಂಬಿ ಸುಮ್ಮನಿದ್ದರೆ ಇಂಥಾ ಪ್ರಸಂಗ ಬರುತ್ತಿರಲಿಲ್ಲ. ಹೆಡ್‌ಮಾಸ್ತರರಿಂದ ಚೀಟಿ ಯಾಕೆ ಬರೆಸಿದಿರಿ ?"

ಅಕ್ಕವ್ವ ಶೋಕಿಸುತ್ತಾ ಹಾದಿಯಲ್ಲಿಯೆ ಕುಸಿದು ಕುಳಿತು ರಂಗಪ್ಪನವರ ಪುರಾಣವನ್ನೆಲ್ಲ ಹೇಳಿದಳು.

....ಅವಳು ಮೊದಲನೆಯ ಬಾರಿ ಮುಲ್ಕೀ ಪರೀಕ್ಷೆಗೆ ಕುಳಿತಾಗ ಅವಳಿಗೆ ಹದಿನೈದು ವರ್ಷ ವಯಸ್ಸು. ಆ ವರ್ಷ ತೇರ್ಗಡೆಯಾಗಲಿಲ್ಲ. ಐದು ವರ್ಷ ಸತತವಾಗಿ ಪರೀಕ್ಷೆಗೆ ಕುಳಿತ ಬಳಿಕ ರಂಗಪ್ಪನವರ ವಶೀಲಿಯಿಂದ ಉತ್ತೀರ್ಣ ಳಾಗಿದ್ದಳು. ಅದೇ ವರ್ಷ ಅವಳಿಗೆ ಮದುವೆಯಾಗಿತ್ತು. ಇನ್ನೂ 'ಗಂಡನ ಮನೆಗೆ ಹೋಗಿರಲಿಲ್ಲ. ಅಕ್ಕವ್ವನಿಗೆ ತಂದೆಯಿರಲಿಲ್ಲ. ತಾಯಿ ಕೂಲಿ ಕೆಲಸ ಮಾಡಿ ಅನ್ನ ಸಂಪಾದಿಸುತ್ತಿದ್ದಳು. ಇನ್ನು ಅಕ್ಕವ್ವನಿಗೊಂದು ನೌಕರಿ ಸಿಕ್ಕಿದರೆ ಹಾಯಾಗಿ ಬದುಕಬಹುದೆಂದು ಅವಳ ತಾಯಿ ರಂಗಪ್ಪನವರ ಸಹಾಯ ಕೋರಿದ್ದಳು. " ಅದಕ್ಕೇನಂತೆ! ಬಡವರಿಗೆ ಕೈಲಾದಷ್ಟು ಸಹಾಯ

ಮಾಡದಿದ್ದರೆ ಜನ್ಮ ಸಾರ್ಥಕವಾದೀತೇ!" ಎಂದು ಹೇಳಿ ರಂಗಪ್ಪನವರು ಸ್ಕೂಲ್‌ಬೋರ್ಡಿನ ಅಧಿಕಾರಿಗಳಿಗೊಂದು ಚೀಟಿ ಕಳಿಸಿದ್ದರು. ಅಂದಿನಿಂದ ಅಕ್ಕವ್ವನ ಮನೆಗೆ ಅವರು ಬಂದು ಹೋಗುವುದಕ್ಕಾರಂಭವಾಗಿತ್ತು. ಕಾಮ ಶಾಸ್ತ್ರ ಪ್ರವೀಣರಾದ ರಂಗಪ್ಪನವರಿಗೆ ಅಕ್ಕವ್ವನಂಥ ಮುಗ್ಧ ಹುಡುಗಿಯನ್ನು ಬಲೆಗೆ ಹಾಕಿಕೊಳ್ಳುವುದೇನೂ ಕಷ್ಟದ ಕೆಲಸವಾಗಿರಲಿಲ್ಲ.

ಅಕ್ಕವ್ವನಿಗೆ ಶಿಕ್ಷಿಕೆಯ ಕೆಲಸ ಸಿಕ್ಕಿತ್ತು – ಅದೇ ಊರಿನಲ್ಲಿಯೇ ತಾಯಿ ಮಗಳು ಸುಖವಾಗಿದ್ದರು. ರಂಗಪ್ಪನವರು ಆಗಾಗ ಬಂದು ಹೋಗುತ್ತಿದ್ದರು. ಅವರು ಮುನಿದುಕೊಂಡರೆ ತನ್ನ ನೌಕರಿ ಹೋದಿತೆಂಬ ಹೆದರಿಕೆಯಿಂದ ಅವಳು ಅವರನ್ನು ಸಹಿಸಿಕೊಂಡಿದ್ದಳು.

ಅವಳಿಗೆ ಕೆಲಸ ಕೊಡಿಸಿದ ಬಳಿಕ ರಂಗಪ್ಪನವರ ಕೀರ್ತಿ ಗಾಳಿ ಪಟದಂತೆ ಮೇಲಕ್ಕೆ ಮೇಲಕ್ಕೆ ಉಡ್ಡಾಣಮಾಡಿತ್ತು. ಅದರೊಡನೆ ಅವರ ಬಳಗವೂ ಬೆಳೆದಿತ್ತು.

ರಂಗಪ್ಪನವರಿಗೆ ಅವರದೆನ್ನುವ ಒಂದು ಗೇಣು ನೆಲ ಈ ಜಗತ್ತಿನಲ್ಲಿರಲಿಲ್ಲ. ಭಾರತದ ನೆಲವೆಲ್ಲಾ ತಮ್ಮದೇ, ಅಲ್ಲಿಯ ಮನೆಗಳೆಲ್ಲಾ ತಮ್ಮವೇ, ಜನರೆಲ್ಲಾ ತಮ್ಮವರೇ, ಅವರ ಸೇವೆಯೇ ತಮ್ಮ ಕರ್ತವ್ಯವೆಂದು ಭಾವಿಸಿ ಅವರು ರಾಜಕೀಯಕ್ಕೆ ಧುಮುಕಿದ್ದರು. ಅವರಿಗೂ ಸಂಸಾರವಿತ್ತು. ಮನೆಯಲ್ಲಿ ತಂದೆ ತಾಯಿ, ಹೆಂಡತಿ, ಮಕ್ಕಳು ಇದ್ದರು. ಅವರ ತಾಯಿ ಬೆಣ್ಣೆಯ ವ್ಯಾಪಾರ ಮಾಡುತ್ತಿದ್ದಳು. ಅವಳು ಗೊತ್ತುಪಡಿಸಿದ ಧಾರಣೆಯಂತೆಯೇ ಆ ಪೇಟೆ ಯಲ್ಲಿ ಬೆಣ್ಣೆ ಮಾರಾಟವಾಗುತ್ತಿತ್ತು.

ಒಂದು ಸಲ ನಮ್ಮ ಪೋಲೀಸನೊಬ್ಬನ ಮನೆಯಲ್ಲೊಂದು ಧಾರ್ಮಿಕ ಕಾರ್ಯ ನಡೆಯುವುದಿತ್ತು. ಹತ್ತಿಪ್ಪತ್ತು ಜನರನ್ನು ಊಟಕ್ಕೆ ಆಮಂತ್ರಿಸಿದ್ದನಾತ. ಅವರಿಗಾಗಿ ಸಾಕಷ್ಟು ತುಪ್ಪ ಬೇಕಲ್ಲವೆ? ಅವನು ಬೆಣ್ಣೆಯನ್ನು ಹುಡುಕ ತೊಡಗಿದ. ಅವನು ಹೋದ ಮನೆಗಳಿಗೆಲ್ಲ ತಾನೂ ಹೋಗಿ ಬೆಣ್ಣೆಯ ಗಡಿಗೆ ಗಳನ್ನೇ ಎತ್ತಿಕೊಂಡು ಬಂದಳು, ರಂಗಪ್ಪನ ತಾಯಿ. ಪೋಲೀಸಿನವನು ಕೋಪಿಸಿಕೊಂಡು ಆ ಮುದುಕಿಗೆ ಒಳಿತಾಗಿ ಬುದ್ಧಿ ಕಲಿಸುವುದೆಂದು ನಿರ್ಧರಿಸಿ, ಅವಳು ಒಂದು ಸೇರಿಗೆ ಹನ್ನೆರಡಾಣೆಯಂತೆ ಬೆಣ್ಣೆ ಕೊಳ್ಳುತ್ತಿದ್ದರೆ ಇವನು ಒಂದು ರೂಪಾಯಿ ಎರಡಾಣೆಗೆ ಕೊಳ್ಳುವುದಾಗಿ ಹೇಳತೊಡಗಿದ. ಒಂದು

ಸೇರಿಗೆ ಆರುಆಣೆ ಹೆಚ್ಚು ಸಿಗುವುದೆಂದ ಮೇಲೆ ಆ ಮುದುಕಿಯ ಹತ್ತಿರ ಯಾರು ಹೋಗಬೇಕು? ಸೇರಿಗೆ ಒಂದು ರೂಪಾಯಿ ಮೂರಾಣೆ ಕೊಟ್ಟರೆ ಅವಳಿಗೆ ಬೆಣ್ಣೆ ಕೊಡುವುದಾಗಿ ಹಳ್ಳಿಯ ಹೆಂಗಸರು ಹೇಳಿದರು. ತೊಂಡೇಬಾವಿಯಲ್ಲಿ ಅವಳು ಕೊಂಡು ನಗರಕ್ಕೆ ರವಾನಿಸುತ್ತಿದ್ದ ಬೆಣ್ಣೆಗೆ ಸೇರಿಗೆ ಹದಿನೈದಾಣೆಗಿಂತ ಹೆಚ್ಚು ಧಾರಣೆಯಿರಲಿಲ್ಲ ನಗರದಲ್ಲಿ. ಸೇರಿಗೆ ಮೂರಾಣೆ ಹಾನಿ ಮಾಡಿಕೊಂಡು ಅವಳು ವ್ಯಾಪಾರ ಮಾಡಿದರೆ ರಂಗಪ್ಪನವರ ಖಾದೀ ಬಟ್ಟೆಗಳ ಇಸ್ತ್ರಿಗೆ ಹಣ ವೆಲ್ಲಿಂದ ಬರಬೇಕು?

ಪೋಲೀಸಿನವನು ತನಗೆ ಬೇಕಾದಷ್ಟು ಬೆಣ್ಣೆ ಕೊಂಡು ಬಂದು ರೂಪಾಯಿ ಎರಡಾಣೆಯಂತೆ ಹಣಕೊಟ್ಟು ಬರುತ್ತಲೂ ರಂಗಪ್ಪನವರ ತಾಯಿಯ ಧಾರಣೆ ಬುಡಮೇಲಾಗಿ ಎರಡುಮೂರು ವಾರಗಳವರೆಗೆ ಅವಳಿಗೆ ಬಹಳ ನಷ್ಟವಾಯಿತು. ಆ ವಿಚಾರ ರಂಗಪ್ಪನವರ ಕಿವಿಗೆ ಬೀಳುತ್ತಲೂ ಅವರು ಕಿಡಿಕಿಡಿಯಾಗಿ, ಒಬ್ಬ ಕ್ಷುಲ್ಲಕ ಪೋಲೀಸಿನವನಿಗೆ ಇಷ್ಟು ಅ ಹಂ ಕಾ ರ ವೇ! ಎಂದುಕೊಳ್ಳುತ್ತಾ ಅವನಿಗೆ ಬುದ್ಧಿ ಕಲಿಸುವುದೆಂದು ಗಟ್ಟಿಮಾಡಿಕೊಂಡು, ತಾವು ದಿವಸಕ್ಕೆ ನೂರು ಬಾರಿ ಉರುಹೊಡೆಯುತ್ತಿದ್ದ ಸತ್ಯ ಅಹಿಂಸೆಗಳನ್ನು ಗಾಳಿಗೆ ತೂರಿ, ಆ ಪೋಲೀಸನು ತಮ್ಮ ತಾಯಿಯನ್ನು ಅವಾಚ್ಯವಾಗಿ ಬೈದನೆಂದೂ ಹೊಡೆಯಲು ಹೋಗಿದ್ದನೆಂದೂ ಆರೋಪಹೊರಿಸಿ, ತಮ್ಮ ನಾಲ್ಕಾರು ಜನ ಹಸ್ತಕರ ಸಾಕ್ಷಿ ಹಾಕಿಸಿ, ಅವನ ಬಗೆಗೆ ಯೋಗ್ಯ ವಿಚಾರಣೆಯಾಗಬೇಕೆಂದು ಡಿ.ಎಸ್.ಪಿ. ಸಾಹೇಬರಿಗೆ ಕಾಗದ ಬರೆದರು.

ಡಿ.ಎಸ್.ಪಿ. ಯವರು ಆ ಕಾಗದವನ್ನು ನಮ್ಮ ಭಾಗದ ಡೆಪ್ಯುಟಿ ಸಾಹೇಬರ ಕಡೆಗೆ ಕಳಿಸುತ್ತಲೂ ಅವರು ಆ ಪ್ರಕರಣದ ವಿಚಾರಣೆಗಾಗಿ ತೊಂಡೇ ಬಾವಿಗೆ ಬಂದರು. ರಂಗಪ್ಪನವರ ತಾಯಿಯ ಮತ್ತು ಅವರ ಸಾಕ್ಷಿದಾರರ ಹೇಳಿಕೆಗಳೆಲ್ಲ ಮುಗಿದುವು. ಇನ್ನು ಪೋಲೀಸಿನವರ ಪರವಾಗಿ ಸಾಕ್ಷಿಗಳಾಗ ಬೇಕು. ಸಂತೆಯ ದಿವಸ ತನ್ನ ಸಾಕ್ಷಿದಾರರನ್ನು ಕರೆದು ತರುವುದಾಗಿಯೂ ಅದುವರೆಗೆ ತನಗೆ ಅವಧಿಯನ್ನು ಕೊಡಬೇಕೆಂದೂ ಅವನು ಪ್ರಾರ್ಥಿಸಿಕೊಂಡ. 'ಆಗಬಹುದು,' ಎಂದು ಅವನಿಗೆ ಅವಧಿಯನ್ನು ಕೊಟ್ಟರು ಸಾಹೇಬರು. ಆ ಪೋಲೀಸನ ನೌಕರಿಯೇ ಹೋಗುವುದೆಂದು ಹೇಳುತ್ತಾ ಊರಲ್ಲೆಲ್ಲ ತನ್ನ ಮಗನ ಪೌರುಷವನ್ನು ಕೊಚ್ಚಿಕೊಂಡಳು ಆ ಮುದುಕಿ.

ಸಂತೆಯ ದಿನವೂ ಬಂದಿತು.

ಪೋಲೀಸಿನವನು ಪೇಟೆಯಲ್ಲಿ ಹೋಗಿ, ಬೆಣ್ಣೆ ಮಾರಲು ಬರುತ್ತಿದ್ದ ಹತ್ತಿಪ್ಪತ್ತು ಹೆಂಗಸರನ್ನು ಕಂಡು, ಅವರ ಬೆಣ್ಣೆಯನ್ನೆಲ್ಲ ಹೆಚ್ಚಿನ ಧಾರಣೆಗೆ ಕೊಳ್ಳುವುದಾಗಿ ಹೇಳಿ ಎಲ್ಲರನ್ನೂ ಪೋಲೀಸ್ ಕಚೇರಿಗೆ ಕರೆದುಕೊಂಡು ಬಂದ.

"ಇವರೇ ನಿನ್ನ ಸಾಕ್ಷಿಗಳೇನು?" ಎಂದು ನಗುತ್ತಾ ಕೇಳಿದರು ಸಾಹೇಬರು.

"ಹೌದು ಸಾಹೇಬರೇ."

ಸಾಹೇಬರೂ ಬಹಳ ಘಾಟೀಕುಳ. ಅವರು ಏನನ್ನೋ ಯೋಚಿಸಿ, ಆ ಹೆಂಗಸರನ್ನೆಲ್ಲ ಒಂದು ಕೊಠಡಿಯಲ್ಲಿ ಕೂಡಿಸಿ, ರಂಗಪ್ಪನವರನ್ನು ಬರಮಾಡಿ ಕೊಂಡು, ಅವರು ಬಂದ ವಿಷಯ ಹೆಂಗಸರಿಗೆ ತಿಳಿಯದಂತೆ ಎಚ್ಚರಿಕೆ ವಹಿಸಿ ರಂಗಪ್ಪನವರನ್ನು ಕಚೇರಿಯಲ್ಲಿ ಕೂಡಿಸಿದರು. ಅನಂತರ ಪಕ್ಕದ ಕೊಠಡಿಗೆ ಹೋಗಿ ಆ ಹೆಂಗಸರನ್ನು ಪ್ರಶ್ನಿಸತೊಡಗಿದರು. ಪೋಲೀಸಿನವನೂ ಅಲ್ಲಿಯೇ ಇದ್ದ.

"ಈ ಪೋಲೀಸನನ್ನು ನೀವು ಗುರುತಿಸುತ್ತೀರೇನು?"

"ಹೌದ್ರೀ."

"ಇವನದೂ ನಿಮ್ಮದೂ ಎಲ್ಲಿ ಗುರುತು?

"ನಮಗೇನ್ರೀ! ಬೆಣ್ಣೀ ತಗೊಳ್ಳುವದಕ್ಕೆ ಬರುವವರದೆಲ್ಲಾ ಗುರುತಿರು ತೈತಿ," ಎಂದು ಹೇಳಿದಳು ಒಬ್ಬ ದಿಟ್ಟ ಹೆಂಗಸು.

"ರಂಗಪ್ಪನವರ ತಾಯಿಯವರದೂ ನಿಮಗೆ ಗುರುತಿರಬಹುದಲ್ಲ?"

"ಹೌದ್ರೀ. ಗುರುತೈತಿ. ಚಲೋ ಚಲೋ ಗುರುತೈತಿ," ಎಂದಳಾಕೆ.

"ಅವರ ಬಗ್ಗೆ ನೀವೇನು ಹೇಳುತ್ತೀರಿ?"

ಹೆಂಗಸರು ಹಿಂಜರಿಯತೊಡಗಿದರು. ಸಾಹೇಬರು ಅರವನ್ನು ಕುರಿತು,

"ಏನೂ ಅಂಜಬೇಡಿರಿ. ನಿಮ್ಮ ಮನಸಿನಲ್ಲಿದ್ದದ್ದು ಹೇಳಿರಿ," ಎಂದರು.

ಮುದುಕಿಯೊಬ್ಬಾಕೆ ಹೇಳಿದಳು:

"ಅವಳ ಕಾಟ ಸಾಕುಸಾಕಾಗಿ ಹೋಗ್ಯೆತಿರಿ ಸಾಹೇಬರೇ, ನಮಗೆ. ಪ್ಯಾಟಿಗೆಲ್ಲಾ ತಾನೇ ಯಜಮಾನಿಯಿದ್ದ ಹಾಗೆ ದರಬಾರು ಮಾಡುತಾಳೆ.

ಅವಳು ಹೇಳಿದ ಧಾರಣಿಗೇ ಅವಳಿಗೇ ಬೆಣ್ಣೀ ಕೊಟ್ಟು ಅವಳು ಕೊಟ್ಟಷ್ಟು ರೊಕ್ಕ ತಗೊಂಡು ಹೋಗಬೇಕಾಗುತೈತಿ. ಈ ಪೋಲೀಸಪ್ಪನಂಥವರು ಸರಕಾರಿ ನೌಕರದಾರರು ಬಂದು ಹೆಚ್ಚಿನ ಧಾರಣೆಗೆ ಕೇಳಿದರೂ ಇವಳು ಕೊಡ ಗೊಡುವದಿಲ್ಲ, ಇವಳ ಬಾಯಿಗೆ ಅಂಜಿ ಅವರೂ ಸುಮ್ಮನಾಗುತಾರೆ."

ಕಚೇರಿಯಲ್ಲಿ ಕುಳಿತುಕೊಂಡಿದ್ದ ರಂಗಪ್ಪನವರ ಕಿವಿಗೂ ಈ ಮಾತು ಗಳೆಲ್ಲ ಸೇರುತ್ತಿದ್ದುವು. ಈ ಹೆಂಗಸರು ಇನ್ನೂ ಏನೇನನ್ನು ಹೇಳುವರೋ ಎಂಬ ಭಯದಿಂದ ಅವರು ಕುರ್ಚಿಯಲ್ಲಿ ಅಸ್ವಸ್ಥರಾಗಿ ಅತ್ತಿತ್ತ ಹೊರಳುತ್ತಿದ್ದರು.

ಮುದುಕಿ ಮುಂದುವರಿಸಿದ್ದಳು.

"ಅವಳ ಮಗ ಕಾಂಗರೇಸ್ ಪುಢಾರಿ ಅದಾನಂತ ಅಷ್ಟು ಬಡಿವಾರ ಅವಳದು. ನೀವಾದರೂ ಅವಳನ್ನ ಮೆತ್ತಗಮಾಡಿ ಬಡವರಿಗೆ ಉಪಕಾರ ಮಾಡಿರಿ ಸಾಹೇಬರೆ."

"ನೋಡೋಣ. ಮುಂದೇನು ಹೇಳು."

"ಅವತ್ತು ಈ ಪೋಲೀಸಪ್ಪ ಸೇರಿಗೆ ರೂಪಾಯಿ ಎರಡಾಣೆ ಕೊಟ್ಟು ನಮ್ಮ ಬೆಣ್ಣೀ ಕೊಂಡುಕೊಂಡ. ಆ ಮುದುಕಿಯ ಧಾರಣಿ ಹನ್ನೆರಡಾಣೆ. ನಾವು ಹಾನಿ ಮಾಡಿಕೊಂಡು ಅವಳಿಗೆ ಹನ್ನೆರಡಾಣೆಗೆ ಯಾಕೆ ಕೊಡಬೇಕು, ಹೇಳಿರಿ. ಇವರು ರೂಪಾಯಿ ಎರಡಾಣೆ ಧಾರಣಿ ಮಾಡಿದಾಗಿನಿಂದ ಪೇಟೆ ಯೊಳಗ ಬೆಣ್ಣೀ ಧಾರಣಿ ಹೆಚ್ಚಾಗೈತಿ. ಅದಕ್ಕ ಆ ಮುದುಕಿ ನಮ್ಮನ್ನ ಹರಿದು ತಿನ್ನಾಕ ಹತ್ತಿದಾಳ. ಅವಳ ತಕ್ಕಡಿಯ ಕಲ್ಲು ಖೊಟ್ಟ ಕಲ್ಲು. ಅದರಾಗೂ ನಮ್ಮನ್ನ ಮುಳುಗಿಸುತಾಳ. ವ್ಯಾಲ ದೇಶದ ಕೆಲಸಕ್ಕ ಬೇಕು ಅಂತ ಹೇಳಿ ಒಂದಿಷ್ಟು ಬೆಣ್ಣಿ ಪುಕ್ಕಟಿ ತಗೋತಾಳ. ನಮಗ ಸಾಕಾಗಿ ಹೋಗೈತಿ ಸಾಹೇಬರೇ, ಅವಳ ಕಾಲಾಗ!"

ಆ ಹೆಂಗಸರ ಹೇಳಿಕೆಗಳನ್ನು ಬರೆದುಕೊಂಡುದಾಯಿತು. ಪೋಲೀಸಿ ನವನು ಅವರೆಲ್ಲರ ಬೆಣ್ಣೆಯನ್ನೂ ಕೊಂಡು ತೆಗೆದುಕೊಂಡಿದ್ದ. ಅದಕ್ಕಾಗಿ ಅವನಿಗೆ ನೂರು ರೂಪಾಯಿಗಳವರೆಗೂ ವೆಚ್ಚವಾಗಿತ್ತು.

ಸಾಹೇಬರು ರಂಗಪ್ಪನವರ ಹತ್ತಿರ ಬಂದು, ಆ ಹೆಂಗಸರ ಹೇಳಿಕೆಗಳನ್ನು ಅವರ ಕೈಗೆ ಕೊಟ್ಟು,

"ಇವರಂತೂ ಹೀಗೆ ಹೇಳುತ್ತಾರೆ. ಮುಂದಿನ ಹಾದಿಯನ್ನು ನೀವೇ ತೋರಿಸಬೇಕು," ಎಂದರು.

ರಂಗಪ್ಪನವರ ಬಾಯಿಯಿಂದ ಒಂದು ಶಬ್ದವೂ ಹೊರಡುವಂತಿರಲಿಲ್ಲ.

ಸಾಹೇಬರು ಇಬ್ಬರು ಪೋಲೀಸಿನವರನ್ನು ಕೂಗಿ,

"ಈಗಿಂದೀಗ ಪೇಟೆಗೆ ಹೋಗಿ, ರಂಗಪ್ಪನವರ ತಾಯಿಯವರು ಬೆಣ್ಣೆ ಖರೀದಿ ಮಾಡುತ್ತಿದ್ದರೆ ಅವರ ತಕ್ಕಡಿ ಮತ್ತು ತೂಕದ ಕಲ್ಲು ಜಪ್ತು ಮಾಡಿ ತೆಗೆದುಕೊಂಡು ಬರ್‍ರಿ. ಆದರೆ ಅಮ್ಮನವರಿಗೆ ಏನೂ ಅನ್ನಬಾರದು, ಅವಮಾನ ಮಾಡಬಾರದು. ತಿಳಿಯಿತೇ?" ಎಂದು ಹೇಳಿದರು.

ಪೋಲೀಸರು ಪೇಟೆಗೆ ಹೊರಡಲಿಲ್ಲ. ರಂಗಪ್ಪನವರ ತಾಯಿಯನ್ನು ಕೆಣಕಲು ಅವರಿಗೂ ಹೆದರಿಕೆಯೇ.

"ಯಾಕೆ ನಿಂತುಕೊಂಡಿರಿ?" ಎಂದರು ಸಾಹೇಬರು.

ಆಗಲೂ ಪೋಲೀಸರು ಮಿಸುಕಾಡಲಿಲ್ಲ.

ರಂಗಪ್ಪನವರಂತೂ ಮೂಕ ಬೊಂಬೆಯಂತೆ ಕುಳಿತುಕೊಂಡಿದ್ದರು. ತಮ್ಮ ತಾಯಿಯ ತಕ್ಕಡಿ – ತೂಕದ ಕಲ್ಲುಗಳ ಸತ್ಯಕಥೆಯೆಲ್ಲ ಅವರಿಗೆ ಗೊತ್ತು. ಬಡ ಹಳ್ಳಿಗರನ್ನು ಹಾಗೆ ವಂಚಿಸದಿದ್ದಲ್ಲಿ ರಂಗಪ್ಪನವರ ಸಂಸಾರದ ಖರ್ಚು ನಡೆಯುವಂತಿರಲಿಲ್ಲ. ಸಂಸಾರ ನಡೆಯದಿದ್ದಲ್ಲಿ ಅವರು ಭಾರತಕ್ಕೆ ಸ್ವಾತಂತ್ರ್ಯ ದೊರಕಿಸುವುದೂ ಸಾಧ್ಯವಾಗುತ್ತಿರಲಿಲ್ಲ. ರಂಗಪ್ಪನವರು ಮಾಡುತ್ತಿದ್ದ ರಾಷ್ಟ್ರ ಕಾರ್ಯ ಮಹತ್ವದ್ದಲ್ಲವೆ? ಬೆಣ್ಣೆ ಮಾರುವ ಹಳ್ಳಿಗರಿಗೆ ನಾಲ್ಕು ಕಾಸು ಹಾನಿ, ಯಾವರೇನಂತೆ!

ಆದರೆ, ತಮ್ಮ ತಾಯಿಯ ಮೇಲೆ, ಖೊಟ್ಟಿ ತಕ್ಕಡಿ – ತೂಕದ ಕಲ್ಲುಗಳ ಉಪಯೋಗಕ್ಕಾಗಿ ಮೊಕದ್ದಮೆಯೇನಾದರೂ ಆದರೆ ತಮಗೂ ಕೆಟ್ಟ ಹೆಸರು ಬರುವುದಲ್ಲವೆ? ಸತ್ಯ ಅಹಿಂಸೆಗಳ ಮಹಾಭಕ್ತರು ತಾವು. ತಮ್ಮ ತಾಯಿಯ ಮೋಸಗಾರಿಕೆ ಬಯಲಿಗೆ ಬಂದರೆ ತಮ್ಮ ಕೀರ್ತಿಗೆ ಕಲಂಕವಲ್ಲವೆ?

ಹಾಗೆ ಯೋಚಿಸುತ್ತಾ ರಂಗಪ್ಪನವರು ತೆಪ್ಪಗೆ ಕುಳಿತುಕೊಂಡಿದ್ದರು.

"ಹುಜೂರ್, ಆ ಮುದುಕಿಯ ತಕ್ಕಡಿ ತರುವದು ಬಹಳ ಕಷ್ಟ. ಅವಳು ನಮ್ಮನ್ನು ಹೊಡೆಯಲೂ ಹಿಂದಾಗುವವಳಲ್ಲ," ಎಂದು ಪೋಲೀಸರು ಹೇಳಿದರು.

ಸಾಹೇಬರು ರಂಗಪ್ಪನವರ ಕಡೆಗೆ ತಿರುಗಿ ಹೇಳಿದರು :

“ರಂಗಪ್ಪನವರೇ, ನೀವು ನಿಷ್ಠಾವಂತ ದೇಶಭಕ್ತರು. ನಿಮ್ಮ ಬಗ್ಗೆ ನನಗೆ ಬಹಳ ಆದರವಿದೆ. ಯಾರು ಎಂಥಾ ಅನ್ಯಾಯ ಮಾಡಿದರೂ ಅದನ್ನು ನೀವು ಸಹಿಸುವವರಲ್ಲವೆಂದು ನಾನು ಬಲ್ಲೆ. ನಮ್ಮ ಪೋಲೀಸ್ ಹೆಚ್ಚಿನ ಧಾರಣೆಗೆ ಬೆಣ್ಣೆ ತೆಗೆದುಕೊಂಡು ನಿಮ್ಮ ತಾಯಿಗೆ ಅನ್ಯಾಯ ಮಾಡಿದ್ದ. ಅದಕ್ಕಾಗಿ ನೀವು ಆವನನ್ನು ವಿಚಾರಣೆಗೆ ಗುರಿಪಡಿಸಿದಿರಿ. ಸ್ತುತ್ಯ. ನಿಮ್ಮ ತಾಯಿಯವರು ಖೊಟ್ಟಿ ತಕ್ಕಡಿ ಕಲ್ಲು ಇಡುತ್ತಾರೆಂದು ಬೆಣ್ಣೆ ಮಾರುವ ಹೆಂಗಸರು ಹೇಳಿದ್ದಾರೆ. ಅದು ನಿಜವೇ ಇರಲಿ, ಸುಳ್ಳೇ ಇರಲಿ. ನಾವು ವಿಚಾರಣೆಯನ್ನಂತೂ ಮಾಡಲೇಬೇಕಲ್ಲವೆ? ಅನ್ಯಾಯಗಳನ್ನು ಕಂಡು ಪ್ರತಿಭಟಿಸುವ ನೀವೇ ಈಗ ನಿಮ್ಮ ತಾಯಿಯವರನ್ನು ನಮ್ಮ ವಶಕ್ಕೆ ಕೊಡಬೇಕು. ತಕ್ಕಡಿ ಕಲ್ಲು ಸರಿಯಾಗಿವೆಯೋ ಇಲ್ಲವೋ ನೋಡೋಣ. ಸರಿಯಾಗಿರದಿದ್ದರೆ ನಾಲ್ಕಾರು ರೂಪಾಯಿ ದಂಡವಾಗಬಹುದು. ಹೆಚ್ಚೇನೂ ಇಲ್ಲ.”

ರಂಗಪ್ಪನವರ ಬಾಯಿ ಒಣಗಿ ಹೋಗಿತ್ತು. ಅವರು ತಡೆತಡೆಯುತ್ತ ಹೇಳಿದರು :

“ಹೋಗಲಿ ಬಿಡಿರಿ ಸಾಹೇಬರೆ. ನನಗೆ ಇದೆಲ್ಲಾ ತಿಳಿದಿರಲಿಲ್ಲ. ನಾವು ರಾಷ್ಟ್ರೀಯ ಕೆಲಸಗಾರರು. ಬರೀ ಆ ಊರು ಈ ಊರು ಅಲೆಯುತ್ತಿರುತ್ತೇವೆ. ಇದರಲ್ಲಿ ನಮ್ಮ ತಾಯಿಯದು ತಪ್ಪಿದೆ. ಪೋಲೀಸನದೂ ಇದೆ. ಈ ಪ್ರಕರಣವನ್ನು ಮುಗಿಸಿಬಿಡಿರಿ.”

“ಪೋಲೀಸನದೇನು ತಪ್ಪಿದೆಯೋ ನನಗೆ ತಿಳಿಯದು. ಅವನ ತಪ್ಪು ಸಿದ್ಧಮಾಡಿಕೊಟ್ಟರೆ ನಾನು ಅವನನ್ನು ಡಿಸ್‌ಮಿಸ್ ಮಾಡಿಸುತ್ತೇನೆ.”

“ಹೋಗಲಿ ಬಿಡಿರಿ ಸಾಹೇಬರೆ. ಪಾಪ, ಬಡವ, ಮಕ್ಕಳುಮರಿ ಇದ್ದವ. ನಮ್ಮಿಂದಾಗಿ ಅವನಿಗ್ಯಾಕೆ ಗೋಳಾಟ?” ಎಂದು ಸೋಗಿನ ಔದಾರ್ಯ ವ್ಯಕ್ತಗೊಳಿಸಿದರು ರಂಗಪ್ಪನವರು.

ಸಾಹೇಬರು ಹಾಗೆಲ್ಲ ಬಿಟ್ಟುಕೊಡುವವರಲ್ಲ. ಅವರೂ ಅಣಕದ ದನಿಯಲ್ಲಿ ಹೇಳಿದರು :

“ಈ ಪ್ರಕರಣವನ್ನು ಹೀಗೇ ಬಿಡದೆ ಪೂರ್ಣ ವಿಚಾರಣೆಯಾದರೇನೇ

ಒಳ್ಳೆಯದಲ್ಲವೇ ರಂಗಪ್ಪನವರೆ? ಗಾಂಧೀಜಿಯವರ ಶಿಷ್ಯರಾದ ನೀವೇ ಹೀಗೆ ಹೇಳಿದರೆ ಹ್ಯಾಗೆ?"

"ಏನು ಮಾಡುವದು ಸಾಹೇಬರೆ. ನನಗೆ ಇದಕ್ಕೆಲ್ಲಾ ವೇಳೆಯೆಲ್ಲಿದೆ? ನಮ್ಮ ತಾಯಿಯದೇ ತಪ್ಪು ಅಂತ ಕಾಣುತ್ತದೆ. ದಯಮಾಡಿ ಇಲ್ಲಿಗೆ ಈ ಪ್ರಕರಣ ಮುಗಿಸಿಬಿಡಿರಿ."

"ಆಯಿತು. ನೀವು ಹೇಳುತ್ತೀರೆಂದ ಮೇಲೆ ಬಿಟ್ಟುಬಿಡೋಣ. ಆದರೆ, ನೀವು ಮುಂದೆ ಮಂತ್ರಿಗಳಾದರೂ ಆಗಬಹುದು. ಪೋಲೀಸರ ಮೇಲೆ ಹೀಗೆ ಬರುವ ಅಪವಾದಗಳ ಬಗ್ಗೆ ಸಹಾನುಭೂತಿಯಿದ್ದರಾಯಿತು," ಎಂದರು ಸಾಹೇಬರು.

ರಂಗಪ್ಪನವರು, ಕಳೆಗುಂದಿದ ಮುಖ ಹೊತ್ತು ಮನೆಗೆ ಹೋದರು. ಅಂದಿನಿಂದ ಅವರು ಪೋಲೀಸರ ಮೇಲೆ ಅರ್ಜಿ ಮಾಡುವ ಗೊಡವೆಗೆ ಹೋಗಲಿಲ್ಲ.

ಕೆಲ ದಿನಗಳ ತರುವಾಯ ಅವರೊಡನೆ ನನಗೆ ಪರಿಚಯ ಬೆಳೆಯಿತು. ಅದನ್ನು ಸ್ನೇಹವೆಂದು ಕರೆಯಲಾರೆ. ಅವರಂಥ ಮಹಾಮುಖಂಡರು ನಮ್ಮಂಥ ಬಡ ಪೋಲೀಸರೊಡನೆ ಸ್ನೇಹ ಬೆಳಸುವುದುಂಟೇ!

ಒಂದು ತಿಂಗಳು ಕಳೆಯುವಷ್ಟರಲ್ಲಿಯೆ ಎರೇಸೀಮೆ ಫೌಜದಾರರಿಗೆ ವರ್ಗವಾಯಿತು. ಅವರನ್ನು ಬೀಳ್ಕೊಡುವ ಸಮಾರಂಭದ ಅಧ್ಯಕ್ಷತೆ ವಹಿಸಲು ರಂಗಪ್ಪನವರನ್ನೇ ಆಮಂತ್ರಿಸಿದೆವು. ನಮ್ಮ ಸಾಹೇಬರಿಂದ ಮುಖಭಂಗ ಮಾಡಿಸಿಕೊಂಡಿದ್ದ ರಂಗಪ್ಪನವರು ಪೋಲೀಸರಾದ ನಮಗೆ ಮುಖ ತೋರಿಸುವುದಾದರೂ ಹೇಗೆ? ಏನೋ ನೆಪ ಹೇಳಿ ಜಾರಿಕೊಂಡರು. ಹೈಸ್ಕೂಲ್ ಹೆಡ್ಮಾಸ್ತರರಾದ ದೇಸಾಯಿಯವರನ್ನು ಅಧ್ಯಕ್ಷರನ್ನಾಗಿ ಮಾಡಲಾಯಿತು.

ಊರಿನಲ್ಲಿನ ಪ್ರಮುಖರಿಗೆಲ್ಲ ಆಮಂತ್ರಣ ಕೊಟ್ಟಹಾಗೆ ಅಕ್ಕವ್ವನಿಗೂ ಕೊಡಲಾಗಿತ್ತು.

"ನೀವೂ ಒಂದು ಭಾಷಣ ಮಾಡಿರಿ ಅಕ್ಕವ್ವನವರೇ!" ಎಂದು ನಾನು ನಗುನಗುತ್ತಾ ಹೇಳಿದೆ.

ಅಕ್ಕವ್ವನೂ ಮನಃಪೂರ್ವಕವಾಗಿ ನಕ್ಕಳು.

“ ನಿಮ್ಮದೂ ಚಲೋ ಮಾತೇ! ನಿಮ್ಮ ಫೌಜದಾರರ ಗುಣಗಾನ ನಾನು ಮಾಡಬೇಕೇನು ?”

“ ನಿಮ್ಮ ಇಚ್ಛೆ,” ಎಂದಿಷ್ಟೆ ನುಡಿದು ನಾನು ಸುಮ್ಮನಾದೆ.

ಎರೇಸೀಮೆಯವರು ಹೊರಟುಹೋದರು. ಅವರ ಬದಲು ಹಳಗೇರಿ ಎಂಬ ಫೌಜದಾರರು ಬಂದು ‘ ಚಾರ್ಜ್ ’ ತೆಗೆದುಕೊಂಡರು. ಅವರೇನು ನನಗೆ ಅಪರಿಚಿತರಾಗಿರಲಿಲ್ಲ. ಓರೆಕೋರೆಯಲ್ಲಿದ್ದಾಗಲೆ ಅವರೊಡನೆ ಪರಿಚಯ ವಾಗಿತ್ತು.

೧೬

# ಕೊರಚರ ಗುಂಪನ್ನು ಬಯಲಿಗೆಳೆದದ್ದು

ಹಳಗೇರಿ ಫೌಜದಾರರಿಗೆ ಆಗ ನಡುವಯಸ್ಸು. ಅವರ ಸಂಸಾರ ಬಹಳ ದೊಡ್ಡದು. ನಾಲ್ಕಾರು ಜನ ಮಕ್ಕಳು, ಹೆಂಡತಿ, ತಾಯಿ, ಆಳುಕಾಳು ಎಲ್ಲ ಸೇರಿ ಹತ್ತು ಜನರಿದ್ದರು. ಫೌಜದಾರರ ಸಂಬಳ ಅವರಿಗೆ ಸಾಲುವಂತಿರಲಿಲ್ಲ. ಅವರು ಅಲ್ಲಿ ಇಲ್ಲಿ ಲಂಚ ಹೊಡೆಯದಿದ್ದರೆ ಸಂಸಾರ ನಡೆಯುವ ಹಾಗೇ ಇರಲಿಲ್ಲ.

ಹಳಗೇರಿಯವರು ಬರುವುದಕ್ಕೂ ನಮ್ಮ ಭಾಗದಲ್ಲಿ ಕನ್ನ – ಕಳವುಗಳಿಗಾರಂಭವಾಗುವುದಕ್ಕೂ ಗಂಟುಬಿತ್ತು. ಅವರು ಬಂದಿಳಿದ ಮುಹೂರ್ತದ ಪ್ರಭಾವವೇನೂ ಅಲ್ಲ ಅದು. ಜನಗಳಿಗೆ ಬಲು ಕಷ್ಟದ ದಿನಗಳು ಬಂದಿದ್ದುವು. ಪೇಟೆಯಲ್ಲಿ ಆಹಾರ ಧಾನ್ಯಗಳ ಅಭಾವ ರೈತರು ಬೆಳೆದುದೆಲ್ಲವೂ ದೇಶದ ಬೇರೆ ಭಾಗಗಳಿಗೆ ಹೋಗುತ್ತಿತ್ತು. ಬೇರೆ ಕಡೆಗಳಿಂದ ಬರುತ್ತಿದ್ದ ಧಾನ್ಯ ಬರುವುದೂ ನಿಂತುಹೋಗಿತ್ತು. ಕೂಲಿಯಿಂದ ಜೀವನ ಸಾಗಿಸುತ್ತಿದ್ದವರಿಗೆ ಕಾಳು ಸಿಕ್ಕದೆ ತುಂಬಾ ತೊಂದರೆಯಾಗುತ್ತಿತ್ತು. ಭಿಕ್ಷೆ ಬೇಡಿದರೂ ಕಾಳು ಸಿಕ್ಕುವಂತಿರಲಿಲ್ಲ. ಬೆಳೆಯುವ ರೈತರಿಗೇ ಕಾಳಿನ ಕೊರತೆಯಾದಾಗ ಅವರು ಭಿಕ್ಷುಕರಿಗೆ ಎಲ್ಲಿಂದ ಕೊಡುವರು ?

ಬಡವರು ಕೆಲದಿನಗಳವರೆಗೆ ಬಹಳ ಕಷ್ಟಪಟ್ಟರು. ಮನೆಯಲ್ಲಿ ಇದ್ದುದನ್ನೆಲ್ಲ ವಿಕ್ರಯಿಸಿ ಕಾಳು ಕೊಂಡು ಹೊಟ್ಟೆ ತುಂಬಿಸಿಕೊಂಡರು. ಬರಬರುತ್ತಾ ಅವರ ಮುಖ್ಯ ಆಹಾರವಾದ ಜೋಳ ತೀರಾ ಕಡಮೆ ಪ್ರಮಾಣದಲ್ಲಿ ದೊರೆಯತೊಡಗಿತು. ಅಕ್ಕಿಯ ಧಾರಣೆ ಮುಗಿಲಿಗೇರಿದ್ದುದರಿಂದ ಬಡವರಿಗೆ ಅದು

ನಿಲುಕುವಂತಿರಲಿಲ್ಲ, ಸರಿ. ಹೊಟ್ಟೆ ಕೇಳಬೇಕಲ್ಲ! ಕನ್ನ – ಕಳವುಗಳನ್ನು ಕಂಡರಿಯದ ಆ ಭಾಗದಲ್ಲೂ ಮೇಲಿಂದ ಮೇಲೆ ಕಳವುಗಳಾಗ ಹತ್ತಿದುವು. ರೈತರ ಹೊಲಗಳಲ್ಲಿ ಬೆಳೆ ಬಂದು ತೆನೆಗಳು ಪುಷ್ಟವಾಗುತ್ತಿದ್ದ ಹಾಗೇ ಬೆಳೆ ಮಾಯವಾಗತೊಡಗಿತು. ಎಷ್ಟೋ ರೈತರ ಮನೆಗಳಿಗೂ ಕನ್ನ ಬಿದ್ದು ನಗ ನಾಣ್ಯಗಳು ಕಳವಾಗಿ ಹೋದುವು.

ಕಳವುಗಳಾಗದಂತೆ ನೋಡಿಕೊಳ್ಳುವುದೂ, ಆದಾಗ ಅಪರಾಧಿಗಳನ್ನು ಹುಡುಕಿ ಹಿಡಿಯುವುದೂ, ಕಳವಾದ ಮಾಲು ಅದರ ಒಡೆಯರಿಗೆ ಮರಳಿ ಸಿಗುವಂತೆ ಮಾಡುವುದೂ ಪೋಲೀಸಿನವರ ಆದ್ಯಕರ್ತವ್ಯವಷ್ಟೆ. ಹಳಗೇರಿ ಫೌಜದಾರರು ಕೊಂಚವೂ ವಿಲಂಬ ಮಾಡದೆ ಕಾರ್ಯತತ್ಪರರಾದರು.

ಕನ್ನ – ಕಳವು ಮಾಡುವ ಪ್ರತಿಯೊಂದು ಕಳ್ಳರ ಗುಂಪಿಗೂ ಅವರದೇ ಆದುದೊಂದು ವಿಶಿಷ್ಟ ಪದ್ಧತಿಯಿರುತ್ತದೆ. ಬಾಗಿಲಿನ ಒಳ ಚಿಲಕದ ಹತ್ತಿರ ಗೋಡೆಯನ್ನೊಡೆದು (ಅಂದರೆ: ಕನ್ನ ಹಾಕಿ,) ಚಿಲಕವನ್ನೋ ಅಗಳಿಯನ್ನೋ ತೆಗೆದು ಮನೆಯೊಳಗೆ ಹೊಕ್ಕು ಕಳವು ಮಾಡುವವರು ಕೆಲವರಾದರೆ, ಮನೆಯ ಮಾಳಿಗೆಯ ಮೇಲೇರಿ ಒಬ್ಬ ಮನುಷ್ಯ ಇಳಿಯುವುದಕ್ಕಾಗುವಷ್ಟು ಸ್ಥಳವನ್ನು ಕೊಯ್ದು ಮನೆಯೊಳಗಿಳಿದು ಕಳವು ಮಾಡುವವರು ಕೆಲವರು. ಮನೆಗಳಿಗೆ ಬೆಳಕಿಂಡಿಗಳಿದ್ದರೆ ಅವುಗಳ ಮೂಲಕ ಇಳಿಯುವವರೂ ಇರುತ್ತಾರೆ. ಮನೆಯ ಜನರು ಊರಿಗೆ, ಹೋದಾಗ ಇಲ್ಲವೆ ಹೊರಗೆ ಹೋದಾಗ ಬಾಗಿಲಿನ ಕೀಲಿಯನ್ನು ಮುರಿದು ಒಳಹೊಕ್ಕು ಕಳವು ಮಾಡುವವರೂ ಇರುತ್ತಾರೆ. ಇವುಗಳಲ್ಲದೆ ಇನ್ನೂ ಅನೇಕ ಪದ್ಧತಿಗಳೂ ಬಳಕೆಯಲ್ಲಿವೆ. ಈ ಪ್ರತಿಯೊಂದು ಪದ್ಧತಿಗೂ ಪೋಲೀಸರ ಪರಿಭಾಷೆಯಲ್ಲಿ ಬೇರೆ ಬೇರೆ ಹೆಸರುಗಳುಂಟು. ಬಾಗಿಲಿನ ಹತ್ತಿರ ಗೋಡೆ ಕೊರೆದು ಒಳಸೇರುವುದಕ್ಕೆ "ಬಗಲಿ" ಪದ್ಧತಿಯೆಂದೂ, ಛಾವಣಿಯಿಂದಿಳಿಯುವುದಕ್ಕೆ "ರುಮಾಲಿ" ಪದ್ಧತಿಯೆಂದೂ ಕರೆಯುವ ರೂಢಿಯಿದೆ.

ನಮ್ಮ ಭಾಗದಲ್ಲಿ ನಡೆದ ಕಳವುಗಳೆಲ್ಲ 'ಬಗಲಿ' ಪದ್ಧತಿಯವುಗಳೇ ಆಗಿದ್ದುವು. ನಮ್ಮ ಕಚೇರಿಯಲ್ಲಿನ ಅಪರಾಧಗಳ ರಿಜಿಸ್ಟರು ಅದುವರೆಗೆ ಖಾಲಿಯಾಗುತ್ತಿದ್ದುದು ಈಗ ತುಂಬಿಕೊಂಡಿತು. ಹಾಗೆ ಅಪರಾಧಗಳು ಹೆಚ್ಚಿದಾಗ

'ಅಪರಾಧಗಳ ಗಾಳಿ' ಬೀಸುತ್ತಿದೆಯೆಂದು (Crime wave) ಹೇಳುವುದು ನಮ್ಮ ಖಾತೆಯಲ್ಲಿ ರೂಢಿ.

ಒಂದೇ ಪದ್ಧತಿಯ ಪ್ರಕಾರ ನಡೆದಿದ್ದ ಅಪರಾಧಗಳ ವರದಿಗಳನ್ನೋದಿ ನೋಡಿ ದಿಗಿಲುಗೊಂಡ ನಮ್ಮ ಭಾಗದ ಇನ್ಸ್‌ಪೆಕ್ಟರರು, ಕಳ್ಳರ ಒಂದು ವಿಶಿಷ್ಟ ಗುಂಪು ಕಾರ್ಯೋನ್ಮುಖವಾಗಿರುವುದೆಂದೂ ಅದನ್ನು ಕೂಡಲೆ ಸದೆಬಡಿಯ ದಿದ್ದಲ್ಲಿ ಶಾಂತಿಗೆ ಆಘಾತವಾಗಬಹುದೆಂದೂ ನಮಗೆ ಸೂಚನೆ ಕೊಡಲಾರಂಭಿ ಸಿದರು.

ಈ ಎಲ್ಲ ಕಳವಿನ ಪ್ರಕರಣಗಳಲ್ಲೂ ಫಿರ್ಯಾದಿಗಳು ಒಬ್ಬಿಬ್ಬರ ಬಗ್ಗೆ ತಮಗೆ ಸಂಶಯವಿರುವುದಾಗಿ ಹೇಳುತ್ತಿದ್ದರು. ತಮ್ಮ ಮನೆಯಲ್ಲಿದ್ದ ಮಾಲಿನ ವಿಚಾರ ಅವರಿಗೆ ಮಾತ್ರ ಗೊತ್ತಿದ್ದು ಅವರೇ ಈ ಕೆಲಸ ಮಾಡಿರಬೇಕೆಂದು ಫಿರ್ಯಾದಿಗಳು ಅಭಿಪ್ರಾಯಪಡುತ್ತಿದ್ದರು. ಅಪರಾಧಿಗಳನ್ನು ಪತ್ತೆ ಮಾಡಲು ಹೋದ ಪೋಲೀಸರ ಲಕ್ಷ್ಯವೆಲ್ಲಾ ಈ ಸಂಶಯಿತ ವ್ಯಕ್ತಿಗಳ ಮೇಲೇ ಕೇಂದ್ರಿತವಾಗುತ್ತಿದ್ದುದರಿಂದ ನಿಜವಾದ ಕಳ್ಳರು ಸಿಕ್ಕಿಬೀಳದೆ ಸುಲಭವಾಗಿ ತಪ್ಪಿಸಿಕೊಳ್ಳುವಂತಾಗಿತ್ತು.

ನಮ್ಮ ಭಾಗದ ಮೂರು ಹಳ್ಳಿಗಳಲ್ಲಿ ಕೊರಚರು ಎಂದು ಕರೆಯಲ್ಪಡುವ ಅಪರಾಧೀ ಮನೋವೃತ್ತಿಯ ಜನಾಂಗದವರು ವಾಸಿಸುತ್ತಿದ್ದರು. ಅವರ ಉಪ ಜೀವನಕ್ಕೆ ಬೇರಾವ ಉದ್ಯೋಗವೂ ಇರಲಿಲ್ಲವಾದುದರಿಂದ ಕಳವು ಮಾಡುವುದೇ ಅವರ ಮುಖ್ಯ ಉದ್ಯೋಗವಾಗಿತ್ತು. ಅದಕ್ಕಾಗಿ ಅವರಲ್ಲಿ ಅನೇಕರಿಗೆ ಎಷ್ಟೋ ಬಾರಿ ಶಿಕ್ಷೆಯೂ ಆಗಿತ್ತು. ಅವರು ಆಗಾಗ ಬಂದು ಪೋಲೀಸು ಕಚೇರಿಯಲ್ಲಿ 'ಹಾಜರಿ' ಕೊಡಬೇಕೆಂಬ ನಿಬಂಧನೆಯೂ ಇತ್ತು. ಈಚೆಗೆ ನಡೆದ ಕಳವು ಗಳಲ್ಲೂ ಅವರ ಅಂಗವಿರಬೇಕೆಂದು ನನಗೆನ್ನಿಸುತ್ತಿತ್ತು.

"ಛೆ. ಅವರ ಕೆಲಸವಿರಲಾರದು. ನಾಲ್ಕು ವರ್ಷಗಳಿಂದ ಅವರು ಕಳವು ಮಾಡೇ ಇಲ್ಲವಲ್ಲಾ!" ಎನ್ನುತ್ತಿದ್ದರು ಕದಮ್ ಜಮಾದಾರರು.

"ಜಮಾದಾರರು ಅನ್ನುವದೇ ನಿಜವಿರಬೇಕು," ಎಂದು ಹಳಗೇರಿ ಫೌಜ ದಾರರೂ ವಾದಿಸುತ್ತಿದ್ದರು. ನನಗೆ ಮಾತ್ರ ಆ ಕೊರಚರ ಮೇಲೆಯೇ ಸಂಶಯ.

ಚಿಕ್ಕ ಪುಟ್ಟ ಸಾಮಾನುಗಳು ಕಳವಾದಾಗ ಸಾಮಾನ್ಯವಾಗಿ ಯಾರೂ ಫಿರ್ಯಾದು ಕೊಡುತ್ತಿರಲಿಲ್ಲ. ಸಾವಿರಾರು ರೂಪಾಯಿಗಳ ಮಾಲು ಕಳ

ವಾದಾಗಲಷ್ಟೆ ಫಿರ್ಯಾದು ಬರುತ್ತಿದ್ದುದು. ಐವತ್ತೋ ಅರವತ್ತೋ ರೂಪಾಯಿ ಬೆಲೆಯ ಸಾಮಾನು ಹೋದರೆ, ಹೋಗಲಿ – ಎಂದುಕೊಂಡು ತೆಪ್ಪಗಿರುತ್ತಿದ್ದವರೇ ಬಹಳ ಮಂದಿ. ಅಂಥ ಚಿಲ್ಲರೆ ಕಳವುಗಳನ್ನೂ ಲೆಕ್ಕಕ್ಕೆ ತೆಗೆದುಕೊಂಡಲ್ಲಿ ನೂರಾರು ಕಳವಿನ ಪ್ರಕರಣಗಳು ನಡೆದು ಹತ್ತಿಪ್ಪತ್ತು ಸಾವಿರ ರೂಪಾಯಿ ಬೆಲೆಯ ಮಾಲು ಕಳವಾಗಿ ಹೋಗಿರಬೇಕೆಂದು ನನ್ನ ತರ್ಕ. ಈ ಎಲ್ಲ ಪ್ರಕರಣಗಳ ಪತ್ತೆ ಮಾಡಿದಲ್ಲಿ ನನ್ನ ಹೆಸರು ಡಿ. ಎಸ್. ಪಿ. ಯವರವರೆಗೂ ಹೋಗುವುದು, ನನಗೆ ಶಿಫಾರಸು ದೊರೆಯುವುದು, ಬಡ್ತಿ ಸಿಕ್ಕುವುದು ಎಂದು ನನ್ನ ಆಸೆ.

ಹಳಗೇರಿ ಫೌಜದಾರರಿಗೆ ಮಾತ್ರ ಅಪರಾಧಗಳನ್ನು ಪತ್ತೆ ಮಾಡುವುದರ ಕಡೆಗೆ ಗಮನವೇ ಇರಲಿಲ್ಲ. ಸುಲಭವಾಗಿ, ಯಾವ ತೊಂದರೆಯೂ ಇಲ್ಲದೆ, ಹಣ ಕೀಳುವುದರ ಕಡೆಗಷ್ಟೇ ಅವರ ಲಕ್ಷ್ಯ. ಫಿರ್ಯಾದಿಗಳು ಸೂಚಿಸಿದ ಸಂಶಯಿತ ಆಸಾಮಿಗಳನ್ನು ಹಿಡಿದು ನಾಲ್ಕು ಏಟು ಹಾಕುವುದು, ಅವರಿಂದ ಮಾಲು ಸಿಗುವುದಿಲ್ಲವೆಂದು ಮನವರಿಕೆಯಾದಾಗ ನೂರಿನ್ನೂರು ರೂಪಾಯಿ ತೆಗೆದುಕೊಂಡು ಜೇಬಿಗೆ ಬಿಡುವುದು. ಫೌಜದಾರರ ನಿತ್ಯಕಾಯಕವಾಯಿತು. ಫೌಜದಾರರ ಆ ನೀತಿ ನನಗೆ ಎಷ್ಟು ಮಾತ್ರಕ್ಕೂ ಸರಿಬರುತ್ತಿರಲಿಲ್ಲ. ನಿರಪರಾಧಿಗಳಾದ ಆ ಜನರನ್ನು ಹೊಡೆಯುವ ಪ್ರಸಂಗ ಬಂದಾಗ ನಾನು ಉಪಾಯವಾಗಿ ತಪ್ಪಿಸಿಕೊಳ್ಳುತ್ತಿದ್ದೆ. ಅವರಿಂದ ಕಿತ್ತುಕೊಂಡ ಹಣದಿಂದ ಹತ್ತಿಪ್ಪತ್ತು ರೂಪಾಯಿಗಳನ್ನು ನನಗೂ ತೊಡಮಾಡುತ್ತಿದ್ದರು ಫೌಜದಾರರು. ನಾನು ಸ್ವೀಕರಿಸುತ್ತಿರಲಿಲ್ಲ. ನನ್ನ ವರ್ತನೆಯ ಅರ್ಥವೇ ಅವರಿಗಾಗಿರಲಿಲ್ಲವೋ ಏನೊ.

" ಹೀಗ್ಯಾಕೆ ಮಾಡುತ್ತೀ ಶಿವಣ್ಣಾ ?" ಎಂದು ಕೇಳಿದರು, ಒಂದು ದಿನ.

" ಏನು ಮಾಡಿದೆ?"

" ನನ್ನ ಸಂಗಡ ಸಹಕಾರ ಮಾಡುವದಿಲ್ಲವಲ್ಲಾ !"

" ಕ್ಷಮಿಸಿರಿ ರಾವ್‌ಸಾಹೇಬರೆ. ನಿರಪರಾಧಿಗಳನ್ನು ಹೊಡೆಯಲು ನನಗೆ ಮನಸ್ಸಾಗುವದಿಲ್ಲ. ಅವರ ದುಡ್ಡೂ ನನಗೆ ಬೇಡ."

ಹಳಗೇರಿಯವರು ಮುಂದೆ ಆ ವಿಚಾರ ಮಾತನಾಡಲಿಲ್ಲ. ನಾನು ನಿಷ್ಪ್ರಯೋಜಕ ಆಸಾಮಿಯೆಂದೇ ಅವರು ಭಾವಿಸಿಕೊಂಡಿರಲು ಸಾಕು.

ಹಣದ ಬಗೆಗೆ ನನಗೂ ಆಸೆಯಿರಲಿಲ್ಲವೆಂದೇನೂ ಅಲ್ಲ. ಆ ಭಾಗದ ವ್ಯಾಪಾರಿಗಳೆಲ್ಲರೂ ನನ್ನ ಸ್ನೇಹಿತರಾಗಿದ್ದರು. ನಮ್ಮ ಭಾಗಕ್ಕೆ ಹೊಂದಿಕೊಂಡೇ ಒಂದು ದೇಶೀಯ ಸಂಸ್ಥಾನವಿತ್ತು. ಸರಕಾರದ ಕಣ್ಣು ತಪ್ಪಿಸಿ, ಆ ಸಂಸ್ಥಾನದಿಂದ ರಾತ್ರಿಯ ವೇಳೆಯಲ್ಲಿ ಕಾಳು ಸಾಗಿಸಿ ತಂದು ನಮ್ಮ ಹಳ್ಳಿಗಳಲ್ಲಿ ಮಾರಾಟಮಾಡಿ ಸಾಕಷ್ಟು ಲಾಭ ಗಿಟ್ಟಿಸುತ್ತಿದ್ದರು ಆ ವ್ಯಾಪಾರಿಗಳು – ಪೋಲೀಸರಾದ ನಮ್ಮ ಕೃಪಾದೃಷ್ಟಿಯಿಲ್ಲದೆ ಅವರು ಆ ಕಳ್ಳ ವ್ಯಾಪಾರ ಮಾಡುವುದು ಸಾಧ್ಯವಿರಲಿಲ್ಲ. ಅಂತೆಯೆ, ನಾನು ಅವರ ಹತ್ತಿರ ಹೋದಾಗಲೆಲ್ಲ ಕೇಳಿದಷ್ಟು ಹಣ ಕೊಡುತ್ತಿದ್ದರು. ಫೌಜದಾರರು ಕೇಳುತ್ತಿದ್ದ "ಹರಾಮದ ಹಣ"ಕ್ಕೆ ನಾನು ಆಸೆಮಾಡುವ ಅಗತ್ಯವೇನೂ ಇರಲಿಲ್ಲ.

ನಮ್ಮ ಭಾಗದಲ್ಲಿ ನಡೆಯುತ್ತಿದ್ದ ಕಳವುಗಳ ವಿಚಾರದಿಂದಾಗಿ ಇನ್ಸ್ಪೆಕ್ಟರರಿಗೆ ಬಲು ಬೇಜಾರಾಗಿತ್ತು. ಅಪರಾಧಗಳನ್ನು ಕೂಡಲೆ ತಡೆಯಬೇಕೆಂದು ಅವರಿಗೆ ಡಿ.ಎಸ್.ಪಿ., ಡಿ.ವೈ.ಎಸ್.ಪಿ. ಯವರಿಂದ ಸೂಚನೆಗಳ ಮೇಲೆ ಸೂಚನೆಗಳು ಬರುತ್ತಿದ್ದುವು. ಅವುಗಳನ್ನು ಒಡನೆಯೇ ತಡೆಯದಿದ್ದಲ್ಲಿ ಅದೊಂದು ಸಾಂಕ್ರಾಮಿಕ ರೋಗದಂತೆ ಬೆಳೆಯಬಹುದೆಂಬ ಭೀತಿ ಅವರಿಗಿತ್ತು.

ಬಹಳ ಬೇಸರಪಟ್ಟುಕೊಂಡಿದ್ದ ಇನ್ಸ್ಪೆಕ್ಟರರು ಪರಿಸ್ಥಿತಿಯನ್ನು ಪ್ರತ್ಯಕ್ಷ ಪರಿಶೀಲಿಸಿದರೊಳ್ಳೆಯದೆಂದು ಬಗೆದು ಒಂದು ದಿನ ತೊಂಡೇಬಾವಿಗೆ ಬಂದಿಳಿದರು. ಫೌಜದಾರರನ್ನು ಕರೆಯಿಸಿ, ಅವರ ಅಭಿಪ್ರಾಯವೇನೆಂಬುದನ್ನು ತಿಳಿದುಕೊಂಡರು. ಹಳಗೇರಿಯವರ ವಾದ ಇನ್ಸ್ಪೆಕ್ಟರರಿಗೂ ಒಪ್ಪಿಗೆಯಾಗಲಿಲ್ಲ. ನನ್ನನ್ನು ಏಕಾಂತದಲ್ಲಿ ಕರೆದು ನಿಜಸ್ಥಿತಿಯನ್ನು ತಿಳಿಸಬೇಕೆಂದು ಅಪ್ಪಣೆ ಮಾಡಿದರು.

ನನ್ನ ಮನಸ್ಸಿನಲ್ಲಿದ್ದ ಸಂದೇಹಗಳೆಲ್ಲವನ್ನೂ ನಾನು ಅವರೆದುರಿಗೆ ಮುಂಡಿಸಿದೆ.

"ಕೊರಚರ ಹೊರತು ಬೇರೆ ಯಾರ ಕೆಲಸವೂ ಅಲ್ಲ ಇದು ಸಾಹೇಬರೆ."

"ಹಾಗಿದ್ದರೆ ಫೌಜದಾರರು ಅವರನ್ನೇಕೆ ಕರೆದು ಕೇಳಿಲ್ಲ?"

"ಕೊರಚರನ್ನು ಹಿಡಿದರೆ ಫೌಜದಾರರಿಗೆ ಹಣ ಎಲ್ಲಿಂದ ಸಿಕ್ಕೀತು! ಅದಕ್ಕೇ ರೊಕ್ಕ ಕೊಡಬಲ್ಲವರನ್ನು ಹಿಡಿಯುತ್ತಿದ್ದಾರೆ. ನಿಜವಾದ ಅಪರಾಧಿಗಳು ಪಾರಾಗಿ ಹೋಗುತ್ತಿದ್ದಾರೆ."

ಇನ್ಸ್‌ಪೆಕ್ಟರರು ಫೌಜದಾರರನ್ನು ಮತ್ತೆ ಕರೆದು ಅವರ ವರ್ತನೆಗಾಗಿ ಕಠೋರ ಮಾತುಗಳನ್ನಾಡಿದರು.

" ನಿಮಗೆ ರೊಕ್ಕವೊಂದು ಸಿಕ್ಕರೆ ಸಾಕೆಂದು ಕಾಣುತ್ತದೆ. ಜನ ಹಾಳಾದರೂ ನಿಮಗೆ ಚಿಂತೆಯಿಲ್ಲ. ಪೋಲೀಸ್ ಖಾತೆಯ ಮರ್ಯಾದೆ ಹಾಳಾದರೂ ನಿಮಗೆ ಚಿಂತೆಯಿಲ್ಲ. ಶಿವಣ್ಣನ ಮಾತು ಸರಿಯಾದದ್ದು. ಅವನ ಸಲಹೆ ಸೂಚನೆ ಕೇಳಿಕೊಂಡು ಹದಿನೈದು ದಿನಗಳೊಳಗಾಗಿ ಅಪರಾಧಿಗಳನ್ನೆಲ್ಲಾ ಸದೆ ಬಡಿಯದಿದ್ದರೆ ನಿಮ್ಮ ಬಗ್ಗೆ ರಿಪೋರ್ಟ್ ಮಾಡಬೇಕಾಗುವದು."

ಹಳಗೇರಿಯವರಿಗೆ ಬಹಳ ಅವಮಾನವಾದಂತಾಯಿತು. ಅವರು ಸಹಜವಾಗಿಯೇ ನನ್ನ ಮೇಲೆ ಕೋಪಿಸಿಕೊಂಡರು. ಒಂದೆರಡು ದಿನ ನನ್ನೊಡನೆ ಮಾತನ್ನೂ ಆಡಲಿಲ್ಲ.

ನಾನು ಅಂದಿನಿಂದಲೇ ಕಾರ್ಯಪ್ರವೃತ್ತನಾಗಿ, ಕೊರಚರ ಊರುಗಳ ಗೌಡರನ್ನು ಬರಮಾಡಿಕೊಂಡು, ಎಲ್ಲಾ ಕೊರಚರ ಬಗ್ಗೆ ವಿವರವಾಗಿ ವಿಷಯ ಸಂಗ್ರಹಮಾಡಿದೆ.

ಒಂದು ದಿನ ಅಪರಾಹ್ನ ನಾಲ್ಕು ಗಂಟೆಯ ವೇಳೆಗೆ ನಾನು ಸೈಕಲ್ ಹತ್ತಿ ಪೇಟೆಯತ್ತ ಹೊರಟಿದ್ದೆ. ಆ ಹಾದಿಯಲ್ಲಿ, ಊರ ಹೊರಬದಿಯಲ್ಲಿಯೆ ಸೇಂದಿಯಂಗಡಿಯಿತ್ತು. ನಾನು ಅಪರೆಮುರಿಗೆ ಹಾದು ಹೊರಟಿದ್ದಹಾಗೆ ಯಾವನೋ ಒಬ್ಬ ನನ್ನನ್ನು ಕಂಡು, " ಸಲಾಂ ಸರದಾರರೆ!" ಎನ್ನಲು ನಾನು ಅವನತ್ತ ದೃಷ್ಟಿ ತಿರುಗಿಸಿದೆ. ಪೋಲೀಸ್ ಕಚೇರಿಗೆ ಹಾಜರಿ ಕೊಡುತ್ತಿದ್ದ ಕೊರಚರಲ್ಲಿ ಅವನೂ ಒಬ್ಬ. ದಾವಣಗೆರೆಯ ದುರ್ಗ ಎಂದು ಅವನ ಹೆಸರು.

" ಏನು ದುರ್ಗಾ, ಎಲ್ಲಿ ನಡೆದಿದ್ದೀ ?"

" ಊರಿಗೆ ಹೊಂಟೇನಿ ಸರದಾರರೆ," ಎಂದು ತೊದಲುತ್ತಾ ನುಡಿದ ದುರ್ಗ. ಅವನು ವಿಪರೀತವಾಗಿ ಕುಡಿದ ಹಾಗಿತ್ತು. ಅವನೊಡನಿದ್ದ ಇಬ್ಬರು ಜೊತೆಗಾರರು ತಮ್ಮ ತಲೆಗಳ ಮೇಲೆ ಸೇಂದಿಯ ಕೊಡ ಹೊತ್ತುಕೊಂಡಿದ್ದರು.

" ಇದೆಲ್ಲಾ ಏನೋ ದುರ್ಗಾ ?"

" ನಮ್ಮ ಮನೆಯಾಗ ದೇವೀಪೂಜೆ ಐತಿರೀ. ಸಾಕಾರು ಮಂದಿಗೆ ಊಟಕ್ಕ ಹೇಳೇನಿ. ಅವರಿಗೆಲ್ಲಾ ಬೇಕು ಅಂತ ಸಿಂದೀ ತಗೊಂಡು ಹೊಂಟೇವಿ."

"ಆಯಿತಪ್ಪ. ಮಜಾ ಮಾಡಿರಿ," ಎಂದಿಷ್ಟೇ ನುಡಿದು ನಾನು ಸೈಕಲನ್ನು ಮುಂದೆ ತಳ್ಳಿದೆ. ದೇವಿಯ ಪೂಜೆಯೆಂದರೆ ಕಳವಿನ ಸಿದ್ಧತೆಯೇ ಇರಬೇಕೆಂದು ನನಗೆನ್ನಿಸಿತು. ಅಂದು ದುರ್ಗನನ್ನು ಕಂಡ ಸಂಗತಿಯನ್ನು ನನ್ನ ದಿನಚರಿಯ ಪುಸ್ತಕದಲ್ಲಿ ಉಲ್ಲೇಖಿಸಲು ಮರೆಯಲಿಲ್ಲ.

ಅಂದು ರಾತ್ರಿಯಿಡೀ ನನಗೆ ನಿದ್ರೆ ಹತ್ತಲಿಲ್ಲ. ಮರುದಿನದ ರಾತ್ರಿ ದುರ್ಗನ ಊರಿನಿಂದ ಏಳು ಮೈಲು ದೂರದಲ್ಲಿದ್ದ ಹಳ್ಳಿಯೊಂದರಲ್ಲಿ 'ಬಗಲಿ' ಪದ್ಧತಿಯ ಕಳವು ನಡೆದು ಆರೇಳು ನೂರು ರೂಪಾಯಿಗಳ ಮಾಲು ಅಪಹರಿಸಲ್ಪಟ್ಟಿದ್ದುವು. ಫಿರ್ಯಾದು ಕೈಸೇರುತ್ತಲೂ ಕದಮ್ ಜಮಾದಾರರು ಆ ಹಳ್ಳಿಗೆ ಹೋಗಿ, ಪಂಚನಾಮಾ ಜರಗಿಸಿ, ಕೆಲವರ ಹೇಳಿಕೆ ತೆಗೆದುಕೊಂಡು ಬಂದರು. ಅಪರಾಧಿಗಳ ಪತ್ತೆ ಹತ್ತಲಿಲ್ಲ.

ಮತ್ತೆ ಇನ್ಸ್‌ಪೆಕ್ಟರರಿಂದ ನಿಷ್ಠುರವಾದೊಂದು ಪತ್ರ ಬಂತು.

ಹಳಗೇರಿ ಫೌಜದಾರರು ಗಾಬರಿಗೊಂಡು ನನ್ನನ್ನು ಕರೆದು,

"ಈ ಕಳ್ಳರನ್ನು ಏನಾದರೂ ಮಾಡಿ ಮಟ್ಟಹಾಕಬೇಕಲ್ಲ ಶಿವಣ್ಣಾ!" ಎಂದರು.

"ಹೌದು, ರಾವ್‌ಸಾಹೇಬರೆ."

"ಕೊರಚರ ಬಗ್ಗೆ ನೀನು ಅಭಿಪ್ರಾಯಪಟ್ಟದ್ದು ಸರಿಯೋ ಹ್ಯಾಗೆ ನೋಡೋಣ."

"ಆಗಲಿ, ರಾವ್‌ಸಾಹೇಬರೆ."

ಅಂದು ಹಿಂದುಗಳದೊಂದು ಹಬ್ಬದ ದಿನ. ಹೆಂಗಸರೆಲ್ಲಾ ಅಂದು ಹೊಸ ಬಟ್ಟೆ ಧರಿಸಿ ಆಭರಣಗಳನ್ನಿಟ್ಟುಕೊಳ್ಳುತ್ತಾರೆ. ರಾತ್ರೆ ಆಭರಣಗಳನ್ನು ತೆಗೆದು ಮಗ್ಗುಲಲ್ಲಿರಿಸಿಯೋ, ಮೈಮೇಲೇ ಇಟ್ಟುಕೊಂಡೋ ಮಲಗಿಕೊಳ್ಳುತ್ತಾರೆ. ಮಾರನೆಯ ದಿನವೇ ಅವರು ಅವುಗಳನ್ನು ಪೆಟ್ಟಿಗೆಗಳಿಗೆ ಸೇರಿಸುವುದು. ಕಳ್ಳರೆಲ್ಲರೂ ಈ ವಿಚಾರವನ್ನು ಬಲ್ಲರು. ಈ ರಾತ್ರೆಯೇ ಕಳವುಗಳಾಗಬಹುದು, ಅವರನ್ನು ಹಿಡಿಯಲು ಇದೇ ಸರಿಯಾದ ದಿನವೆಂದು ನಾನು ಯೋಚಿಸಿದೆ. ಅಂದು ರಾತ್ರೆಯೇ ದುರ್ಗ ಸಿಕ್ಕಿದರೂ ಸಿಕ್ಕಬಹುದೆಂದು ನನಗೆನ್ನಿಸಿತು.

ಇರುಳಿನಲ್ಲಿ ಆರೇಳು ಮೈಲುಗಳಷ್ಟು ದೂರ ಹೋಗಿ ಕಳವುಮಾಡಿ, ಬೆಳಗಾಗುವುದರಲ್ಲಿ ಹಿಂದಿರುಗಿ ಬಂದು ಮನೆ ಸೇರಿಕೊಳ್ಳುವಂಥ ಗಟ್ಟಿಗರು ದುರ್ಗನ

ಊರಲ್ಲಿ ಹೆಚ್ಚು ಜನರಿರಲಿಲ್ಲವೆಂಬ ವಿಚಾರ ನನಗೂ ಗೊತ್ತಿತ್ತು. ಬೇರೆ ಊರುಗಳ ಕಳ್ಳರನ್ನು ಜತೆಮಾಡಿಕೊಂಡೇ ಅವನು ಕಳವು ಮಾಡುತ್ತಿರಬಹುದೆಂದು ನಾನು ಊಹಿಸಿದ್ದೆ. ಆ ಮೂರು ಊರುಗಳು ಮೂರು ಮೈಲುಗಳ ಅಂತರದಲ್ಲಿದ್ದುವು.

ಅಂದು ಕತ್ತಲಾಗುತ್ತಲೂ ನಾನು, ಫೌಜದಾರರು, ಇನ್ನಿಬ್ಬರು ಪೋಲೀಸರು ಸೇರಿ ಹೊರಟೆವು. ಆ ಮೂರು ಊರುಗಳ ನಡುವೆ ಇನ್ನೊಂದು ಹಳ್ಳಿ. ಅದರ ಹೊರಬದಿಯಲ್ಲೊಂದು ಗುಡಿ. ನಾವು ಅಲ್ಲಿಗೆ ಬಂದು ಬಿಡಾರ ಮಾಡಿದೆವು. ಕಳ್ಳರು ಯಾವ ಊರಿನಿಂದ ಹೊರಟರೂ ಈ ಗುಡಿಯ ಬಳಿಯಿದ್ದ ಹಾದಿಯಿಂದಲೇ ಹೋಗಬೇಕಾಗುತ್ತಿತ್ತು. ಅಂಥ ಆಯಕಟ್ಟಿನ ಸ್ಥಾನ ಅದು. ದುರ್ಗನ ಗುಂಪು ಕಳವಿಗೆ ಹೋಗಿದ್ದರೆ ಬೆಳಗಿನ ನಾಲ್ಕೈದು ಗಂಟೆಗೆ ಅವರು ತಿರುಗಿ ಬರುವಾಗ ನಮ್ಮ ಕೈಗೆ ಸಿಕ್ಕಿಬೀಳಬಹುದೆಂದು ನನಗೆನ್ನಿಸುತ್ತಿತ್ತು.

ಆ ರಾತ್ರಿಯಲ್ಲೆಲ್ಲ ನಾವು ನಿದ್ರಿಸುವಂತಿರಲಿಲ್ಲ. ಮಲಗಿಕೊಂಡುಬಿಟ್ಟರೆ ನಿದ್ರೆ ಬರಬಹುದೆಂಬ ಯೋಚನೆಯಿಂದ ಹಾಗೇ ಎಚ್ಚರವಾಗೇ ಇದ್ದೆವು. ಮಾತಾಡುವಂತೆಯೂ ಇರಲಿಲ್ಲ. ಹೊರಗಡೆ ಭಯಂಕರವಾಗಿ ಗಾಳಿ ಬೀಸುತ್ತಿತ್ತು. ಮೈ ಕೊರೆಯುವಂಥ ಚಳಿ. 'ಗ್ರೇಟ್ ಕೋಟು'ಗಳನ್ನು ಬಿಗಿಯಾಗಿ ಹೊದೆದುಕೊಂಡಿದ್ದರೂ ಚಳಿಯಿಂದ ಪಾರಾಗಲು ಶಕ್ಯವಾಗಿರಲಿಲ್ಲ. ಹಲ್ಲು ಮುಡಿ ಕಚ್ಚಿ ಕಟಕಟ ನಡುಗುತ್ತಾ ಕುಳಿತುಕೊಂಡೆವು. ಸಿಗರೇಟು ಸೇದುವ ಹಾಗೂ ಇರಲಿಲ್ಲ.

ಮೂರು ಗಂಟೆಯುವರೆಗೆ ಗುಡಿಯಲ್ಲೇ ಕುಳಿತಿದ್ದು ಅನಂತರ ಹೊರಬಿದ್ದು ಹಾದಿಯ ಮೇಲೆ ಬಂದು ನಾಲ್ವರು ನಾಲ್ಕು ಸ್ಥಳಗಳಲ್ಲಿ ಕಂಟಿಗಳ ಮರೆಯಲ್ಲಿ ಅವಿತು ಕುಳಿತಿದ್ದೆವು. ನಾಲ್ಕು ಗಂಟೆ. ನಾಲ್ಕೂವರೆ. ಯಾರ ಸುಳಿವೂ ಇಲ್ಲ. ನನಗೆ ಬಲು ಬೇಸರವಾಗಿತ್ತು.

ಐದೂವರೆ ಗಂಟೆಯ ಸಮಯಕ್ಕೆ ದೂರದಿಂದ ಹೆಜ್ಜೆಗಳ ಸದ್ದು ಕೇಳಬಂದಿತು. ನಾನು ಬಂದೂಕು ಸಿದ್ಧಗೊಳಿಸಿದೆ. ಫೌಜದಾರರು ತಮ್ಮ ಪಿಸ್ತೂಲು ಅಣಿಗೊಳಿಸಿದರು. ಪೋಲೀಸರು ತಮ್ಮ ಲಾಠಿಗಳನ್ನು ಬಿಗಿಯಾಗಿ ಹಿಡಿದುಕೊಂಡರು.

ಎದುರಿನಿಂದ ಮೂರು ಜನರು ಲಗುಬಗೆಯಿಂದ ನಡೆದುಬರುತ್ತಿದ್ದುದು

ಕಾಣಿಸಿತು. ಬೆಳಗಾಗುವುದರೊಳಗಾಗಿ ಮನೆ ಸೇರಿಕೊಳ್ಳಬೇಕಾಗಿದ್ದುದೇ ಆ ಅವಸರಕ್ಕೆ ಕಾರಣವಾಗಿತ್ತು.

ಅವರು ನಮ್ಮ ಸಮೀಪದಲ್ಲಿ ಬರುತ್ತಲೂ ಫೌಜದಾರರು, "ಅಟ್ಯಾಕ್." ಎಂದು ಆಜ್ಞೆ ಮಾಡಿದರು. ನಾವು ಮೂವರೂ ಹುಲಿಗಳಂತೆ ಹಾರಿ, ಕಳ್ಳರನ್ನು ಹಿಡಿದು ಕೈಗೆ ತೋಳ ಬಿಗಿದು ಗುಡಿಗೆ ಸಾಗಿಸಿದೆವು. ಸಿಕ್ಕಿಬಿದ್ದವರಲ್ಲಿ ದುರ್ಗನೂ ಒಬ್ಬನಾಗಿದ್ದ.

ಬೆಳಕು ಹರಿದಿತ್ತು ಅಷ್ಟರಲ್ಲಿ.

ಕಳ್ಳರು ಹೊತ್ತು ತಂದಿದ್ದ ಗಂಟುಗಳನ್ನು ಬಿಚ್ಚಿ ನೋಡಿದೆವು. ಅವುಗಳಲ್ಲಿ ಆಭರಣಗಳೇನೂ ಇರಲಿಲ್ಲ. ಅರಿವೆ ಅಂಚಡಿ, ಸೀರೆ ಕುಬುಸ, ಧೋತರ ಮೊದಲಾದ ಬಟ್ಟೆಗಳಿದ್ದುವಷ್ಟೆ.

ಕಳ್ಳರ ಅಂಗಿಗಳನ್ನು ತೆಗೆಯಿಸಿ ಶೋಧಿಸಿದೆವು. ಅವರ ಮೈಮೇಲೂ ಏನೂ ಸಿಕ್ಕಲಿಲ್ಲ.

"ಈ ಅರಿವೆಗಳನ್ನೆಲ್ಲ ಎಲ್ಲಿಂದ ತಂದೆ ದುರ್ಗಾ?"

ರಾತ್ರೆ ಯಥೇಚ್ಛವಾಗಿ ಸೇಂದಿ ಸೇವಿಸಿದ್ದ ದುರ್ಗನ ಕಣ್ಣುಗಳೆರಡೂ ಕೆಂಪಗೆ ಬೆಂಕಿಯಂತಾಗಿದ್ದುವು. ಅವನು ಕೊಂಚವೂ ಅಪ್ರತಿಭನಾಗದೆ ಗಂಭೀರವಾಗಿಯೇ ಉತ್ತರವಿತ್ತ:

"ನಾವೇನು ಇವನ್ನು ಕದ್ದು ತಂದಿಲ್ಲರಿ. ಹಬ್ಬದ ಖುಷಿ ಅಂತ ರೈತರು ನಮಗ ಕೊಟ್ಟಿದ್ದಾರ."

ಮೂವರನ್ನೂ ಕಂಬಗಳಿಗೆ ಕಟ್ಟಿ, ಪೋಲೀಸರನ್ನು ಕಾವಲಿಗಿರಿಸಿ ನಾನೂ ಫೌಜದಾರರೂ ದುರ್ಗನ ಊರಿಗೆ ಬಂದು ಅವನ ಮನೆಯನ್ನೂ ಇನ್ನಿತರ ಕೊರಚರ ಮನೆಗಳನ್ನೂ ಶೋಧಿಸಿ ಸಂಶಯಾಸ್ಪದವಾದ ಬಟ್ಟೆ ಬರೆಗಳನ್ನೂ ಬೆಳ್ಳಿ ಬಂಗಾರದ ಸಾಮಾನುಗಳನ್ನೂ ಜಪ್ತಮಾಡಿ, ಕರಿಯನೆಂಬ ಕೇಡಿಯನ್ನು ಬಂಧಿಸಿ, ಗೌಡ ಓಲೇಕಾರರ ಸಹಾಯದಿಂದ ಅವನನ್ನೂ ಜಪ್ತಿ ಮಾಡಿದ ಸಾಮಾನುಗಳನ್ನೂ ಗುಡಿಗೆ ಸಾಗಿಸಿ, ಕಂಬಕ್ಕೆ ಕಟ್ಟಿದ್ದ ಮೂವರನ್ನೂ ಕರೆದುಕೊಂಡು ಕಚೇರಿಗೆ ಬಂದೆವು.

ನಾನು ಕೊಂಚವೂ ತಡಮಾಡದೆ ನಮ್ಮ ಇನ್ಸ್‌ಪೆಕ್ಟರರಿದ್ದ ಊರಿಗೆ

ಹೋಗಿ, ಕಳ್ಳರನ್ನು ಬಂಧಿಸಿದ ಸಂಗತಿಯನ್ನೆಲ್ಲ ತಿಳಿಸುತ್ತಲೂ ಅವರು ಸಂತೋಷ ದಿಂದ ನನ್ನ ಬೆನ್ನು ಚಪ್ಪರಿಸಿದರು.

"ಇದೆಲ್ಲಾ ದುರ್ಗನ ಗುಂಪಿನದೇ ಕೆಲಸ ಅಂತ ನನಗೆ ಆಗಲೇ ಅನ್ನಿಸಿತ್ತು. ಡೈರಿಯಲ್ಲಿ ಬರೆದೂ ಇಟ್ಟಿದ್ದೆ," ಎಂದು ಹೇಳಿ ನನ್ನ ದಿನಚರಿಯನ್ನು ಅವರಿಗೆ ತೋರಿಸಿದೆ.

ಸಾಹೇಬರು ಬಹಳ ಸಂತುಷ್ಟರಾದರು.

"ಎಲ್ಲವನ್ನೂ ಬಯಲಿಗೆಳೆದು ಬಿಡಬೇಕು ಶಿವಣ್ಣಾ. ಅವಶ್ಯವೆನಿಸಿದರೆ ನಾನೂ ಬರುತ್ತೇನೆ." ಎಂದು ಹೇಳಿದರು.

ನಾನು ಇನ್ಸ್‌ಪೆಕ್ಟರರಲ್ಲಿಗೆ ಬಂದ ಸಂಗತಿ ಹಳಗೇರಿ ಫೌಜದಾರರಿಗೆ ಗೊತ್ತಿರಲಿಲ್ಲ. ಆ ರಾತ್ರೆಯೇ ನಾನು ತೊಂಡೇಬಾವಿಗೆ ಮರಳಿಬಂದೆ.

ದುರ್ಗನ ಊರಿನಿಂದ ಆರು ಮೈಲುಗಳ ಅಂತರದಲ್ಲಿದ್ದ ಒಂದು ಹಳ್ಳಿಯ ಮೂರು ಮನೆಗಳಲ್ಲಿ ಕಳವಾಗಿದ್ದುದರ ಫಿರ್ಯಾದು ಬಂತು. ಆ ಊರಿನ ಪ್ರಾಥಮಿಕ ಶಾಲೆಯ ಬಡ ಉಪಾಧ್ಯಾಯನ ಮನೆಗೂ ಕನ್ನ ಬಿದ್ದಿತ್ತು. ಆ ಬಡಪಾಯಿ ತನ್ನದೆಲ್ಲವನ್ನೂ ಕಳೆದುಕೊಂಡಿದ್ದ. ಅವರು ಕಚೇರಿಗೆ ಬಂದು, ನಾವು ಜಪ್ತುಮಾಡಿ ತಂದಿದ್ದ ಸಾಮಾನುಗಳನ್ನು ನೋಡಿ, ಕೆಲವು ಬಟ್ಟೆಗಳು ತಮ್ಮವೆಂದು ಗುರುತಿಸಿದರು. ಆ ಮೂರು ಜನರ ಮನೆಗಳಲ್ಲಿ ಸುಮಾರು ಹದಿನೈದು ನೂರು ರೂಪಾಯಿ ಬೆಲೆಯ ಆಭರಣಗಳು ಕಳವಾಗಿದ್ದುವು. ನಾವು ಜಪ್ತು ಮಾಡಿದ ಆಭರಣಗಳು ಇವರವಾಗಿರಲಿಲ್ಲ.

ಆ ರಾತ್ರೆಯೇ ಇನ್ನುಳಿದ ಎರಡು ಹಳ್ಳಿಗಳ ಕೊರಚರ ಮನೆಗಳನ್ನೆಲ್ಲ ಶೋಧಿಸಬೇಕೆಂದು ನಾನು ಸೂಚಿಸಿದೆ. ಫೌಜದಾರರಿಗೆ ಮಾತ್ರ ಮನೆ ಬಿಟ್ಟು ಹೊರಡುವ ಇಚ್ಛೆಯಿರಲಿಲ್ಲ. ಹಿಂದಿನ ರಾತ್ರೆಯಿಡೀ ಜಾಗರಣೆಯಾದುದರಿಂದ ಅವರು ಆಯಾಸಗೊಂಡಿದ್ದರು. ಅಲ್ಲದೆ, ಆಗತಾನೆ ಮಳೆ ಬೇರೆ ಸುರಿಯ ತೊಡಗಿತ್ತು.

"ಇದೊಂದು ರಾತ್ರೆ ವಿಶ್ರಾಂತಿ ತೆಗೆದುಕೊಂಡು ನಾಳೆ ಹೋದರಾಯಿತು," ಎಂದರು ಫೌಜದಾರರು.

"ಅಷ್ಟರೊಳಗಾಗಿ ಆ ಮಾಲು ಬೇರೆ ಕಡೆ ಹೊರಟುಹೋಗುವದು

ಖಂಡಿತ. ನಾವು ಈಗಾಗಲೇ ತಡ ಮಾಡಿದ್ದೇವೆ. ಇನ್ನೂ ತಡ ಮಾಡಬಾರದು," ಎಂದು ನಾನು ವಾದಿಸಿದೆ.

"ಛೆ. ಛೆ. ಸಾಧ್ಯವೇ ಇಲ್ಲ. ನನಗೆ ಬಹಳ ತ್ರಾಸವಾಗಿದೆ," ಎಂದರು ಫೌಜದಾರರು.

ನಾನು ಬಸವನಗೌಡರಿಗೆ ಪತ್ರ ಕಳಿಸಿ ಹತ್ತಿಪ್ಪತ್ತು ಮಂದಿ ಗಟ್ಟಿಗರಾದ ಓಲೇಕಾರರನ್ನು ಸಹಾಯಕ್ಕಾಗಿ ಕರೆಯಿಸಿಕೊಂಡೆ. ಫೌಜದಾರರು ಬರದಿದ್ದರೂ ಚಿಂತೆಯಿಲ್ಲ. ನಾವೇ ಹೋಗುವದೆಂದು ನಿರ್ಧರಿಸಿದೆವು.

ಕದಮ್ ಜಮಾದಾರರೂ ನನ್ನೊಡನೆ ಬರಲು ಸಿದ್ಧರಾದರು. ಕೆಲವರು ಓಲೇಕಾರರನ್ನು ಜತೆಗೆ ಕರೆದುಕೊಂಡು ಒಂದು ಹಳ್ಳಿಯನ್ನು ಅವರು ಮುತ್ತುವುದೆಂದೂ ಇನ್ನೊಂದು ಹಳ್ಳಿಯನ್ನು ನಾನು ಮುತ್ತುವುದೆಂದೂ ಗೊತ್ತಾಯಿತು.

ಮಧ್ಯರಾತ್ರಿಯ ವೇಳೆಗೆ ಕಚೇರಿಯಿಂದ ಹೊರಟು, ಮಳೆಯಲ್ಲೇ ಹಾದಿ ತುಳಿಯುತ್ತಾ ಬ್ಯಾಟ್ರಿಗಳ ಬೆಳಕಿನಲ್ಲಿ ಆ ಊರುಗಳಿಗೆ ಬಂದುದಾಯಿತು. ಕೊರಚರು ವಾಸವಾಗಿದ್ದ ಭಾಗಕ್ಕೆ ಮುತ್ತಿಗೆ ಹಾಕಿ ಬೆಳಗಿನವರೆಗೆ ಕಾದು ಕುಳಿತುದಾಯಿತು. ಮೂಡಲಲ್ಲಿ ಬೆಳಕಿನ ಲಕ್ಷಣ ಕಾಣಿಸುತ್ತಲೂ ಕೊರಚರ ಮನೆಗಳಲ್ಲಿ ಚಟುವಟಿಕೆ ಕಂಡು ಬರತೊಡಗಿತು. ಕೈಯಲ್ಲಿದ್ದ ಬಂದೂಕವನ್ನೆತ್ತಿ ನಾನು ಗಾಳಿಯಲ್ಲಿ ಗುಂಡು ಹಾರಿಸಿದೆ. ಅದರ ಸದ್ದಿಗೆ ಊರೆಲ್ಲವೂ ಎಚ್ಚತ್ತುಕೊಂಡಿತು. ಗೌಡರೂ ಓಲೇಕಾರರೂ ಓಡುತ್ತ ಬಂದು ನಮ್ಮನ್ನು ಕೂಡಿಕೊಂಡರು. ಕೊರಚರಾರೂ ಕೇರಿ ಬಿಟ್ಟು ಹೋಗದಂತೆ ಭದ್ರವಾದ ಕಾವಲು ಇರಿಸಿ ಮನೆಗಳಲ್ಲಿ ಹೊಕ್ಕು ಜನರನ್ನೆಲ್ಲ ಹೊರಗಡೆ ಸಾಗಿಸಿ ಒಂದು ಕಡೆ ಕೂಡಿಸಿದೆವು. ಮನೆಗಳನ್ನು ಶೋಧಿಸುವುದಕ್ಕಾರಂಭವಾಯಿತು. ವಸ್ತು ಒಡವೆಗಳು, ಜರಿಯ ರೇಶಿಮೆಯ ಬಟ್ಟೆಗಳು ಎಲ್ಲವನ್ನೂ ಜಪ್ತು ಮಾಡಲಾಯಿತು. ಆ ಊರಿನವರಲ್ಲದವರಿಬ್ಬರು ಅಲ್ಲಿ ಸಿಕ್ಕಿದರು. ಅವರಿಗೆ ಕೈಬೇಡಿ ಹಾಕಲಾಯಿತು. ಸುಮಾರು ಎರಡುಸಾವಿರ ರೂಪಾಯಿ ಬೆಲೆಯ ಮಾಲು ಅಲ್ಲಿ ಸಿಕ್ಕಿತು.

ಇನ್ನೊಂದು ಊರಿಗೆ ಹೋಗಿದ್ದ ಕದಮ್ ಜಮಾದಾರರು ಇನ್ನೂ ಹೆಚ್ಚು ಬೆಲೆಯ ಮಾಲು ಜಪ್ತು ಮಾಡಿದ್ದರು. ಬೇರೂರಿನ ಒಬ್ಬ ಕೊರಚನನ್ನೂ ಆ ಊರಿನ ಹತ್ತು ಜನರನ್ನು ಬಂಧಿಸಿ ಹಾದಿಯ ಮೇಲಿನ ಗುಡಿಗೆ

ಕರೆದು ತಂದು ನನಗಾಗಿ ಕಾದಿದ್ದರು. ನಾನು ಜಪ್ತುಮಾಡಿದ್ದ ಸಾಮಾನು ಗಳನ್ನು ಗಂಟುಕಟ್ಟಿ, ನಾಲ್ಕೈದು ಜನ ಕೊರಚರನ್ನು ಬಂಧಿಸಿ ಗುಡಿಗೆ ಬಂದೆ. ಕೊರಚರನ್ನೆಲ್ಲ ಸಾಲಾಗಿ ನಿಲ್ಲಿಸಿ ಅವರ ತೋಳುಗಳಿಗೆ ಹಗ್ಗ ಬಿಗಿದು ಕಚೇರಿಯ ಕಡೆಗೆ ಹೊರಡುವುದರಲ್ಲಿದ್ದ ಹಾಗೆ ಫೌಜದಾರರ ಸವಾರಿ ಆಗಮಿಸಿತು. ಬೆಳಿಗ್ಗೆ ಎದ್ದು ಯಥೇಚ್ಛವಾಗಿ ತಿಂದು ಹೊಟ್ಟೆ ತುಂಬಿಸಿಕೊಂಡೇ ಬಂದ ಹಾಗಿತ್ತು. ನಮಗೆ ಮಾತ್ರ ನಿದ್ರೆಯೂ ಇರಲಿಲ್ಲ, ಒಂದು ಕಪ್ ಚಹವೂ ದೊರೆತಿರಲಿಲ್ಲ. ನಾವು ಅಷ್ಟು ಕಷ್ಟಪಟ್ಟು ಕಳವಿನ ಮಾಲು ಶೋಧಿಸಿದ್ದುದರ ಶ್ರೇಯಸ್ಸನ್ನೆಲ್ಲ ತಾವೇ ಪಡೆಯಲೆಂದು ಅವರು ಬಂದ ಹಾಗಿತ್ತು. ನಾವು ತಯಾರಿಸಿದ್ದ ಪಂಚ ನಾಮೆಗಳ ಮೇಲೆ ಅವರು ಸಹಿ ಹಾಕಿದರಾಯಿತು, ಪಂಚನಾಮೆ ನಡೆದಾಗ ಅವರೂ ಅಲ್ಲಿಯೇ ಇದ್ದ ಹಾಗಾಗುತ್ತಿತ್ತು.

ಹಗ್ಗ ಬಿಗಿದ ಕೊರಚರನ್ನು ಹೊರಡಿಸಿಕೊಂಡು ಕಚೇರಿಯತ್ತ ಸಾಗಿದೆವು. ಫೌಜದಾರರು ಎಲ್ಲರಿಗೂ ಮುಂದೆ ಸೇನಾನಿಯಂತೆ ಎದೆಯುಬ್ಬಿಸಿಕೊಂಡು ಹೊರಟಿದ್ದರು. ನಾವು ಮಾತ್ರ ಬಳಲಿದ ಮುಖಗಳನ್ನು ಹೊತ್ತು ಕೊರಚರ ಹಿಂದಿನಿಂದ ಯುದ್ಧಕೈದಿಗಳಂತೆ ನಡೆದಿದ್ದೆವು. ಜಪ್ತಾದ ಮಾಲಿನ ಗಂಟು ಗಳನ್ನು ಹೊತ್ತು ಓಲೇಕಾರರು ಹೊರಟಿದ್ದರು. ತೊಂಡೇಬಾವಿಯ ಬೀದಿಗಳಲ್ಲಿ ಈ ನಮ್ಮ ಮೆರವಣಿಗೆ ಹೊರಟಾಗ ಊರಿನ ಜನರೆಲ್ಲಾ ನೆರೆದು ಕೌತುಕದಿಂದ ಅದನ್ನು ವೀಕ್ಷಿಸಿದರು. ಸರ್ಕಸ್ ಕಂಪೆನಿಯ ಆನೆ, ಕುದುರೆ, ಹುಲಿಗಳು ಪ್ರಚಾರಕ್ಕೆಂದು ಹೊರಟಾಗ ಅವುಗಳನ್ನು ನೋಡುವ ಹಾಗೆ ಜನ ನಮ್ಮನ್ನು ನೋಡುತ್ತಿದ್ದರು. ಕಳ್ಳರ ಹಾವಳಿಯಿಂದಾಗಿ ಸಂತ್ರಸ್ತರಾಗಿದ್ದ ಜನರಿಗೆ ಕೊಂಚ ಸಮಾಧಾನವೂ ಉಂಟಾಗಿತ್ತು.

ಕಚೇರಿಗೆ ತಲಪಿ, ಕಳ್ಳರನ್ನು ಲಾಕಪ್ಪಿಗೆ ದೂಡಿದುದಾಯಿತು.

ಸ್ನಾನ ಮುಗಿಸಿ, ಒಂದೆರಡು ಗಂಟೆ ವಿರಮಿಸಿಕೊಂಡ ತರುವಾಯ ಮುಂದಿನ ಕೆಲಸಕ್ಕಾರಂಭವಾಯಿತು.

ಈ ಹಿಂದೆ ಫಿರ್ಯಾದು ಕೊಟ್ಟವರನ್ನು ಕರೆಯಿಸಿದೆವು. ನಾವು ಜಪ್ತು ಮಾಡಿ ತಂದ ಮಾಲಿನಲ್ಲಿ ತಮ್ಮ ತಮ್ಮ ಬಟ್ಟೆ ಬರೆಗಳನ್ನೂ ಪಾತ್ರೆ ಪಡಗ ಗಳನ್ನೂ ಅವರು ಗುರುತಿಸಿದರು. ಆದರೆ, ಅವರ ಬೆಳ್ಳಿ ಬಂಗಾರದ ಆಭರಣ

ಗಳು ಮಾತ್ರ ನಮಗೆ ಸಿಕ್ಕಿರಲಿಲ್ಲ. ಅವುಗಳನ್ನೂ ಕೂಡಾ ಅದೇ ಗುಂಪಿನವರೇ ಕಳವು ಮಾಡಿದ್ದುದು ಸ್ಪಷ್ಟವೇ ಇತ್ತು. ಇನ್ನು ಆ ಒಡವೆಗಳನ್ನೂ ಪತ್ತೆ ಮಾಡುವ ಕೆಲಸವೊಂದು ಬಾಕಿಯಿತ್ತು.

ಒಬ್ಬೊಬ್ಬ ಕೊರಚನನ್ನೇ ಕರೆದು ವಿಚಾರಿಸಿದೆವು. ಅವರು ಬಾಯಿ ತೆರೆಯಲಿಲ್ಲ. ಅವರ ಮೇಲೆ 'ಭರಮಪ್ಪ'ನನ್ನೂ ಪ್ರಯೋಗಿಸಲಾಯಿತು. ಕೊರಚರೆಂದರೆ ಬಲು ಗಟ್ಟಿಗರು. ಜೀವ ಹೋಗುವ ಪ್ರಸಂಗ ಬಂದರೂ ಬಾಯಿ ಬಿಚ್ಚದಂಥವರು.

ಫೌಜದಾರರು ಬೇಸರಗೊಂಡು ತಲೆ ಕೆರೆದುಕೊಳ್ಳತೊಡಗಿದರು. ಏನಾದ ರೊಂದು ಉಪಾಯ ಯೋಚಿಸಿ ಕೊರಚರ ಬಾಯಿ ಬಿಚ್ಚಿಸುವುದು ಅಗತ್ಯ ವಾಗಿತ್ತು.

ಕೊನೆಗೆ ಒಂದು ಉಪಾಯ ಹೊಳೆಯಿತು. ಕೊರಚರ ಪೈಕಿ ಸಣ್ಣ ದುರ್ಗ ಎಂಬ ಹದಿನೆಂಟು ವರ್ಷದ ಯುವಕನನ್ನು ಸೆರೆಯಂಗಡಿಗೆ ಕರೆದು ತಂದು ಅವನಿಗೆ ಸೆರೆ ಕೊಡುವಂತೆ ಅಂಗಡಿಯವನಿಗೆ ಹೇಳಿದೆ. ಸಣ್ಣದುರ್ಗ ಮಾತ್ರ ಸೆರೆಯನ್ನು ಮುಟ್ಟಲಿಲ್ಲ. ಕುಡಿಯಬೇಕೆಂಬ ಬಯಕೆಯೇನೋ ಅವನಿ ಗಿದ್ದಿತಾದರೂ, ಕುಡಿತದ ಅಮಲಿನಲ್ಲಿ ಗುಪ್ತ ಸಂಗತಿಗಳನ್ನು ತಾನು ಹೇಳಿ ಬಿಡಬಹುದೆಂಬ ಹೆದರಿಕೆಯಿಂದ ಅವನು ಸುಮ್ಮನಿದ್ದ.

"ಕುಡಿದುಬಿಡೋ. ಹೊಡೆತ ತಿಂದು ಮೈಯೆಲ್ಲಾ ನೋವಾಗಿರಬೇಕು ನಿನಗೆ. ಸೆರೆ ಕುಡಿದರೆ ಸ್ವಲ್ಪ ಹುಷಾರಾಗುತ್ತದೆ," ಎಂದು ಹೇಳಿ ಬಲವಂತ ದಿಂದಲೇ ಅವನಿಗೆ ಸೆರೆ ಕುಡಿಸಿದೆ.

ಮದ್ಯದ ಪ್ರಭಾವ ಬಲು ವಿಲಕ್ಷಣವಾದುದು. ಸ್ವಲ್ಪ ಸೇವಿಸಿದರಾಯಿತು, ಇನ್ನೂ ಬೇಕು ಎನ್ನಿಸುತ್ತದೆ. ಸಣ್ಣದುರ್ಗನಿಗಾದದೂ ಹಾಗೇ. ಎದುರಿಗೆ ಪೀಪಾಯಿ ತುಂಬಾ ಸೆರೆಯಿತ್ತು. ಅದಕ್ಕೆ ಅವನು ಹಣವನ್ನೂ ಕೊಡುವ ಅವಶ್ಯಕತೆಯಿರಲಿಲ್ಲವಲ್ಲ. ಬಿಟ್ಟಿ ಸೆರೆ ಕುಡಿಯಲು ಯಾರ ಗಂಟೇನು ಹೋಗುತ್ತದೆ! ಸಣ್ಣದುರ್ಗ ಕುಡಿದ, ಕುಡಿದೇ ಕುಡಿದ, ಎರಡು ಸೀಸೆಗಳಷ್ಟು ಸೆರೆ ಹೊಟ್ಟೆಗೆ ಹೋಯಿತು.

"ಅಮಲಾಯಿತೇನೋ ಸಣ್ಣದುರ್ಗಾ?"

"ಇಲ್ಲರೀ. ನಮಗ್ಯಾಕ ಅಮಲಾದೀತು?"

ಕುಡುಕರೆಲ್ಲ ಹಾಗೇ. ಚರಂಡಿಯಲ್ಲಿ ಬೀಳುವಷ್ಟು ಕುಡಿದಿದ್ದರೂ ತಮಗೆ ಅಮಲು ಏರಿಯೇ ಇಲ್ಲವೆಂದು ಅವರು ಭಾವಿಸಿಕೊಂಡಿರುತ್ತಾರೆ.

ಅವನ ತೋಳು ಹಿಡಿದೆಬ್ಬಿಸಿ ಕರೆದುಕೊಂಡು ನಮ್ಮ ಕಚೇರಿಯ ಸಮೀಪದಲ್ಲಿದ್ದ ಒಂದು ಹೊಲಕ್ಕೆ ಬಂದೆ. ಸಣ್ಣ ದುರ್ಗ ನನ್ನ ಗುಣಗಾನಕ್ಕಾರಂಭಿಸಿದ್ದ.

"ನೀವು ಭೋ ದೊಡ್ಡವರು ಸರದಾರರೆ. ನನ್ನಮ್ಯಾಲ ಬಹಳ ಉಪಕಾರ ಮಾಡಿದಿರಿ. ನಾನೀಗ ಸ್ವರ್ಗ ಕಂಡಾಂಗ ಅನಿಸುತೈತಿ," ಎಂದು ತೊದಲಿದ ಸಣ್ಣ ದುರ್ಗ.

"ನೀನು ಸಂತೋಷವಾಗಿದ್ದರಾಯಿತಪ್ಪಾ," ಎಂದೆ ನಾನು. "ನೋಡು, ಸಣ್ಣದುರ್ಗ. ನಿನ್ನ ಮೇಲೆ ನನಗೆ ಇಷ್ಟು ನಂಬಿಕೆಯಿದ್ದರೂ ನೀನು ಮಾತ್ರ ನನ್ನನ್ನು ನಂಬಲೊಲ್ಲೆ. ನನ್ನಿಂದ ಎಲ್ಲಾ ಬಚ್ಚಿಡುತ್ತಿರುವಿ ದುರ್ಗನ ಮಾತು ಕೇಳಿ ನೀನೂ ಕಳವು ಮಾಡಿದಿ. ಈಗ ಅವನು ನಿನ್ನ ಹೆಸರು ಹೇಳಿ ತಾನು ಪಾರಾಗುತ್ತಿದ್ದಾನೆ. ಅವನನ್ನು ನಂಬಿ ನೀನು ಜೇಲಿಗೆ ಹೋಗಿ ಬೀಳುವಿ."

"ಹಾಂ? ನನ್ನ ಹೆಸರು ಹೇಳ್ತಾನೇ ಅವಾ?"

ವಾಸ್ತವವಾಗಿ ದುರ್ಗ ಹಾಗೆ ಹೇಳಿರಲಿಲ್ಲ. ಸಣ್ಣದುರ್ಗನೆದುರಿಗೆ ಸುಳ್ಳು ಹೇಳಲು ನನಗೆ ಇಷ್ಟವಿರಲಿಲ್ಲವಾದರೂ, ಅವನ ಬಗೆಗೂ ದುರ್ಗನ ಬಗೆಗೂ ಒಳಗೊಳಗೇ ನನಗೆ ಕನಿಕರವಿದ್ದಿತಾದರೂ ಆ ಮಾನವೀಯ ಭಾವನೆಗಳೆಲ್ಲವನ್ನೂ ಹತ್ತಿಕ್ಕಿಕೊಂಡು ನಾನಾಗ ಪೋಲೀಸ್ ಕೆಲಸ ಮಾಡಬೇಕಾಗಿತ್ತು. ಸುಳ್ಳು ಹೇಳಿ, ಮೋಸಮಾಡಿ, ಹೇಗಾದರೂ ಮಾಡಿ ನಾನು ಅವನ ಅಂತರಂಗದಲ್ಲಿನ ರಹಸ್ಯಗಳನ್ನು ಬಯಲಿಗೆಳೆಯಬೇಕಾಗಿತ್ತು.

"ದುರ್ಗ ನನಗ ಹೀಂಗ ಕೈಕೊಟ್ಟಾನಂತ ನನಗನಿಸಿರಲಿಲ್ಲರೀ ಸರದಾರರೇ. ನನಗ ತಿಳಿಯಲಿಲ್ಲ. ತಪ್ಪು ಮಾಡಿದಿನಿ. ಏನಾದರೂ ಮಾಡಿ ನನ್ನ ಉಳಿಸಿರಿ. ಜೇಲಿಗೆ ಹಾಕಬೇಡಿರಿ," ಎಂದು ಅಳುತ್ತಾ ನನ್ನ ಕಾಲುಗಳನ್ನು ಹಿಡಿದುಕೊಂಡ ಸಣ್ಣದುರ್ಗ.

"ಬಿಡು ಬಿಡು ಸಣ್ಣದುರ್ಗ! ಇಷ್ಟಕ್ಕೆಲ್ಲಾ ಕಣ್ಣೀರು ಹಾಕ್ತಾರೇನು! ನಾನಿರುವಾಗ ನಿನಗೇನು ಭಯ!"

"ನೀವೇ ನನ್ನ ಪಾಲಿನ ದೇವ್ರು. ನನ್ನ ಉಳಿಸಿರಿ. ನನ್ನ ಉಳಿಸಿರಿ."

"ನಿನ್ನ ದೇವರಾಣೆ, ಶಿರ್ಶಿ ಮಾರಮ್ಮನಾಣೆ, ಸಣ್ಣದುರ್ಗ. ನಿನ್ನನ್ನುಳಿಸು

ತ್ತೀನಿ, ನಿನ್ನ ಕೂದಲೆಳೆಗೆ ಧಕ್ಕೆಯಾಗದಂತೆ ನೋಡಿಕೊಳ್ಳುತ್ತೀನಿ," ಎಂದು ಅವನಿಗೆ ಆಶ್ವಾಸನವಿತ್ತು ಕದಮ್ ಜಮಾದಾರರನ್ನು ಕೂಗಿ ಕರೆದೆ.

"ನೋಡು, ಜಮಾದಾರ್ ಸಾಹೇಬರೂ ಬಂದಿದಾರೆ. ನಮ್ಮ ಸಣ್ಣ ದುರ್ಗ ಎಲ್ಲಾ ಹೇಳಿಬಿಡುತ್ತಾನೆ. ಅವನನ್ನು ಜೇಲಿಗೆ ಹಾಕಬೇಡಿರಿ."

"ಇಲ್ಲ. ಇಲ್ಲ. ಇವನನ್ಯಾಕೆ ಜೇಲಿಗೆ ಹಾಕುವದು? ದುರ್ಗನನ್ನೇ ಹಾಕೋಣ," ಎಂದರು ಜಮಾದಾರರು.

ಅವರ ಮನೆಯಿಂದ ನಾಲ್ಕು ರೊಟ್ಟಿಗಳನ್ನೂ ಪಲ್ಯವನ್ನೂ ಬೆಣ್ಣೆಯನ್ನೂ ತರಿಸಿ ಸಣ್ಣದುರ್ಗನಿಗೆ ಕೊಟ್ಟೆವು. ಅದನ್ನು ತಿಂದು ಮುಗಿಸಿ ಅವನು ಹೇಳ ತೊಡಗಿದ. ನಾವು ಟಿಪ್ಪಣಿ ಮಾಡಿಕೊಳ್ಳತೊಡಗಿದೆವು.

....ಅವರ ಗುಂಪು ಅದುವರೆಗೆ ಸುಮಾರು ೪೬ ಕನ್ನ - ಕಳವು ಮಾಡಿತ್ತು. ಕೆಲವೆಡೆಗಳಲ್ಲಿ ಏನೂ ಸಿಕ್ಕಿರಲಿಲ್ಲ. ಕೆಲವೆಡೆಗಳಲ್ಲಿ ಸಾಕಷ್ಟು ಸಿಕ್ಕಿತ್ತು. ನಮ್ಮಲ್ಲಿ ದಾಖಲೆಯಾಗಿದ್ದ ಇಪ್ಪತ್ತು ಅಪರಾಧಗಳಲ್ಲಿಯ ಬಂಗಾರದ ಮಾಲು ದುರ್ಗನ ಹತ್ತಿರವಿದ್ದು, ಅದನ್ನು ಆತ ತನ್ನ ಹಿತ್ತಿಲಲ್ಲಿ ಕೋಳಿಗಳನ್ನು ಮುಚ್ಚುವ ಬುಟ್ಟಿಯ ಕೆಳಗಡೆ ಭೂಮಿಯಲ್ಲಿ ಹುಗಿದಿಟ್ಟಿದ್ದ. ಬೆಳ್ಳಿಯ ಸಾಮಾನುಗಳು ಮಾರಮ್ಮನೆಂಬವಳ ಮನೆಯೆದುರಿನ ದೇವರ ಮೂರ್ತಿಯ ಬಳಿಯಲ್ಲಿ ಹೂಳಿಡಲಾಗಿದ್ದುವು. ನಗದು ಹಣವನ್ನು ಎಲ್ಲರೂ ಹಂಚಿಕೊಂಡಿದ್ದರು. ಸೆರೆ ಸೇಂದಿಗಳಿಗಾಗಿ ಕೈಯಲ್ಲಿ ಕಾಸಿಲ್ಲದಿದ್ದಾಗ ಕೆಲವು ಬಂಗಾರದ ಆಭರಣಗಳನ್ನು ಎಮ್ಮೇಹಳ್ಳಿಯ ಬಣಕಾರನೊಬ್ಬನಲ್ಲಿ ಅಡವಿರಿಸಿ ಐವತ್ತು ರೂಪಾಯಿ ಸಾಲ ತಂದಿದ್ದರು....

ಸಣ್ಣದುರ್ಗ ಹೇಳಿ ಮುಗಿಸಿದ. ಅವನಿಗೆ ಇನ್ನೂ ಸ್ವಲ್ಪ ಸೆರೆ ತರಿಸಿ ಕೊಟ್ಟು ಕಚೇರಿಗೆ ಕರೆದು ತಂದೆವು. ಅವನ ಗುಂಪಿನವರೊಡನೆ ಅವನನ್ನು ಕೂಡಿಸದೆ ಬೇರೊಂದು ಕೊಠಡಿಯಲ್ಲಿ ಅವನನ್ನು ಬಿಟ್ಟು ಮಲಗಿ ನಿದ್ರಿಸುವಂತೆ ಹೇಳಿದೆವು.

ಮಾರನೆಯ ದಿನ ಫೌಜದಾರರಿಗೆ ಎಲ್ಲ ಸಂಗತಿಗಳನ್ನೂ ತಿಳಿಸಿದಾಗ ಅವರಿಗಾದ ಆನಂದ ಅಷ್ಟಿಷ್ಟಲ್ಲ. ದುರ್ಗನನ್ನು ಕರೆಯಿಸಿ, ಕೋಳಿಯ ಬುಟ್ಟಿಯ ಬುಡದಲ್ಲಿರುವ ಮಾಲು ತರಿಸಿಕೊಡುವಂತೆ ಹೇಳಿದೆವು. ಇನ್ನು ಉಳಿಗಾಲ ವಿಲ್ಲವೆಂದು ಮನವರಿಕೆಯಾಗುತ್ತಲೂ ದುರ್ಗ ಎಲ್ಲವನ್ನೂ ಒಪ್ಪಿಕೊಂಡ. ಅವನ

ಊರಿಗೆ ಹೋಗಿ ಎಲ್ಲ ಮಾಲನ್ನೂ ಜಪ್ತ್‌ಮಾಡಿದುದಾಯಿತು. ಇನ್ನುಳಿದ್ದುದು ಎಮ್ಮೇಹಳ್ಳಿಯ ಬಣಕಾರನ ಹತ್ತಿರ ಇದ್ದ ಒಡವೆಗಳು.

ಊರಿಗೆ ಬಣಕಾರನೆಂದರೆ ಪ್ರಮುಖವ್ಯಕ್ತಿ. ಸಾಕಷ್ಟು ಹೊಲ–ಗದ್ದೆ. ಸಾಕಷ್ಟು ಆದಾಯ. ಬಡ್ಡೀ ವ್ಯವಹಾರವನ್ನೂ ಮಾಡುತ್ತಿದ್ದ. ಕೊರಚರು, ಒಡ್ಡರು, ಲಂಬಾಣಿಗರು ಮೊದಲಾದ ಬಡವರಿಗೆಲ್ಲ ಇವನು ಸಾಹುಕಾರ. ಒಂದು ರೂಪಾಯಿಗೆ ಒಂದು ತಿಂಗಳಿಗೆ ಆರುಕಾಸು ಬಡ್ಡಿ ಇವನದು. ಅಸಲಿಗಾಗಿ ಇವನೆಂದೂ ಯೋಚಿಸಿದವನಲ್ಲ. ಬಡ್ಡಿ ಬಂದರಾಯಿತು. ಹತ್ತು ರೂಪಾಯಿ ಸಾಲ ಕೊಟ್ಟು ಇಪ್ಪತ್ತು ರೂಪಾಯಿ ಬಡ್ಡಿ ವಸೂಲು ಮಾಡುವ ಚಾಣಾಕ್ಷ.

ದುರ್ಗನನ್ನು ಕರೆದುಕೊಂಡು ನಾವು ಅಲ್ಲಿಗೆ ಹೋಗುತ್ತಲೂ ಬಣಕಾರನಿಗೆ ಎಲ್ಲವೂ ಅರ್ಥವಾಯಿತು. ನಾವು ಕೇಳುವುದಕ್ಕೆ ಮೊದಲೇ ಅವನೇ ಬಾಯಿ ತೆರೆದು, ದುರ್ಗ ತನ್ನ ಹತ್ತಿರ ಒಡವೆಗಳನ್ನು ಒತ್ತೆಯಿರಿಸಿರುವುದಾಗಿ ಹೇಳಿದ.

"ಕಳವಿನ ಮಾಲು ಹತ್ತಿರ ಇಟ್ಟುಕೊಂಡಿದ್ದೀ. ನಿನ್ನನ್ನು ಅರೆಸ್ಟ್ ಮಾಡಬೇಕಾಗಿದೆ," ಎಂದು ಹೇಳಿ ಫೌಜದಾರರು ಬೇಡಿಗಳನ್ನು ತೋರಿಸುತ್ತಲೂ ಬಣಕಾರ ಭೂಮಿಗಿಳಿದುಹೋದ. ತನ್ನನ್ನು ಬಿಟ್ಟರೆ ಎರಡು ನೂರು ರೂಪಾಯಿ ಕೊಡುವುದಾಗಿ ಹೇಳಿದ. ಫೌಜದಾರರು ಅದಕ್ಕೊಪ್ಪದೆ ಅವನ ಕೈಗೆ ಬೇಡಿ ತೊಡಿಸಹತ್ತಿದರು. ಐದು ನೂರು ರೂಪಾಯಿ ಕೊಡುವುದಾಗಿ ಅವನು ಹೇಳಿದ. ಫೌಜದಾರರ ಬಾಯಲ್ಲಿ ನೀರೂರಿತ್ತು. ಅವನನ್ನು ಅಷ್ಟಕ್ಕೇ ಬಿಡಬಾರದೆಂದು ನನ್ನ ವಿಚಾರ. ಫೌಜದಾರರು ನನ್ನ ಮುಖವನ್ನು ನೋಡಿ, ನನ್ನ ಸಂಜ್ಞೆಯನ್ನು ಅರ್ಥಮಾಕೊಂಡು ಅವನ ಕೈಗಳಿಗೆ ಬೇಡಿ ತೊಡಿಸಿಯೇ ಬಿಟ್ಟರು. ಅವನ ಹತ್ತಿರವಿದ್ದ ಒಡವೆಗಳನ್ನು ತರಿಸಿ, ಅವನನ್ನು ಚಾವಡಿಗೆ ಸಾಗಿಸುವ ಸಿದ್ಧತೆಗೆ ತೊಡಗಿದೆವು.

"ಅಯ್ಯೋ, ನಿಮ್ಮ ಕಾಲಿಗೆ ಬೀಳುತ್ತೀನಿ. ನನಗೆ ಬೇಡೀ ಹಾಕಬೇಡಿರಿ ರಾವ್‌ಸಾಹೇಬರೇ. ನಾನು ಊರಿನ ದೊಡ್ಡ ಮನುಷ್ಯ. ನೀವು ನನಗೆ ಬೇಡಿ ಹಾಕಿಕೊಂಡು ಹೊರಟರೆ ನನ್ನ ಕಿಮ್ಮತ್ತೆಲ್ಲಾ ಹೋಗುತ್ತದೆ. ದಯಮಾಡಿ ಬಿಟ್ಟು ಬಿಡಿರಿ. ಸಾವಿರ ರೂಪಾಯಿ ಕೊಡುತ್ತೀನಿ. ಬಿಟ್ಟುಬಿಡಿರಿ," ಎಂದು ಗೋಗರೆಯತೊಡಗಿದ ಬಣಕಾರ.

“ಏನು ಶಿವಣ್ಣಾ, ಹೋಗಲಿ ಪಾಪ. ಬಿಟ್ಟುಬಿಡೋಣವೇ?” ಎಂದರು ಫೌಜದಾರರು.

“ನೋಡಿರಿ ರಾವ್‌ಸಾಹೇಬರೆ. ನಿಮ್ಮ ಇಚ್ಛೆ.”

ಅವನ ಬೇಡಿಗಳನ್ನು ಬಿಚ್ಚಿದೆವು. ಸಾವಿರ ರೂಪಾಯಿಗಳನ್ನು ಜೇಬಿಗೆ ಬಿಟ್ಟು, ಬಣಕಾರನನ್ನು ಸಾಕ್ಷಿದಾರರನ್ನಾಗಿ ಮಾಡಿಕೊಂಡು, ತೊಂಡೇಬಾವಿಗೆ ಬಂದೆವು.

ದುರ್ಗನ ಗುಂಪಿನ ಪೈಕಿ ೧೯ ಜನರು ಬಂಧಿತರಾಗಿದ್ದರು. ಅವರು ಮಾಡಿದ ಕಳವುಗಳು ೩೨. ಅವುಗಳನ್ನು ಬಯಲಿಗೆಳೆದು ಅಪರಾಧಿಗಳನ್ನು ಬಂಧಿಸುವುದೆಂದರೇನು ಸಾಧಾರಣ ಕಾರ್ಯವಾಗಿರಲಿಲ್ಲ. ಮೇಲಾಧಿಕಾರಿಗಳ ದೃಷ್ಟಿಯಲ್ಲಿ ಅದೊಂದು ಸಾಹಸದ ಕೃತ್ಯ. ಅವರ ಶಿಫಾರಸು ದೊರಕಿಸಲೆಂದು ನಮ್ಮ ಕಾರ್ಯದ ಬಗೆಗೆ ವರದಿ ಕಳಿಸಬೇಕಾಗಿತ್ತು. ಹಳಗೇರಿ ಫೌಜದಾರರೇ ವರದಿಯನ್ನು ಬರೆದು ಸಿದ್ಧಗೊಳಿಸಿದರು. ಟಪಾಲು ಕಳಿಸುವ ಬಾರನಿಸಿ ನಾನೇ ಆಗಿದ್ದುದರಿಂದ ವರದಿ ನನ್ನ ಕೈಗೇ ಬಂತು.

ಎಂಥ ವರದಿ! ಎಲ್ಲ ಸಾಹಸಕೃತ್ಯಗಳ ಶ್ರೇಯಸ್ಸೂ ತಮ್ಮದೇ ಎನ್ನುವ ಭಾವನೆ ಬರುವಹಾಗೆ ಫೌಜದಾರರು ಅದನ್ನು ಬರೆದಿದ್ದರು. ಕಳ್ಳರ ಗುಂಪನ್ನು ಕಂಡುಹಿಡಿಯುವುದಕ್ಕಾಗಿ ನಾನು ಪಟ್ಟ ಕಷ್ಟವೆಲ್ಲ ನನ್ನ ಕಣ್ಣೆದುರು ಹಾದು ಹೋದಂತಾಯಿತು. ಫೌಜದಾರರು ನನ್ನ ಬಗೆಗೆ ಒಂದು ಒಳ್ಳೆಯ ಮಾತನ್ನೂ ಬರೆದಿರಲಿಲ್ಲ.

ಕದಮ್ ಜಮಾದಾರರನ್ನು ಕರೆದು ಆ ವರದಿಯನ್ನು ಅವರಿಗೆ ತೋರಿಸಿದೆ ನ್ಯಾಯನೀತಿಪರರಾದ ಕದಮರಿಗೂ ಬಹಳ ವ್ಯಸನವಾಯಿತು, ಅದನ್ನೋದಿ.

“ಏನು ಮಾಡುವದು ಶಿವಣ್ಣಾ. ಇವರ ಸ್ವಭಾವವೇ ಹೀಗೆ.”

ಗೊಬ್ಬೂರಿನ ನಮ್ಮ ದೊಡ್ಡ ಫೌಜದಾರರ, ಖಾನ್‌ಸಾಹೇಬರ ನೆನಪಾಯಿತು ನನಗೆ. ಹಳಗೇರಿಯವರ ಬದಲು ಅವರೇ ಇಲ್ಲಿ ಇದ್ದಿದ್ದರೆ ನಾನು ಮಾಡಿದ ಕೆಲಸವನ್ನು ಬಣ್ಣಿಸಿ ನನಗೆ ಬಡ್ತಿ ಕೊಡಿಸುತ್ತಿದ್ದರು. ಹಳಗೇರಿಯವರಾದರೋ ಚಿಲ್ಲರೆ ಮನಸ್ಸಿನವರು. ನಾನು ಮಾಡಿದ ಕೆಲಸಗಳ ಶ್ರೇಯಸ್ಸನ್ನೂ ತಾವೇ ಹೊಡೆದುಕೊಳ್ಳುವ ಹೊಂಚು ಹಾಕಿದ್ದರು.

"ಈ ರಿಪೋರ್ಟ್ ಕಳಿಸುವದೇ ಬೇಡ. ನೀವೇ ಬೇರೊಂದು ರಿಪೋರ್ಟ್ ತಯಾರಿಸಿರಿ," ಎಂದರು ಜಮಾದಾರರು.

"ಫೌಜದಾರರಿಗೆ ಸಿಟ್ಟು ಬರಬಹುದಲ್ಲ?"

"ಬಂದರೆ ಬಂತು. ಏನು ಮಾಡುತ್ತಾರೋ ನೋಡೋಣ. ಹೀಗೆ ಸುಳ್ಳು ರಿಪೋರ್ಟ್ ಕಳಿಸಿದರೆ ನಾವು ಸುಮ್ಮನಿರಬಾರದು."

ಅಪರಾಧಿಗಳನ್ನು ಬಂಧಿಸುವಲ್ಲಿ ನಾನೂ ಜಮಾದಾರರೂ ವಹಿಸಿದ ಪಾತ್ರಗಳನ್ನು ಕುರಿತು ಸವಿಸ್ತಾರವಾಗಿ ಉಲ್ಲೇಖಿಸಿ ವರದಿ ಸಿದ್ಧಗೊಳಿಸಿ ಅದನ್ನು ಹಳಗೇರಿಯವರೆದುರಿಗಿರಿಸಿದೆ.

"ಇದನ್ನು ಬರೆಯಲಿಕ್ಕೆ ಯಾರು ಹೇಳಿದರು ನಿಮಗೆ? ನಾನು ತಯಾರಿಸಿದ್ದ ರಿಪೋರ್ಟು ಏನು ಮಾಡಿದಿರಿ ಅದನ್ನು ಈಗಿಂದೀಗ ಡಿ. ಎಸ್. ಪಿ. ಯವರಿಗೆ ಕಳಿಸು."

ನಾನು ಮತ್ತೊಂದು ಮಾತನಾಡದೆ ನನ್ನ ಸ್ಥಳಕ್ಕೆ ಬಂದು, ಫೌಜದಾರರು ತಯಾರಿಸಿದ್ದ ವರದಿಯನ್ನು ನೇರವಾಗಿ ಡಿ.ಎಸ್.ಪಿ. ಯವರಿಗೇ ಕಳಿಸದೆ, ನಮ್ಮ ಭಾಗದ ಇನ್ಸ್‌ಪೆಕ್ಟರರಿಗೆ ಕಳಿಸಿ, ನಾನು ತಯಾರಿಸಿದ ವರದಿಯನ್ನೂ ಅದರ ಜತೆಗಿರಿಸಿದೆ. ಅವುಗಳೆರಡನ್ನು ಓದಿ ನೋಡಿದಾಗ ಫೌಜದಾರರ ಸಣ್ಣತನ ಇನ್ಸ್‌ಪೆಕ್ಟರರಿಗೂ ಅರ್ಥವಾಯಿತು. ಇಂಥ ಕೀಳು ಮನೋವೃತ್ತಿಯನ್ನು ಅವರೆಂದೂ ಸಹಿಸಿದವರಲ್ಲ. ಕೈಕೆಳಗೆ ಕೆಲಸ ಮಾಡುವವರಿಗೆ ಉತ್ತೇಜನವಿತ್ತು ಅವರನ್ನು ಮುಂದೆ ತರುವುದು ತಮ್ಮ ಕರ್ತವ್ಯವೆಂದು ಬಗೆದು ಆ ಪ್ರಕಾರ ನಡೆದುಕೊಳ್ಳುತ್ತ ಬಂದಿದ್ದವರು ಇನ್ಸ್‌ಪೆಕ್ಟರರು.

ವರದಿಗಳೆರಡನ್ನೂ ತೆಗೆದುಕೊಂಡು ಅವರು ಮಾರನೆಯ ದಿನವೇ ತೊಂಡೇಬಾವಿಗೆ ಬಂದು, ಫೌಜದಾರರನ್ನು ನಿಷ್ಠುರವಾಗಿ ಖಂಡಿಸಿ, ಕೈಕೆಳಗಿನ ಕೆಲಸಗಾರರನ್ನು ಗೌರವಾದರಗಳಿಂದ ನಡಸಿಕೊಳ್ಳುವಂತೆ ಬುದ್ಧಿವಾದ ಮಾಡಿದರು.

"ಈ ಪೋಲೀಸ್ ಕಚೇರಿಯ ಮೇಲಾಧಿಕಾರಿಯೆಂದು ನಿಮ್ಮನ್ನು ನೇಮಿಸಲಾಗಿದೆ. ನಿಮಗೆ ಸಹಾಯಕರೆಂದು ಹತ್ತು ಮಂದಿ ಪೋಲೀಸರಿದ್ದಾರೆ. ಇವರ ಸಹಾಯದಿಂದ ನೀವು ನಿಮ್ಮ ಕ್ಷೇತ್ರದಲ್ಲಿ ಶಾಂತಿ ಸುವ್ಯವಸ್ಥೆ ಕಾದುಕೊಂಡುಹೋದರೆ ನಿಮ್ಮ ಕರ್ತವ್ಯ ನೆರವೇರುವದು. ಇವರು ದುಡಿಯುವದನ್ನು

ನಿಲ್ಲಿಸಿದರೆ ನೀವೊಬ್ಬರೇ ಏನೂ ಮಾಡಬಲ್ಲಿರಿ? ಅವರು ಮಾಡಿದ ಕೆಲಸವೆಲ್ಲಾ ನೀವೇ ಮಾಡಿದ್ದೆಂದು ನೀವು ಹೇಳಿಕೊಂಡರೆ ಮುಂದೆ ನಿಮಗೆ ಅವರ ಸಹಾಯ ಸಿಗುವದೇ?"

ಫೌಜದಾರರ ಮುಖ ಕಪ್ಪಿಟ್ಟಿತ್ತು.

ಅವರು ತಯಾರಿಸಿದ ವರದಿಯನ್ನು ರದ್ದುಗೊಳಿಸಿ ನನ್ನ ವರದಿಯನ್ನೇ ಡಿ.ಎಸ್.ಪಿ. ಯವರಿಗೆ ಕಳಿಸಿದರು ಇನ್ಸ್‌ಪೆಕ್ಟರರು.

ಬಣಕಾರನಿಂದ ದೊರೆತಿದ್ದ ಸಾವಿರ ರೂಪಾಯಿಗಳಲ್ಲಿ ಫೌಜದಾರರಿಗೆ ಮೂರು ನೂರು ರೂಪಾಯಿ ಕೊಟ್ಟು ಉಳಿದುದನ್ನು ನಾವೆಲ್ಲರೂ ಹಂಚಿಕೊಂಡೆವು. ತಮಗೆ ಮೂರು ನೂರು ಮಾತ್ರ ಸಿಕ್ಕಿತಲ್ಲಾ! ಎಂಬ ಅಸಮಾಧಾನವೂ ಫೌಜದಾರರನ್ನು ಕೊರೆಯುತ್ತಿತ್ತು. ಅವರು ಒಂದಿಲ್ಲೊಂದು ನೆಪ ತೆಗೆದು ದಿನವೂ ನನ್ನನ್ನು ಪೀಡಿಸಲಾರಂಭಿಸಿದರು.

ನಾನು ಇನ್ಸ್‌ಪೆಕ್ಟರರನ್ನು ಕಂಡು, ಎಲ್ಲವನ್ನೂ ನಿವೇದಿಸಿಕೊಂಡು, ನನ್ನನ್ನು ಬಾರನಿಸಿ ಕೆಲಸದಿಂದ ತಪ್ಪಿಸಿ ಹಳ್ಳಿಗಳನ್ನು ಸುತ್ತುವ 'ಬೀಟ್ ಅಮಲ್ದಾರ್' ಕೆಲಸಕ್ಕೆ ಹಾಕಲು ಕೇಳಿಕೊಂಡೆ.

ಅವರ ಶಿಫಾರಸಿನಿಂದಾಗಿ ನನಗೆ ಆ ಕೆಲಸವೂ ಸಿಕ್ಕಿತು.

೧೭

## ಚಳವಳಿಯ ಬಿರುಗಾಳಿಯಲ್ಲಿ

ಬೀಟ್ ಅಮಲ್ದಾರಿಕೆಯ ಈ ಕೆಲಸದಲ್ಲಿ ಸುಖವೇನೂ ಇರಲಿಲ್ಲ. ತಿಂಗಳಲ್ಲಿ ಹದಿನೆಂಟು ಹತ್ತೊಂಭತ್ತು ದಿನ ನಾನು ಸಂಚಾರದಲ್ಲಿಯೆ ಇರಬೇಕಾಗುತ್ತಿತ್ತು. ಬಾರನಿಸಿಯಾಗಿರುವವರೆಗೂ ನನಗೆ ಅಂಥ ಕಷ್ಟವಿರಲಿಲ್ಲ. ಆಗಾಗ ನಾಲ್ಕು ರೂಪಾಯಿಗಳೂ ಸಿಕ್ಕುತ್ತಿದ್ದುವು. ಆ ಕೆಲಸ ತಪ್ಪಿದ ತರುವಾಯ ನಾನು ಬಹಳ ಕಷ್ಟಪಡಬೇಕಾಯಿತು. ೧೯೪೨ ನೆಯ ಇಸವಿಯ ಆಗಸ್ಟ್ ತಿಂಗಳು ಬೇರೆ ಸಮೀಪಿಸುತ್ತಿದ್ದಿತು. ಕಾಂಗ್ರೆಸ್ಸು 'ಕ್ವಿಟ್ ಇಂಡಿಯಾ' ಚಳವಳಿ ಹೂಡುವುದರಲ್ಲಿತ್ತು, ಗ್ರಾಮಾಂತರಗಳಲ್ಲಿ ಅದಕ್ಕಾಗಿ ಸನ್ನಾಹಗಳೂ ನಡೆಯುತ್ತಿದ್ದುವು. ಅಂಥ ಸಂದರ್ಭದಲ್ಲಿ ಹಳ್ಳಿಪಳ್ಳಿ ಸುತ್ತುವ ಕೆಲಸ ನನಗೆ ಪ್ರಿಯವಾದುದೇನೂ ಆಗಿರಲಿಲ್ಲ. ಆದರೆ, ಹಳಗೇರಿ ಫೌಜದಾರರ ರೋಷದಿಂದ ದೂರವಿರಲೆಂದು ನಾನಾಗಿಯೇ ಸ್ವಸಂತೋಷದಿಂದಲೇ ಆ ಅಪ್ರಿಯ ಕೆಲಸಕ್ಕೆ ನಿಂತುಕೊಂಡಿದ್ದೆ.

ನಮ್ಮ ಕಚೇರಿಯ ಕ್ಷೇತ್ರದಲ್ಲಿ ನಾಲ್ಕು 'ಬೀಟು'ಗಳಿದ್ದುವು. ಅವುಗಳಲ್ಲಿ ಮನೆ ಹೆಚ್ಚಾಗಿದ್ದ ಭಾಗವೇ ನನ್ನ ಪಾಲಿಗೆ ಬಂದದ್ದು ಪಂಚಾಮೃತ ಎಂದುಕೊಂಡು ನಾನು ಅಲೆದಾಟಕ್ಕಾರಂಭಿಸಿದೆ. ಮಳೆಗಾಲವಾದುದರಿಂದ ಕೆಲವು ವೇಳೆ ಬಹಳ ತೊಂದರೆಯಾಗುತ್ತಿತ್ತು. ಮೇಲಾಗಿ ಅದು ಮಲೇರಿಯದ ಸೀಮೆ. ಪೋಲೀಸು ಸಿಪಾಯಿಯಾದ ನಾನು ಹಳ್ಳಿ ಸುತ್ತುವಾಗಲೆಲ್ಲ ಸೊಳ್ಳೆಪರದೆ ಹೊತ್ತುಕೊಂಡು ಹೋಗಲಾಗುತ್ತದೆಯೆ? ಸರಿ. ಅಲೆದಾಟಕ್ಕಾರಂಭವಾದ ವಾರವೊಂದರಲ್ಲಿಯೇ ಮಲೇರಿಯಾ ಜ್ವರದಿಂದ ಹಾಸಿಗೆ ಹಿಡಿಯುವಂತಾಯಿತು.

ತೊಂಡೇಬಾವಿಗೆ ಬರುವುದಕ್ಕೂ ಸಾಧ್ಯವಾಗಲಿಲ್ಲ. ಒಂದು ಹಳ್ಳಿಯಲ್ಲೇ ಮಲಗಿಕೊಂಡುಬಿಟ್ಟೆ: ಮಲ್ಲನಗೌಡ ಎಂಬವರ ಮನೆಯಲ್ಲಿ.

ಮಲ್ಲನಗೌಡ ಬಲು ಒಳ್ಳೆಯ ಮನುಷ್ಯ. ನನ್ನನ್ನು ಚೆನ್ನಾಗಿಯೇ ಉಪಚರಿಸಿದ. ನನಗೆ ಯಾವುದಕ್ಕೂ ಕೊರತೆಯಾಗದಂತೆ ನೋಡಿಕೊಂಡ. ಆದರೆ, ಅವನ ಸಹವಾಸದಲ್ಲಿ ನನಗೂ ಕುಡಿತದ ಚಟ ಅಂಟಿಕೊಂಡಿತು.

ದಿನವೂ ಕತ್ತಲಾಗುತ್ತಲೂ ಒಂದು ಸೀಸೆಯಷ್ಟು ಸೆರೆ ತರಿಸಿ ಕುಡಿಯುವುದು ಮಲ್ಲನಗೌಡನ ಪದ್ಧತಿಯಾಗಿತ್ತು. ಅವನು ಕುಡಿಯುವ ಸಂಗತಿ ಊರಿನಲ್ಲಿ ಎಲ್ಲರಿಗೂ ಗೊತ್ತಿತ್ತು. ಮುಚ್ಚುಮರೆಮಾಡುವ ಅಗತ್ಯವೇನೂ ಇರಲಿಲ್ಲ. ಓಲೇಕಾರರು ಸೆರೆ ತಂದು ಕೊಡುತ್ತಿದ್ದರು. ಅವರಿಗೂ ಸ್ವಲ್ಪ ಕೊಟ್ಟು ತಾನೂ ಕುಡಿಯುತ್ತಿದ್ದ ಮಲ್ಲನಗೌಡ. ಒಬ್ಬನೇ ಕುಳಿತು ಕುಡಿಯುವುದೆಂದರೆ ಮಾತ್ರ ಅವನಿಗಾಗದು.

ಆ ದಿನ ನಾನು ಅವನ ಕೊಠಡಿಯಲ್ಲಿ ಮಂಚದ ಮೇಲೆ ಬಿದ್ದುಕೊಂಡು ಆಗತಾನೆ ಅಂಚೆಯಿಂದ ಬಂದಿದ್ದ ಹಳೆಯ ದೈನಂದಿನ ಪತ್ರಿಕೆಯನ್ನೋದುತ್ತಾ ಕುಳಿತಿದ್ದ ಹಾಗೆ ಮಲ್ಲನಗೌಡ ಸೀಸೆಯೊಂದಿಗೆ ಬಂದು, ಅದನ್ನು ನೆಲದ ಮೇಲಿಟ್ಟ.

"ಈಗ ಹ್ಯಾಂಗೈತಿ ಸರದಾರರೆ?" ಎಂದು ಕೇಳಿದ.

"ಸ್ವಲ್ಪ ನೆಟ್ಟಗೆ. ನಿಮ್ಮ ಉಪಕಾರ ಬಹಳವಾಯಿತು ಗೌಡರೇ."

ಮಲ್ಲನಗೌಡ ನಗುನಗುತ್ತಾ ಹೇಳಿದ:

"ನೀವು ನೆಟ್ಟಗಾದದ್ದಕ್ಕೆ ಅಂತ ಈಗೊಂದು ಪಾರ್ಟಿ ಮಾಡಿಬಿಡೋಣ."

ನಾನು ಆ ಸೀಸೆಯನ್ನು ನೋಡಿದೆ, ಅವನು ಹೇಳುವ 'ಪಾರ್ಟಿ' ಎಂಥದೆಂಬುದನ್ನು ತಿಳಿದುಕೊಂಡೆ. ಅವನ ಮನಸ್ಸನ್ನು ನೋಯಿಸುವ ಇಚ್ಛೆಯಿರಲಿಲ್ಲ ನನಗೆ.

"ಏನಂತೀರಿ ಸರದಾರರೆ? ಒಂದು ಕಪ್ ತೆಗೆದುಕೊಳ್ಳಲಿಕ್ಕೆ ಬೇಕು ನೀವೂ," ಎನ್ನುತ್ತಾ ಕಪ್ಪಿಗೆ ಸೆರೆಯನ್ನು ತುಂಬಿದ ಮಲ್ಲನಗೌಡ.

"ಅದೊಂದು ಬೇಡ ಗೌಡರೇ. ಕ್ಷಮಿಸಿರಿ. ನಾನೆಂದೂ ತೆಗೆದುಕೊಂಡಿಲ್ಲ."

"ಎಂದೂ ತಗೊಂಡಿಲ್ಲ ಅಂತಲೇ ಇವತ್ತು ತಗೊಳ್ಳಬೇಕು. ಇದು ಔಷಧ ಇದ್ದ ಹಾಗೆ. ಎಂಥಾ ರೋಗವನ್ನೂ ಸುಟ್ಟುಹಾಕುತ್ತೈತಿ. ನೀವು

ಇದರ ರೂಢಿ ಮಾಡಿಕೊಂಡರೆ ಮತ್ತೆಂದೂ ಮಲೇರಿಯಾ ಸುಳೀಲಿಕ್ಕಿಲ್ಲ ನಿಮ್ಮ ಹತ್ತರ!"

"ಛೆ. ಛೆ. ಬೇಡ ಗೌಡರೇ. ಬೇಡ."

"ಅರೆ! ನಿಮಗೇನು ಗೊತ್ತು ಇದರ ಮಹಿಮೆ! ತಗೊಳ್ಳಿರಿ. ಪೋಲೀಸರಾದ ನಿಮಗೆ ಎಲ್ಲಾದರ ಅನುಭವವೂ ಇರಬೇಕು. ಒಂದು ಗುಟುಕು ನೋಡಿರಿ. ಮತ್ತೆ ನಿಮಗೆ ಒತ್ತಾಯ ಮಾಡುವದಿಲ್ಲ."

ನನಗೂ ಕುತೂಹಲ. ಸೆರೆಯನ್ನು ನಾನು ಅದುವರೆಗೂ ಸೇವಿಸಿರಲಿಲ್ಲ. ಅದನ್ನು ಕುಡಿದರೆ ಅಮಲೇರುವುದೆಂಬುದೇನೊ ನನಗೆ ಗೊತ್ತಿದ್ದಿತಾದರೂ ಅದರ ಅನುಭವ ಮಾತ್ರ ಇರಲಿಲ್ಲ. ಮಲ್ಲನಗೌಡ ಹಾಗೆ ಒತ್ತಾಯಪಡಿಸುತ್ತಲೂ, ಒಂದುಸಲ ಕುಡಿದು ನೋಡಿ ಅನುಭವ ಪಡೆಯಬಾರದೇಕೆ, ಎಂದೂ ನನಗೆನ್ನಿಸಿತು.

ಮಲ್ಲನಗೌಡ ಮುಂದೆ ಮಾಡಿದ ತಪ್ಪು ತೆಗೆದುಕೊಂಡು ಸ್ವಲ್ಪ ಸೆರೆಯನ್ನು ಕುಡಿದೆ. ಇನ್ನೂ ಕುಡಿಯೋಣವೆನ್ನಿಸಿತು. ಗೌಡನೂ ನಗುತ್ತಾ ಮತ್ತೊಂದು ಕಪ್ಪು ಕೊಟ್ಟ. ಅದನ್ನೂ ಕುಡಿದೆ. ಇಬ್ಬರೂ ಸೇರಿ ಸೀಸೆಯನ್ನು ಬರಿದುಮಾಡಿ ಊಟಕ್ಕೆ ಕುಳಿತೆವು. ಅಂದು ನಾನು ಊಟಮಾಡಿದುದೇನೆಂಬುದೇ ಗೊತ್ತಾಗಲಿಲ್ಲ.

ಅನಂತರವೂ ನಾಲ್ಕೈದು ದಿನ ಆ ಹಳ್ಳಿಯಲ್ಲಿಯೇ ಇರಬೇಕಾಯಿತು. ಒಂದು ಸಲ ರುಚಿ ನೋಡಿದರೆ ಸಾಕು ಎಂದಿದ್ದ ಮಲ್ಲನಗೌಡ ದಿನವೂ ರುಚಿ ನೋಡಿಸುವುದಕ್ಕಾರಂಭಿಸಿದ. ಎರಡು ಮೂರು ದಿನ ಕಳೆಯುವಷ್ಟರಲ್ಲಿ ನನಗೂ ಅದರ ಅಭ್ಯಾಸವಾಯಿತು. ಚಹ ಕಾಫಿ ಸಿಗರೇಟುಗಳ ಅಭ್ಯಾಸವಾದ ಹಾಗೆ. ಸರಿ. ಅಂದಿನಿಂದ ನಾನೂ 'ಕುಡುಕ'ನಾಗಿಬಿಟ್ಟೆ.

ನನ್ನ 'ಬೀಟ'ನ ಮೂವತ್ತು ಹಳ್ಳಿಗಳಲ್ಲಿ ಯಾವಾಗಲೂ ಮಳೆ ಧಾರಾಕಾರವಾಗಿ ಸುರಿಯುವುದು. ಅದಕ್ಕೆ ಸರಿಯಾಗಿ ಅಲ್ಲಿ ಬೆಳೆಯೂ ಹೆಚ್ಚು. ರೈತರೂ ಸ್ಥಿತಿವಂತರಾಗಿದ್ದರು. ಬೇರೆಡೆಗಳಲ್ಲಿ ಸಾಮಾನ್ಯವಾಗಿ ಕಾಣುವ ದಾರಿದ್ರ್ಯ ಮತ್ತು ದೈನ್ಯಾವಸ್ಥೆಗಳು ಅಲ್ಲಿ ಕಾಣುತ್ತಿರಲಿಲ್ಲ. ಸಂಚಾರದ ಹಳ್ಳಿಗಳಲ್ಲಿ 'ಸಮನ್ಸ್' ಜಾರಿಮಾಡುವುದು, ಚಿಕ್ಕಪುಟ್ಟ ಅಪರಾಧಗಳನ್ನು ಆಕಸ್ಮಿಕ ಪ್ರಕರಣಗಳನ್ನೂ ನೋಡಿಕೊಳ್ಳುವುದು ನನ್ನ ಕರ್ತವ್ಯವಾಯಿತು.

ನನ್ನ ಇಬ್ಬರು ತಮ್ಮಂದಿರಲ್ಲಿ ದೊಡ್ಡವನಾದ ವೀರಭದ್ರ ಆಗ ಕಳ್ಳೇಕಾಯಿ ನಗರದ ಹೈಸ್ಕೂಲಿನಲ್ಲಿ ಓದುತ್ತಿದ್ದ. ಸ್ವಾಮಿಗಳ ಉಚಿತ ಪ್ರಸಾದ ನಿಲಯದಲ್ಲಿ ಊಟ–ವಸತಿಗಳಿಗೆ ಅನುಕೂಲವಾಗಿತ್ತು. ಚಿಕ್ಕವನಾದ ಜಯಣ್ಣ ಮತ್ತು ತಾಯಿ ಹಳ್ಳಿಯಲ್ಲಿಯೇ ಇದ್ದರು. ಜಯಣ್ಣ ಹಳ್ಳಿಯ ಶಾಲೆಯಲ್ಲಿಯೇ ಓದುತಿದ್ದ.

ಈ ಮಧ್ಯೆ ನನ್ನ ಹೆಂಡತಿಯನ್ನು ಕರೆದುಕೊಂಡು ಬಂದು ತೊಂಡೇಬಾವಿಯಲ್ಲಿ ಸಂಸಾರ ಹೂಡಬೇಕಾಗಿ ಬಂತು. ತಿಂಗಳಿನಲ್ಲಿ ಹದಿನೈದು ದಿನ ಸಂಚಾರದಲ್ಲಿರುವವನು ನಾನು. ಇನ್ನೂ ಹುಡುಗಿಯಾದ ನನ್ನ ಹೆಂಡತಿಗೆ ಒಬ್ಬಳೇ ಮನೆಯಲ್ಲಿರಲು ಅಂಜಿಕೆ. ತಾಯಿಯನ್ನೂ ಜಯಣ್ಣನನ್ನೂ ಇಲ್ಲಿಗೇ ಕರೆದುಕೊಂಡು ಬರುವಂತೆ ವೀರಭದ್ರನಿಗೆ ಕಾಗದ ಬರೆದೆ. ಹಳ್ಳಿಯನ್ನು ಬಿಟ್ಟು ಮಲೇರಿಯದ ಸೀಮೆಗೆ ಬರಲು ತಾಯಿ ಸಿದ್ಧಳಿರಲಿಲ್ಲ. ಅಂತೂ, ಮೂರು ನಾಲ್ಕು ಬಾರಿ ಪತ್ರ ಬರೆದು ಬಲವಂತಪಡಿಸಿದ ತರುವಾಯ ಆಕೆ ಜಯಣ್ಣನನ್ನು ಕರೆದುಕೊಂಡು ತೊಂಡೇಬಾವಿಗೆ ಬಂದಳು. ಇಲ್ಲಿಯ ಶಾಲೆಯಲ್ಲೇ ಅವನ ಹೆಸರು ಹಚ್ಚಿದುದಾಯಿತು. ವೀರಭದ್ರ ಮಾತ್ರ ತಾನು ಮುಂದಿನ ಪರೀಕ್ಷೆ ಮುಗಿಸಿ ಬರುವುದಾಗಿ ತಿಳಿಸಿ ಕಳ್ಳೇಕಾಯಿಯಲ್ಲಿಯೇ ಉಳಿದುಕೊಂಡ.

ಸಂಸಾರಕ್ಕಾರಂಭವಾಗುತ್ತಲೂ ಹೊಸ ಹೊಸ ಸಮಸ್ಯೆಗಳನ್ನು ನಾನು ಎದುರಿಸಬೇಕಾಯಿತು. ಬರುವ ಸಂಬಳವಂತೂ ಖರ್ಚಿಗೆ ಸಾಲುವ ಹಾಗಿರಲಿಲ್ಲ. ಆಹಾರ ಧಾನ್ಯಗಳ ಬೆಲೆ ದಿನದಿನಕ್ಕೂ ಏರುತ್ತಿತ್ತು. ಸಂಬಳದ ಹಣದಲ್ಲಿ ಮುಕ್ಕಾಲುಪಾಲು ಕಾಳುಗಳಿಗಾಗಿಯೇ ಖರ್ಚಾಗುತ್ತಿತ್ತು. ಹಾಲು, ಬೆಣ್ಣೆ, ಮೊಸರು, ಮಜ್ಜಿಗೆ ಬೇಡವೆ? ಸ್ವಲ್ಪವಾದರೂ ಹೈನವಿರಲಿ ಎಂದುಕೊಂಡು ಒಂದು ಬಡ ಆಕಳು ಕೊಂಡು ತಂದುದಾಯಿತು. ಅದರ ಯೋಗಕ್ಷೇಮವನ್ನು ನನ್ನ ತಾಯಿ ನೋಡಿಕೊಳ್ಳುತ್ತಿದ್ದಳು. ನನ್ನ ಸಂಬಳ–ಭತ್ತೆ ಎಲ್ಲವನ್ನೂ ಅವಳ ಕೈಗೆ ಕೊಡುತ್ತಿದ್ದೆ. ಅವಳು ಸಂಸಾರವನ್ನು ನಡಸಿಕೊಂಡು ಹೋಗುತ್ತಿದ್ದಳು.

....ನಮಗೆಲ್ಲರಿಗೂ ತುಂಬಾ ವಿವಂಚನೆಗೆ ಕಾರಣವಾಗಿದ್ದ ಆಗಸ್ಟ್ ಒಂಭತ್ತನೆಯ ತಾರೀಖೂ ಬಂದುಬಿಟ್ಟಿತು. ಅಂದು ಮುಂಬಯಿಯಲ್ಲಿ ಅಖಿಲ ಭಾರತ ಕಾಂಗ್ರೆಸಿನ ಮಹಾಧಿವೇಶನ. ಅದೇ ದಿನವೇ ಪೋಲೀಸ್ ಉಚ್ಚಾಧಿ

ಕಾರಿಯೊಬ್ಬರು ಬಂದು ರಂಗಪ್ಪನವರನ್ನು ಬಂಧಿಸಿಕೊಂಡು ಹೋದರು. ಮರು ದಿನದ ಪತ್ರಿಕೆಗಳು ಸುದ್ದಿ ಹೊತ್ತು ತಂದುವು. ಮಹಾನಾಯಕರೆಲ್ಲರ ಬಂಧನ. ಸಭೆ, ಮೆರವಣಿಗೆ, ಲಾಠೀಚಾರ್ಜು, ಗೋಳೀಬಾರ್....

ನಮ್ಮ ಕಚೇರಿ ಮತ್ತು ಸರಕಾರೀ ಆಸ್ತಿಯ ರಕ್ಷಣೆಗೆಂದು ನಮ್ಮ ಸಹಾಯಕ್ಕಾಗಿ ಹತ್ತು ಜನ ವಿಶೇಷ ಪೋಲೀಸರು ಬಂದು ಬಿಡಾರ ಹೂಡಿದರು. ಅಂಚೆಯ ತಂತಿ ಕತ್ತರಿಸುವುದು, ರೈಲು ಕಂಬಿ ಕೀಳುವುದಕ್ಕಾರಂಭವಾಗಿತ್ತು. ನಾನು ನನ್ನ ಸಂಚಾರದ ಹಳ್ಳಿಗಳಿಗೆಲ್ಲಾ ಭೆಟ್ಟಿಕೊಟ್ಟು, ಬಂದೂಕ ಲೈಸೆನ್ಸ್ ಧಾರಿಗಳನ್ನು ಕಂಡು, ಚಳವಳಿಗಾರರು ಅವರ ಬಂದೂಕಗಳನ್ನು ಅಪಹರಿಸ ಬಹುದೆಂದು ಹೇಳಿ, ಅವುಗಳನ್ನೆಲ್ಲ ಕಚೇರಿಗೆ ತಂದು ಹಾಕಿದೆ. ಗೌಡ – ಓಲೇ ಕಾರರ ಕತ್ತಿ ಕಠಾರಿಗಳನ್ನೂ ಕಚೇರಿಗೆ ಸಾಗಿಸಿದುದಾಯಿತು. ನನ್ನ ಸುದೈವವೋ ಏನೊ. ನನ್ನ ಅಧಿಕಾರದ ಸೀಮೆಯಲ್ಲಿ ತಂತಿಯ ದಾರಿಯಿರಲಿಲ್ಲ, ಸರಕಾರೀ ರಸ್ತೆಗಳೂ ಸೇತುವೆಗಳೂ ಇರಲಿಲ್ಲ.

ತೊಂಡೇಬಾವಿಯಲ್ಲಿ ಸಭೆ ಜರಗಿದುವು. ಮೆರವಣಿಗೆ ಹೊರಟುವು. ಭಾಷಣಗಳು ನಡೆದುವು. ನಾವು ಯಾವುದಕ್ಕೂ ಅಡ್ಡಿಮಾಡಲಿಲ್ಲ. ಭಾಷಣ ಮಾಡಿದವರನ್ನು ಬಂಧಿಸಬೇಕೆಂದು ಫೌಜದಾರರು ಅಭಿಪ್ರಾಯಪಟ್ಟರು. ಅದು ಜಾಣತನದ ಕ್ರಮವಲ್ಲವೆಂದು ನಾನು ಸೂಚಿಸಿದೆ.

"ಮಾಡಿರಿ ಇಲ್ಲಾ ಮಡಿಯಿರಿ ಎಂದು ಗಾಂಧಿಯವರು ಜನರಿಗೆ ಆಜ್ಞೆ ಮಾಡಿದ್ದಾರೆ. ನಾವು ನಾಲ್ಕೆಂಟು ಜನರನ್ನು ಬಂಧಿಸುವದರಿಂದ ಆಗುವದಾದರೂ ಏನು? ಜನರು ರೊಚ್ಚಿಗೆದ್ದು ಮತ್ತಿಷ್ಟು ಗದ್ದಲವಾಗುವದು. ನಾವು ಸುಮ್ಮನಿರೋಣ. ನಡೆಯುವದೆಲ್ಲಾ ನಡೆಯಲಿ," ಎಂದು ನಾನು ಹೇಳಿದಾಗ ಫೌಜದಾರರು ಒಪ್ಪಿ ಸುಮ್ಮನಾದರು.

ತೊಂಡೇಬಾವಿಯ ಹತ್ತಿರವೂ ತಂತೀ ಕಂಬಗಳನ್ನು ಕಿತ್ತರು ಜನ. ಒಂದೆರಡು ಸೇತುವೆಗಳನ್ನೊಡೆದರು. ಟಪಾಲು – ಪೆಟ್ಟಿಗೆಗಳೂ ಗೌಡ ಕುಲಕರಣಿಯರ ದಪ್ತರುಗಳೂ ಅಗ್ನಿಗಾಹುತಿಯಾದುವು. ಅಪ್ರತ್ಯಕ್ಷವಾಗಿ ಎಲ್ಲರೂ ಈ ಚಳವಳಿಗೆ ಪ್ರೋತ್ಸಾಹವೀಯುತ್ತಿದ್ದರು. ಶಾಲೆಯ ಹುಡುಗರೂ ಕೂಡಾ ಅತ್ಯುತ್ಸಾಹದಿಂದ ಆ ಚಳವಳಿಯಲ್ಲಿ ಭಾಗವಹಿಸುತ್ತಿದ್ದರು. ಕಳ್ಳೀಕಾಯಿ ನಗರದಲ್ಲಿ ಓದುತ್ತಿದ್ದ ನನ್ನ ತಮ್ಮ ವೀರಭದ್ರನನ್ನೂ ಚಳವಳಿಯ ಸಂಬಂಧದಲ್ಲಿ

ಪೋಲೀಸರು ಬಂಧಿಸಿದ ವಾರ್ತೆ ಬಂದಿತು. ಒಂಭತ್ತು ತಿಂಗಳ ಶಿಕ್ಷೆಗೊಳಗಾಗಿ, ಅವನು ಸೆರೆಮನೆ ಸೇರಿಕೊಂಡ. ಸೆರೆಮನೆಗೆ ಹೋಗುವ ಮೊದಲು ಅವನು ನನ್ನ ತಾಯಿಗೆ ಬರೆದಿದ್ದ ಕಾಗದ ಬಹಳ ಹೃದಯಸ್ಪರ್ಶಿಯಾಗಿತ್ತು.

"ನಿನಗೆ ನಾವು ಮೂವರು ಗಂಡುಮಕ್ಕಳಿದ್ದೇವೆ. ನನ್ನನ್ನೊಬ್ಬನನ್ನು ಭಾರತದ ಸೇವೆಗಾಗಿ ಬಿಟ್ಟುಬಿಡಬೇಕೆಂದು ಬೇಡಿಕೊಳ್ಳುತ್ತೇನೆ. ಅದರಲ್ಲೇ ಒಂದುವೇಳೆ ನನ್ನ ಪ್ರಾಣ ಹೋದರೆ ತಾಯಿನಾಡಿನ ವಿಮೋಚನೆಗಾಗಿ ಹೋಯಿತೆಂದು ತಿಳಿದು ಸಮಾಧಾನ ತಾಳು. ನಾನು ಜೇಲಿನಲ್ಲಿ ಕಷ್ಟವನ್ನನುಭವಿಸಬಹುದೆಂದು ನೀನು ನೊಂದುಕೊಳ್ಳಬಹುದು. ಆದರೆ, ಗಾಂಧಿ ನೆಹರೂರಂಥ ಮಹಾತ್ಮರೇ ಇಂದು ಜೇಲಿನಲ್ಲಿರುವರೆಂಬುದನ್ನು ಮರೆಯಬೇಡ. ಅಂಥವರ ಮುಂದೆ ನನ್ನದೇನು? ಅಣ್ಣನು ನಿಮ್ಮನ್ನು ಸಲಹಲು ಸರಕಾರದ ಗುಲಾಮನಾಗಿ ಉಳಿಯಬೇಕಾಗಿದೆ. ಆ ಗುಲಾಮಗಿರಿಯನ್ನು ತೊಡೆದು ಹಾಕಲು ನಾನು ಪ್ರಯತ್ನಿಸುವೆ."

ನಾನು ಆ ಪತ್ರವನ್ನು ತೊಂಡೇಬಾವಿಯ ಗಣ್ಯವ್ಯಕ್ತಿಗಳಿಗೂ ಹೈಸ್ಕೂಲಿನ ಹೆಡ್‌ಮಾಸ್ತರರಾದ ದೇಸಾಯಿಯವರಿಗೂ ತೋರಿಸಿದೆ. ನನ್ನ ತಮ್ಮನೇ ಚಳವಳಿಯಲ್ಲಿ ಭಾಗವಹಿಸಿ ಸೆರೆಮನೆ ಸೇರಿದುದನ್ನು ಕಂಡು ಆ ಜನರಿಗೆಲ್ಲ ನನ್ನ ವಿಷಯವಾಗಿ ಬಹಳ ವಿಶ್ವಾಸವುಂಟಾಯಿತು. ಪೋಲೀಸರನ್ನು ಆ ಕಾಲದಲ್ಲಿ ಯಾರೂ ನಂಬುತ್ತಿರಲಿಲ್ಲವಾದರೂ ನನ್ನೊಡನೆ ಮಾತ್ರ ಚರ್ಚೆಮಾಡಲು ಯಾರೂ ಹಿಂಜರಿಯುತ್ತಿರಲಿಲ್ಲ.

ಚಳವಳಿ ರಭಸದಿಂದ ಸಾಗಿತು. ಮತ್ತೆ ಕೆಲವು ಸೇತುವೆ ಮುರಿದು ಬಿದ್ದುವು. ಚಾವಡಿಗಳು ಅಗ್ನಿಗಾಹುತಿಯಾದುವು. ಕಾಂಗ್ರೆಸ್ಸಿನ ನೂರಾರು ಕಾರ್ಯಕರ್ತರು, ಹಿತೈಷಿಗಳು ಬಂಧಿತರಾದರು. ತಂತಿ ಕತ್ತರಿಸಿದವರನ್ನೂ ಸೇತುವೆ ಒಡೆದವರನ್ನೂ ಹುಡುಕಿ ಹಿಡಿಯುವ ಬಗೆಗೆ ನಮಗೆ ಆಜ್ಞೆ ಬಂತು. ಅವರನ್ನು ಬಂಧಿಸದಿದ್ದಲ್ಲಿ ನಮ್ಮ ನೌಕರಿಗೂ ಸಂಚಕಾರ ಬರಬಹುದೆಂಬ ಭಯವೂ ನಮ್ಮಲ್ಲಿ ಉದಯಿಸಿತು. ಹಳಗೇರಿ ಫೌಜದಾರರಂತೂ ದಿನವೂ ನಮ್ಮನ್ನು ಪೀಡಿಸಲಾರಂಭಿಸಿದರು.

ನನ್ನ ಅಧಿಕಾರದ ಭಾಗದಲ್ಲಿ ಮಾತ್ರ ಯಾವ ಗಲಾಟೆಯೂ ಇರಲಿಲ್ಲ. ಅಲ್ಲಿ ಚಾವಡಿಗಳೂ ಇರಲಿಲ್ಲವಾದುದರಿಂದ ಅವುಗಳನ್ನು ಸುಡುವ ಮಾತೇ

ಇರಲಿಲ್ಲ. ಗೌಡ ಕುಲಕರಣಿಯವರ ದಪ್ತರುಗಳನ್ನಂತೂ ನಾನು ಮೊದಲೇ ಸಾಗಿಸಿ ತಂದು ಕಚೇರಿಯಲ್ಲಿರಿಸಿದ್ದೆ. ಏನೋ, ಪ್ರಭಾತಫೇರಿ, ಸಭೆ, ಭಾಷಣಾದಿಗಳು ನಡೆಯುತ್ತಿದ್ದುವಷ್ಟೆ. ನಡೆದರೆ ನಡೆಯಲಿ ಎಂದು ನಾನು ಸುಮ್ಮನಿದ್ದೆ.

ಹಳ್ಳಿಯೊಂದರಲ್ಲಿ ನಾನು ಬಿಡಾರ ಮಾಡಿದ್ದಾಗ ಒಂದು ದಿನ ಪ್ರಭಾತ ಫೇರಿ ಹೊರಟಿತ್ತು. ನನ್ನನ್ನು ರೊಚ್ಚಿಗೆಬ್ಬಿಸಿ ಫಜೀತಿ ಮಾಡಬೇಕೆಂದು ಯೋಚಿಸಿಕೊಂಡು ಕೆಲವರು ನಾನಿದ್ದ ಗುಡಿಗೆ ಬಂದರು. ಅವರ ಮನಸ್ಸಿನಲ್ಲಿದ್ದುದನ್ನು ನಾನು ತಕ್ಷಣ ಊಹಿಸಿಕೊಂಡು ಹೊರಗೆ ಬಂದು 'ವಂದೇ ಮಾತರಂ' ಎಂದು ಘೋಷಿಸಿದೆ. ನನ್ನನ್ನು ಫಜೀತಿ ಮಾಡಲು ಬಂದಿದ್ದ ತುಂಟರು ಚಕಿತರಾಗಿ, ತಬ್ಬಿಬ್ಬಾಗಿ ನನ್ನನ್ನೇ ಮಿಕಿಮಿಕಿ ನೋಡುತ್ತಾ ತಾವೂ 'ವಂದೇ ಮಾತರಂ' ಎಂದರು. ನಾನು ಅಷ್ಟಕ್ಕೇ ಸುಮ್ಮನಾಗದೆ, 'ಭಾರತ ಮಾತಾಕೀ ಜೈ' ಎಂದು ಕೂಗಿದೆ. ನನ್ನನ್ನು ಫಜೀತಿಮಾಡಲು ಬಂದು ಸೇರಿದ್ದವರಿಗೇ ಫಜೀತಿಯಾಗುವ ಹೊತ್ತು ಬಂದಿತ್ತು. ನಾನು ಹಾಗೆ ಘೋಷಿಸುವುದರಿಂದ ನನ್ನ ನೌಕರಿ ಹೋಗಬಹುದೆಂಬ ಭಯವೇನೂ ನನಗಿರಲಿಲ್ಲ. 'ತಾಯಿಗೆ ನಮಸ್ಕಾರ,' 'ಭಾರತಮಾತೆಗೆ ಜಯವಾಗಲಿ' ಎಂದ ಮಾತ್ರಕ್ಕೆ ರಾಜದ್ರೋಹವಾಗುವುದಿಲ್ಲ. ಅದೊಂದು ಅಪರಾಧವೆಂದು ಬಗೆದು ನನ್ನನ್ನು ಶಿಕ್ಷಿಸುವಷ್ಟು ಅವಿವೇಕಿಯೂ ಆಗಿರಲಿಲ್ಲ ಸರಕಾರ. ಅಂತೆಯೆ, ನನಗೆ ಯಾವ ಭಯವೂ ಇರಲಿಲ್ಲ.

ಫೇರಿ ಹೊರಟಿದ್ದವರೆಲ್ಲ ಶಾಂತರಾದರು. ಚಳವಳಿಗೆ ನನ್ನ ಸಹಾನುಭೂತಿಯೂ ಇರುವುದೆಂದು ಅವರು ಭಾವಿಸಿಕೊಂಡಿರಲು ಸಾಕು. ಒಬ್ಬರಿಂದ ಇನ್ನೊಬ್ಬರಿಗೆ ತಿಳಿದು ಆ ವಿಷಯ ನನ್ನ ಭಾಗದ ಹಳ್ಳಿಗಳಿಗೆಲ್ಲ ಹರಡಿತು. ಜನರು ನನ್ನನ್ನು ಸಂಶಯದಿಂದ ನೋಡುವುದು ನಿಂತುಹೋಯಿತು. ಇತರ ಭಾಗಗಳ 'ಬೀಟ್ ಅಮಲ್ದಾರರು' ಹಳ್ಳಿಗಳಿಗೆ ಒಬ್ಬೊಬ್ಬರೇ ಹೋಗಲು ಹೆದರುತ್ತಿದ್ದರು. ನಾನು ಮಾತ್ರ ಯಾವ ಭಯವನ್ನೂ ಇಟ್ಟುಕೊಳ್ಳದೆ ಸಂಚರಿಸುತ್ತಿದ್ದೆ. ಆದರೆ, ಸರಕಾರೀ ಕಾಗದ ಪತ್ರಗಳನ್ನು ದಿನಚರಿಯನ್ನು ಮಾತ್ರ ಹತ್ತಿರ ಇಟ್ಟುಕೊಳ್ಳುತ್ತಿರಲಿಲ್ಲ. ಎಲ್ಲಿಯಾದರೂ ಯಾರದಾದರೂ ಹೇಳಿಕೆ ತೆಗೆದುಕೊಳ್ಳುವ ಪ್ರಸಂಗ ಬಂದಾಗ ಅದಕ್ಕೆ ಸಂಬಂಧಪಟ್ಟ ಕಾಗದ

ಪತ್ರಗಳನ್ನು ಓಲೇಕಾರನ ಹತ್ತಿರ ಕೊಟ್ಟುಬಿಡುತ್ತಿದ್ದೆ. ಅವನು ಅವುಗಳನ್ನು ಮಾರನೆಯದಿನ ಕಚೇರಿಗೆ ತಂದು ಮುಟ್ಟಿಸುತ್ತಿದ್ದ.

ಒಂದು ಬಾರಿ, ಇನ್ನೊಂದು ಭಾಗದ 'ಬೀಟ್ ಅಮಲ್ದಾರ'ನೊಬ್ಬ ರಜ ಪಡೆದುಕೊಂಡಿದ್ದುದರಿಂದ, ಅಲ್ಲಿಯ ಹಳ್ಳಿಯೊಂದರಲ್ಲಿ ಜಾರಿಮಾಡಬೇಕಾಗಿದ್ದ 'ಸಮನ್ಸ್' ಒಯ್ಯುವ ಕೆಲಸ ನನ್ನ ಪಾಲಿಗೆ ಬಂತು. ಆ ಭಾಗದಲ್ಲೂ ನನ್ನ ಪರಿಚಯದ ಜನರಿಗೇನೂ ಕೊರತೆಯಿರಲಿಲ್ಲ. ನಾನು 'ಸಮನ್ಸ್'ಗಳ ಸಮೇತ ಹೋಗಿ ಆ ಕೆಲಸ ಮುಗಿಸಿ ಕಾಗದಗಳನ್ನು ಓಲೇಕಾರನ ಹತ್ತಿರ ಕೊಟ್ಟು ತಿರುಗಿ ಕಚೇರಿಗೆ ಹೊರಟಿದ್ದಾಗ ಹಾದಿಯಲ್ಲಿ ಇಪ್ಪತ್ತು ಜನರದೊಂದು ಗುಂಪು ನಿಂತುಕೊಂಡಿದ್ದುದು ಕಾಣಿಸಿತು. ನನ್ನ ಹತ್ತಿರ ಇದ್ದ ಸರಕಾರೀ ಕಾಗದಗಳನ್ನು ಕಸಿದುಕೊಂಡು ನನ್ನನ್ನು ತೊಂದರೆಗೊಳಪಡಿಸಬೇಕೆಂದೇ ಅವರು ಗುಂಪುಗೂಡಿದ್ದುದು ಸ್ಪಷ್ಟವಾಗಿತ್ತು. ನನ್ನನ್ನು ಕಂಡೊಡನೆಯೆ ಅವರು ಒಬ್ಬೊಬ್ಬರಾಗಿ ಹಾದಿಯ ತುಂಬಾ ಸಾಲುಗಟ್ಟಿಕೊಂಡು ನನ್ನ ಕಡೆಗೆ ಬರತೊಡಗಿದರು. ನನ್ನನ್ನು ನಡುವೆ ಹಿಡಿದು ಕಾಗದ ಪತ್ರಗಳನ್ನಪಹರಿಸುವುದೇ ಅವರ ಉದ್ದೇಶವಾಗಿತ್ತು.

ಅವರ ನಡುವೆ ಹಾದುಹೋಗುವ ಹವ್ಯಾಸಕ್ಕೆ ಬೀಳದೆ ನಾನು ಸೈಕಲಿನಿಂದಿಳಿದು ಹಾದಿಯ ಒಂದು ಮಗ್ಗುಲಲ್ಲಿ ನಿಂತುಕೊಂಡು, ಸೈಕಲಿನ ಚಕ್ರಕ್ಕೆ ಗಾಳಿ ತುಂಬುವ 'ಪಂಪ್' ತೆಗೆಯತೊಡಗಿದೆ. ಅವರು ಸಮೀಪಕ್ಕೆ ಬಂದವರು ನನ್ನ ಹತ್ತಿರ ಬರದೆ ಹಾಗೇ ಮುಂದೆ ಸಾಗಿದರು. ಅಷ್ಟರಲ್ಲಿ ಅವರಲ್ಲೊಬ್ಬ,

"ಏನು ಸರದಾರರೇ, ನಮ್ಮನ್ನು ನೋಡಿದ ಕೂಡಲೆ ನಿಮ್ಮ ಸೈಕಲಿನ ಗಾಲಿಗಳ ಹವೆಯೂ ಹೋಯಿತೇ!" ಎಂದು ಅಣಕವಾಡಿದ.

"ಹೌದು ಮಹಾರಾಯಾ! ಭಾರತಮಾತೆಯ ವಿಮೋಚನೆಗಾಗಿ ಏನೂ ಮಾಡದೆ ಸುಮ್ಮನೆ ತಿರುಗುವ ನಿಮ್ಮನ್ನು ನೋಡಿ ನಾಚಿಕೆ ಬಂದು ಗಾಳಿಯೂ ಹಾರಿಹೋಯಿತು!" ಎಂದು ಉತ್ತರವಿತ್ತು ನಾನು ನಕ್ಕುಬಿಟ್ಟೆ. ಗುಂಪಿನಲ್ಲಿ ಅನೇಕರಿಗೂ ಆ ಮಾತು ಕೇಳಿ ನಗು ಬರದಿರಲಿಲ್ಲ. ಆದರೆ, ನನ್ನನ್ನು ಕೆಣಕಿ ಮಾತಾಡಿದವನಿಗೆ ಮಾತ್ರ ಮುಖಭಂಗವಾದಂತಾಗಿತ್ತು. ಅವನು ಹೇಳಿದ:

"ನಾವೇನೂ ಖಾಲೀ ತಿರುಗುವದಿಲ್ಲ, ನಿನ್ನೆಯೇ ನಮ್ಮೂರಿನ ಮುಂದಿನ ರಸ್ತೆಯ ಪೂಲು ಕೆಡವಿದ್ದೇವೆ. ಇನ್ನೂ ಕೆಡವುತ್ತೇವೆ."

“ಶಹಬ್ಬಾಸ್! ಒಳ್ಳೇ ಸಾಹಸದ ಕೆಲಸವನ್ನೇ ಮಾಡಿದಿರಿ! ನಿಮ್ಮ ಊರ ಮುಂದಿನ ರಸ್ತೆ, ನಿಮಗೇ ಉಪಯೋಗವಾಗುವ ರಸ್ತೆ. ಅದರ ಪೂಲು ನೀವು ಕೆಡವಿದಿರಿ. ಅಲ್ಲವಪ್ಪಾ, ಇನ್ನು ಮುಂದೆ ನಿಮ್ಮೂರಿನ ಚಕ್ಕಡಿಗಳು ಮುಂದೆ ಹೋಗುವುದು ಹ್ಯಾಗೆ? ನಿಮ್ಮ ಹಾದಿಯನ್ನೇ ನೀವು ಕೆಡಿಸಿ ಏನು ಪುರುಷಾರ್ಥ ಸಾಧಿಸಿದಿರಿ?”

“ಇನ್ನು ಇತ್ತ ಕಡೆಗೆ ಮಿಲಿಟರಿ ಬರುವಂತಿಲ್ಲ. ಪೋಲೀಸರು ಬರುವಂತಿಲ್ಲ. ಅವರ ಮೋಟಾರು ಓಡಾಡುವಂತಿಲ್ಲ.

“ಯಾಕೆ ಓಡಾಡಲಾರವು? ಮೋಟಾರು ದಾಟಿಸಲು ಮರದ ಹಲಗೆಗಳನ್ನಾಗಲಿ ಕಬ್ಬಿಣದ ತಗಡುಗಳನ್ನಾಗಲಿ ಅದೇ ಮೋಟಾರಿನಲ್ಲಿ ಹಾಕಿಕೊಂಡು ಬಂದು ಪೂಲಿನ ಮೇಲೆ ಅಡ್ಡ ಇಟ್ಟು ಅವರು ದಾಟಿಬರುವರು. ಅದೆಲ್ಲಾ ಬರಿಯ ಐದು ಮಿನಿಟಿನ ಕೆಲಸ. ನಿಮಗೆ ಇದೆಲ್ಲಾ ಏನು ಗೊತ್ತು? ನಾಳೆ ಭಾರತವು ಸ್ವತಂತ್ರವಾದ ಬಳಿಕ ಈ ಪೂಲುಗಳನ್ನು ಕಟ್ಟಿಸಲು ಹಣ ಬೇಡವೇನು? ಈಗ ಅವುಗಳನ್ನು ಕಟ್ಟಿರುವದಾದರೂ ಯಾರ ಹಣದಿಂದ? ಸರಕಾರದವರೇನು ಆ ಹಣವನ್ನು ಇಂಗ್ಲೆಂಡಿನಿಂದ ತಂದಿರಲಿಲ್ಲ. ಅದೂ ನಮ್ಮ ಹಣವೇ. ಮುಂದೆ ಬೇಕಾಗುವ ಹಣವನ್ನೂ ನಾವು ನೀವೇ ಕೊಡಬೇಕಾಗುವದು. ತಿಳಿಯಿತೇ? ಗಾಂಧೀಜಿಯವರು ‘ಮಾಡಿರಿ ಮಡಿಯಿರಿ’ ಅಂತ ಹೇಳಿದ್ದಾರೆ. ಪೂಲು ಒಡೆಯಿರಿ, ಸಾಲೆ ಸುಡಿರಿ ಅಂತ ಹೇಳಿಲ್ಲ ಅವರು. ನೀವು ಮಾಡಬಾರದ್ದೆಲ್ಲಾ ಮಾಡುತ್ತಿದ್ದೀರಿ. ಸಭೆ ಮೆರವಣಿಗೆ ಮಾಡಿರಿ, ಬೇಡವಾದರೆ ಸರಕಾರದ ಕಾಯದೆಗಳನ್ನು ಪಾಲಿಸಬೇಡಿರಿ. ಹಪ್ತೆ ಕೊಡಬೇಡಿರಿ. ಯುದ್ಧನಿಧಿಗೆ ಸಹಾಯಮಾಡಬೇಡಿರಿ. ಆದರೆ, ಇಂಥಾ ಹುಚ್ಚುಚ್ಚು ಕೆಲಸ ಮಾಡಿದರೆ ಏನು ಉಪಯೋಗ? ನಾನೇನೋ ಸರಕಾರೀ ನೌಕರ. ನಾನು ನೀರಡಿಸಿ ಬಂದರೆ ನೀರು ಕೂಡಾ ಕೊಡಬಾರದೆಂದು ಗಾಂಧಿಯವರಾಗಲಿ ನೆಹರೂರವರಾಗಲಿ ಹೇಳಿಲ್ಲ. ಪೋಲೀಸರಿಗಷ್ಟೇ ಯಾಕೆ, ಭಾರತದ ವೈರಿಗಳಾದ ಬ್ರಿಟಿಷರಿಗೂ ಕೂಡಾ ನೀರು ಕೊಡದಿರಲಾರರು ಗಾಂಧಿಯವರು. ನೀರಡಿಸಿದವನಿಗೆ ನೀರು ಕೊಡುವದು ಮಾನವಧರ್ಮ. ಹೌದೋ ಅಲ್ಲವೋ?”

ನನ್ನನ್ನೇ ನಾನು ಮರೆತು ಮಾತನಾಡುತ್ತಿದ್ದೆ. ಎಷ್ಟು ಹೊತ್ತು ಹಾಗೆ

ಮಾತನಾಡುತ್ತಿದ್ದೆನೋ ತಿಳಿಯದು. ಗುಂಪಿನವರೆಲ್ಲಾ ಮಂತ್ರಮುಗ್ಧರಾದವರಂತೆ ನನ್ನ ಸುತ್ತಲೂ ಕುಳಿತು ನನ್ನ ಮಾತು ಆಲಿಸುತ್ತಿದ್ದರು.

"ನಾನು ಪೋಲೀಸ. ಹೌದು. ನಾನು ಸರಕಾರೀ ನೌಕರ. ಹೌದು. ಸರಕಾರೀ ನೌಕರಿಗೆ ರಾಜೀನಾಮೆ ಕೊಡಬೇಕೆಂದು ನೀವು ಹೇಳಬಹುದು. ಆದರೆ, ನಾನು ಸಂಸಾರಿಕ. ನನ್ನನ್ನವಲಂಬಿಸಿಕೊಂಡ ಜನರಿದ್ದಾರೆ. ನಾವು ಶ್ರೀಮಂತರಲ್ಲ. ನಿಮ್ಮ ಹಾಗೆ ನಮಗೆ ಹೊಲವಿಲ್ಲ. ಈಗ ನಾನು ರಾಜೀನಾಮೆ ಕೊಟ್ಟರೆ ನಾವೆಲ್ಲ ಉಪವಾಸ ಬೀಳಬೇಕಾಗುವದು. ಅಂಥ ಪ್ರಸಂಗ ಹಿಂದೆ ಬಂದದ್ದರಿಂದಲೇ ನಾನು ಈ ನೌಕರಿಗೆ ಸೇರಿಕೊಂಡದ್ದು. ನಿಜವಾಗಿ ಪೋಲೀಸನಾಗುವ ಮನಸು ನನಗಿರಲಿಲ್ಲ. ನಾನೂ ಮ್ಯಾಟ್ರಿಕ್ ಪಾಸಾದವನು. ಗಾಂಧಿ ನೆಹರೂ ವಿವೇಕಾನಂದರಲ್ಲಿ ಭಕ್ತಿಯಿಟ್ಟವನು. ದೇಶಕ್ಕಾಗಿ ಏನನ್ನಾದರೂ ಮಾಡಬೇಕೆಂಬ ಕಳಕಳಿಯೂ ನನ್ನಲ್ಲಿತ್ತು. ಆದರೆ, ಮೊದಲು ಹೊಟ್ಟೆ ತುಂಬಿಸಿಕೊಳ್ಳಬೇಕಲ್ಲವೆ? ಅನಂತರ ದೇಶದ ವಿಚಾರ. ಹೊಟ್ಟೆ ಪಾಡಿಗಾಗಿ ನೌಕರಿ ಹಿಡಿದದ್ದು ನನ್ನ ತಪ್ಪೇ? ಇದು ತಪ್ಪೆಂದು ಗಾಂಧೀಯವರೆಂದೂ ಹೇಳಲಿಕ್ಕಿಲ್ಲ. ನೀವು ನಮ್ಮಂಥವರಿಗೆ ತೊಂದರೆ ಕೊಡುವದನ್ನೂ ಅವರೆಂದೂ ಒಪ್ಪಲಿಕ್ಕಿಲ್ಲ. ಅವರ ಭಾಷಣಗಳನ್ನೂ ಲೇಖನಗಳನ್ನೂ ನಾನೂ ತಪ್ಪದೆ ಓದುತ್ತಿರುತ್ತೇನೆ. ಅವರ ಅಭಿಪ್ರಾಯಗಳೇನು ಅನ್ನುವದೆಲ್ಲಾ ನನಗೆ ಚೆನ್ನಾಗಿ ಗೊತ್ತಿದೆ."

ನನ್ನನ್ನು ಕೆಣಕಿ ಅಣಕವಾಡಿದ ಯುವಕನಿಗೆ ಪಶ್ಚಾತ್ತಾಪವಾಗಿತ್ತು.

"ತಿಳಿಯದೆ ನಿಮಗೆ ಏನೋ ಅಂದೆ. ನಿಮ್ಮ ವಿಚಾರ ಹೀಗಿರಬಹುದೆಂದು ಗೊತ್ತಿರಲಿಲ್ಲ. ಕ್ಷಮಿಸಬೇಕು," ಎಂದು ಅವನು ಕೇಳಿಕೊಂಡ.

ನಾನು ಮುಗುಳ್ನಕ್ಕು, ಅವನನ್ನು ಸಂತೈಸಿ, ಅವರನ್ನೆಲ್ಲ ಬೀಳ್ಕೊಂಡು, 'ವಂದೇಮಾತರಂ' ಎಂದು ಕೂಗಿ ಸೈಕಲ್ ಏರಿ ಹೊರಟುಬಿಟ್ಟೆ.

ನನಗೆ ಒಳಗೊಳಗೇ ನಗುವುಕ್ಕಿ ಬರುತ್ತಿತ್ತು. ಎಷ್ಟು ಸುಲಭವಾಗಿ ಆ ಪ್ರಸಂಗದಿಂದ ನಾನು ಪಾರಾಗಿದ್ದೆ! ಆ ಸಂದರ್ಭದಲ್ಲಿ ನಾನು ಸ್ವಲ್ಪ ವಿವೇಕವನ್ನುಪಯೋಗಿಸದಿದ್ದಲ್ಲಿ ಅವರು ನನ್ನ ಮೈಮೇಲೇರಿ ಬಂದು ನನ್ನನ್ನು ಹೊಡೆಯುವ ಸಂಭವವೂ ಇತ್ತು.

'ಸಮನ್ಸ್' ಜಾರಿಮಾಡಿ ನಾನು ಸುಖರೂಪವಾಗಿ ಕಚೇರಿಗೆ ಬಂದು ಮುಟ್ಟಿದುದನ್ನು ಕಂಡು ಫೌಜದಾರರಿಗೆ ಆಶ್ಚರ್ಯವಾಗದಿರಲಿಲ್ಲ. ಹಾದಿಯಲ್ಲಿ ನಡೆದುದೆಲ್ಲವನ್ನೂ ನಾನು ವಿವರಿಸಿ ಹೇಳಿದೆ. ಹಾಗೆ ಹೇಳಬಾರದಾಗಿದ್ದಿತೇನೊ. ಅನಂತರ, ಹಳ್ಳಿಗಳಿಗೆ ಹೋಗುವ ಕೆಲಸವನ್ನು ಅವರು ನನಗೇ ಒಪ್ಪಿಸ ತೊಡಗಿದರು.

೧೮

## ಫೌಜದಾರರ ಮತ್ಸರ ದೃಷ್ಟಿ

ಹಳ್ಳಿಗಳಲ್ಲಿ ಕಾಲಿಡಲು ಫೌಜದಾರರಿಗೂ ಹೆದರಿಕೆಯಾಗತೊಡಗಿತ್ತು. ನಾಲ್ಕು ಜನ ಪೋಲೀಸರನ್ನು ಜತೆಗೆ ಕರೆದುಕೊಳ್ಳದೆ ಅವರು ಹೊರಗಡೆ ಹೋಗುತ್ತಿರಲಿಲ್ಲ. ಚಳವಳಿಗಾರರು ತಮ್ಮ ಪಿಸ್ತೂಲನ್ನೇ ಕಸಿದುಕೊಂಡುಬಿಡಬಹುದೆಂಬ ಭೀತಿಯೂ ಅವರಿಗಿತ್ತು. ಹಾಗಾಗುವುದು ಅಸಂಭವವೂ ಆಗಿರಲಿಲ್ಲ. ಚಳವಳಿಯಲ್ಲಿ ಸೇರಿಕೊಂಡವರೆಲ್ಲರೂ ಅಹಿಂಸಾವಾದಿಗಳಾಗಿರಲಿಲ್ಲ. ಪೋಲೀಸರ ಬಂದೂಕಗಳನ್ನೂ ಪಿಸ್ತೂಲುಗಳನ್ನೂ ಅಪಹರಿಸುವುದೂ ಚಳವಳಿಯ ಕಾರ್ಯಕ್ರಮಗಳಲ್ಲಿ ಅಡಕವಾಗಿತ್ತು. ಅಂತೆಯೆ, ಫೌಜದಾರರು ಹಳ್ಳಿಗಳಿಗೆ ಹೋಗುವ ಕೆಲಸವನ್ನು ನನಗೇ ಒಪ್ಪಿಸತೊಡಗಿದರು. ನಾನು ಯಾವುದೊಂದು ಗಂಡಾಂತರದಲ್ಲಿ ಸಿಕ್ಕಿಬಿದ್ದು ಫಜೀತಿ ಹೊಂದಬೇಕೆಂಬುದೇ ಅವರ ಆಶಯವಾಗಿತ್ತು.

ಅವರ ಆಜ್ಞೆಯನ್ನು ಮೀರುವಂತಿರಲಿಲ್ಲ. ನಾನೊಬ್ಬನೇ ಗ್ರಾಮೀಣ ಭಾಗಗಳಲ್ಲಿ ಅಲೆಯತೊಡಗಿದೆ. ಯಾವ ತೊಂದರೆಗಳಿಗೂ ಸಿಲುಕಿಕೊಳ್ಳದೆ ನಾನು ನನ್ನ ಕರ್ತವ್ಯಗಳನ್ನು ಸಮರ್ಪಕವಾಗಿ ನಿರ್ವಹಿಸಿಕೊಂಡು ಹೋಗುತ್ತಿದ್ದುದೂ ಕೂಡ ಅವರಿಗೆ ಸಹನೆಯಾಗುವಂತಿರಲಿಲ್ಲ. ಅವರ ಮನಸ್ಸಿನಲ್ಲಿ ಯಾವಾಗಲೂ ತಳಮಳವೇ. ಅವರ ಮತ್ಸರಗ್ರಸ್ತ ಸ್ವಭಾವವೆಂದರೆ ನನಗೆ ಹೇಸಿಕೆ. ಅವರನ್ನು ಯಾವುದೊಂದು ಬಿಕ್ಕಟ್ಟಿನ ಪ್ರಸಂಗದಲ್ಲಿ ಸಿಲುಕಿಸಿ ಅವರನ್ನು ಮನೆಗೆ ಕಳಿಸುವುದೇನೂ ಪ್ರಯಾಸದ ಕೆಲಸವಾಗಿರಲಿಲ್ಲ ನನಗೆ. ಆದರೆ, ಹಾಗೆ ತೊಂದರೆ ಕೊಡಲು ನನಗೇ ಇಚ್ಛೆಯಿರಲಿಲ್ಲ. ಅವರ ದೊಡ್ಡ

ಕುಟುಂಬವನ್ನು ಕಂಡು, ಎಲ್ಲ ಕೋಪವನ್ನೂ ಎಲ್ಲ ಅಸಹನೆಯನ್ನೂ ಸಹಿಸಿಕೊಂಡು ಸುಮ್ಮನಾಗಿದ್ದೆ.

ಇದ್ದುದಿದ್ದ ಹಾಗೇ ಒಂದು ದಿನ ಡಿ.ಎಸ್.ಪಿ. ಯವರು ನಮ್ಮ ಕಚೇರಿಗೆ ಆಗಮಿಸಿದರು. ಚಳವಳಿಯನ್ನು ಶೀಘ್ರವಾಗಿ ಸದೆಬಡೆಯುವುದೇ ಅವರ ಪ್ರವಾಸದ ಮುಖ್ಯೋದ್ದೇಶವಾಗಿತ್ತು. ನಮ್ಮ ಕಚೇರಿಯ ರಜಿಸ್ಟರನ್ನು ತೆಗೆದು, ಅಂಚೆಯ ತಂತಿ ಕತ್ತರಿಸಿದ್ದು, ಸಭೆ-ಭಾಷಣ, ಮೆರೆವಣಿಗೆ ನಡೆದದ್ದು, ಸೇತುವೆ ಒಡೆದದ್ದು ಮೊದಲಾದ ಅಪರಾಧಗಳನ್ನು ನೋಡಿದರು. ಈ ಪ್ರಕರಣಗಳ ಬಗೆಗೆ ಒಬ್ಬರೂ ಬಂಧಿಸಲ್ಪಟ್ಟರಲಿಲ್ಲ. ಆಂಗ್ಲರಾಗಿದ್ದ ಸಾಹೇಬರಿಗೆ ಸ್ವಾಭಾವಿಕವಾಗಿಯೇ ಸಿಟ್ಟು ಬಂದಿತು.

“ನೀವು ಒಬ್ಬರನ್ನೂ ಅರೆಸ್ಟ್ ಮಾಡಿಲ್ಲವಲ್ಲ. ಕಾರಣವೇನು?”

ಫೌಜದಾರರು ಏನೆಂದು ಉತ್ತರವೀಯಬೇಕು? ಅವರು ತುಟಿ ಬಿಚ್ಚದೆ ಮೌನವಾಗಿ ನಿಂತುಕೊಂಡಿದ್ದರು.

“ಒಂದು ತಿಂಗಳಿನೊಳಗಾಗಿ ಈ ಅಪರಾಧಗಳೆಲ್ಲಾ ಪತ್ತೆಯಾಗಬೇಕು. ಇಲ್ಲವಾದರೆ ನಿಮ್ಮನ್ನು ಹಿಂಬಡತಿ ಮಾಡಬೇಕಾಗುವದು,” ಎಂದು ಸ್ಪಷ್ಟ ಶಬ್ದಗಳಲ್ಲಿ ಎಚ್ಚರಿಕೆ ಕೊಟ್ಟರು ಸಾಹೇಬರು.

‘ಬೀಟ್ ಅಮಲ್ದಾರರ’ ಸರದಿ ಬಂತು. ನಾಲ್ವರೂ ಹೋಗಿ ಸಾಹೇಬರ ಮುಂದೆ ನಿಂತುಕೊಂಡೆವು.

“ನನ್ನ ಬೀಟನಲ್ಲಿ ಯಾವ ಅಪರಾಧವೂ ನಡೆದಿಲ್ಲ ಸಾಹೇಬರೆ,” ಎಂದು ನಾನು ಹೇಳಿದೆ.

“ಯಾಕೆ?”

ನಾನು ಕೈಗೊಂಡಿದ್ದ ಮುಂಜಾಗ್ರತೆಯ ಕ್ರಮಗಳನ್ನೆಲ್ಲ ವಿವರಿಸಿ ಹೇಳುತ್ತಲೂ ಸಾಹೇಬರಿಗೆ ಬಹಳ ಆನಂದವಾಯಿತು.

“Well done young man! ನಿನಗೆ ಇಪ್ಪತ್ತೈದು ರೂಪಾಯಿ ಇನಾಂ ಕೊಟ್ಟದ್ದೇನೆ,” ಎಂದು ಹೇಳಿ ತಕ್ಷಣ ತಮ್ಮ ಜೇಬಿನಿಂದಲೇ ರೂಪಾಯಿ ತೆಗೆದುಕೊಟ್ಟರು.

ಸಾಹೇಬರ ಸಂಗಡ ಬಂದಿದ್ದ ನಮ್ಮ ಇನ್ಸ್‌ಪೆಕ್ಟರರಿಗೂ ಅದನ್ನು ಕಂಡು ಬಹಳ ಹರುಷವಾಯಿತು. ಯಾವಾಗಲೂ ನನ್ನ ಉತ್ಕರ್ಷವನ್ನು ಬಯಸುತ್ತಿದ್ದ

ವರು ಅವರು. ಒಂದು ತಾಸಿನವರೆಗೆ ಸಾಹೇಬರೆದುರಿಗೆ ನನ್ನ ಶಿಫಾರಸು ಮಾಡಿದರು. ಅದನ್ನಾಲಿಸುತ್ತಿದ್ದ ಹಾಗೆ ಫೌಜದಾರರಿಗೆ ಇನ್ನಷ್ಟೂ ಮತ್ಸರ ವಾಗಿರಲು ಸಾಕು.

ಮತ್ತೆ ಸಾಹೇಬರು ಫೌಜದಾರರನ್ನುದ್ದೇಶಿಸಿ ಕೇಳಿದರು :

"ಈ ಅಪರಾಧಗಳನ್ನೆಲ್ಲ ಯಾರು ನಡಸುತ್ತಿರಬಹುದು ?"

ಫೌಜದಾರರಿಗೆ ಆ ವಿಚಾರವೂ ಗೊತ್ತಿರಲಿಲ್ಲ. ಆದರೂ ಸಾಹೇಬ ರೆದುರಿಗೆ ಕೆಲವರ ಹೆಸರು ಹೇಳದೆ ವಿಧಿಯಿರಲಿಲ್ಲವಾದುದರಿಂದ ನಾಲ್ಕೈದು ಜನರ ಹೆಸರು ಹೇಳಿದರು. ಪಾಪ. ಅವರೆಲ್ಲರೂ ಸಾಧುಪ್ರಾಣಿಗಳು. ವಿಧ್ವಂಸಕ ಕೃತ್ಯಗಳಿಗೂ ಅವರಿಗೂ ಕೊಂಚವೂ ಸಂಬಂಧವಿರಲಿಲ್ಲ. ಅಂಥವ ರನ್ನು ಬಂಧಿಸುವುದು ಉಚಿತವಲ್ಲವೆಂದು ನಾನು ಇನ್ಸ್‌ಪೆಕ್ಟರರಿಗೆ ತಿಳಿಸಿದೆ. ಅವರ ಮೂಲಕ ಆ ವಿಚಾರ ಸಾಹೇಬರವರೆಗೂ ಹೋಯಿತು.

ಮಾರನೆಯ ದಿನ ಆ ಜನರನ್ನು ಬಂಧಿಸಿತರುವ ಕೆಲಸವನ್ನು ನನಗೇ ಒಪ್ಪಿಸುವ ಮಾತಿಗಾರಂಭಿಸಿದರು ಫೌಜದಾರರು.

"ನನ್ನ ಬೀಟಿನಲ್ಲಿ ಯಾರನ್ನು ನಾನು ಬಂಧಿಸಿತರಬಲ್ಲೆ. ಬೇರೆ ಪೋಲೀಸರ ಬೀಟಿನ ಜನರನ್ನು ನಾನೇಕೆ ತರಲಿ ?"

ನಾನೇ ಹೋಗಿ ಅವರನ್ನು ಬಂಧಿಸತಕ್ಕದ್ದೆಂದು ಬರೆಹದ ಮೂಲಕ ಆಜ್ಞೆ ವಿಧಿಸಿದರು ಫೌಜದಾರರು.

ಅದು ನನ್ನ ಕರ್ತವ್ಯವಲ್ಲವೆಂದು ನಾನೂ ಅವರಿಗೆ ಬರೆಹದ ಮೂಲಕ ತಿಳಿಸಿದೆ.

ಇನ್ಸ್‌ಪೆಕ್ಟರರ ಮೂಲಕ ಆ ಸಂಗತಿಯೆಲ್ಲವೂ ಸಾಹೇಬರಿಗೆ ಗೊತ್ತಾ ಗುತ್ತಲೂ ಆ ಬೀಟಿನ ಅಮಲ್ದಾರರನ್ನೇ ಕಳಿಸಬೇಕೆಂದು ಅವರು ಅಪ್ಪಣೆ ಮಾಡಿದರು ಸರದಾರರು ಹೋಗಿ ಆ ಜನರನ್ನು ಬಂಧಿಸಿ ತಂದರು. ಆ ಭಾಗದ ಜನರಿಗೆಲ್ಲ ಪ್ರೀತ್ಯಾಸ್ಪದರಾಗಿದ್ದ ಆ ಪ್ರಮುಖರನ್ನು ಬಂಧಿಸಿದೊಡನೆಯೆ ಜನರು ರೊಚ್ಚಿಗೆದ್ದರು. ಮರುದಿನವೇ ಮತ್ತೆ ನಾಲ್ಕಾರು ಮೈಲು ಉದ್ದವಾದ ತಂತಿ ಕತ್ತರಿಸಲಾಯಿತು. ಸಾಹೇಬರ ವಸತಿ ತೊಂಡೇಬಾವಿಯಲ್ಲಿದ್ದಾಗಲೇ ಪಟೇಲರ ವರದಿಗಳು ಬಂದುವು.

"ಈಗ ಬಂಧಿತರಾಗಿರುವ ಜನರೇ ಹಿಂದೆಯೂ ತಂತಿ ಕಡಿದಿದ್ದರೆ ಈಗ

ಅವರು ಲಾಕಪ್ಪಿನಲ್ಲಿರುವಾಗಲೂ ತಂತಿ ಕತ್ತರಿಸಿದವರಾರು?" ಎಂದು ಸಾಹೇಬರು ಫೌಜದಾರರಿಗೆ ಸವಾಲು ಹಾಕಿದರು.

ಫೌಜದಾರರು ತೆಪ್ಪಗೆ ನಿಂತುಕೊಂಡಿದ್ದರು. ಅವರು ಏನೆಂದು ಉತ್ತರ ನೀಡಬೇಕು?

"ಇಲ್ಲಿಯ ರಾಜದ್ರೋಹಿಗಳನ್ನೆಲ್ಲಾ ಒಂದೇ ದಿನದಲ್ಲಿ ಬಂಧಿಸಿ ತರಬೇಕು," ಎಂದು ಸಾಹೇಬರ ಆಜ್ಞೆಯಾಯಿತು.

ಫೌಜದಾರರಿಗೆ ಪೀಕಲಾಟಕ್ಕಿಟ್ಟುಕೊಂಡಿತ್ತು. ನನ್ನ ಸಲಹೆ ಕೇಳುವುದಕ್ಕೆ ಅವರ ದುರಭಿಮಾನ ಅಡ್ಡಬರುತ್ತಿತ್ತು. ಒಬ್ಬ ಸಾಧಾರಣ ಸಿಪಾಯಿಯನ್ನು ಸಬ್‌ಇನ್ಸ್‌ಪೆಕ್ಟರರು ಸಲಹೆ ಕೇಳುವುದೇ! ಛೆ!

ಇನ್ನಿತರ ಸಿಪಾಯಿಗಳನ್ನೆಲ್ಲ ಕರೆದು ಅಪರಾಧಿಗಳನ್ನು ಹುಡುಕಿ ಬಂಧಿಸಲು ಆಜ್ಞೆ ವಿಧಿಸಿದರು. ಕಾರಕೂನ ಮತ್ತು ಬಾರನಿಸಿ ಇಬ್ಬರೂ ಕಚೇರಿಯಲ್ಲಿರುವವರು. ಜಮಾದಾರರು ಮೊಕದ್ದಮೆಗಳಿಗಾಗಿ ಓಡಾಡುವವರು. ಅವರು ಹಳ್ಳಿಗಳಿಗೆ ಹೋಗುವಂತಿರಲಿಲ್ಲ.

"ನೀವೂ ಹೋಗಿ ಅಪರಾಧಿಗಳ ಬಗ್ಗೆ ಸುದ್ದಿ ತೆಗೆದುಕೊಂಡು ಬರ್ರಿ," ಎಂದು ನನಗೆ ಆಜ್ಞೆ ವಿಧಿಸಿದರು ಫೌಜದಾರರು.

"ನನ್ನ ಬೀಟಿನಲ್ಲಿ ಒಂದೂ ಅಪರಾಧವಾಗಿಲ್ಲ. ನಾನೇನು ಸುದ್ದಿ ತರಲಿ?" ಎಂದು ನಾನು ಉತ್ತರವಿತ್ತೆ.

ಫೌಜದಾರರು ಕೆರಳಿ ಸಾಹೇಬರ ಹತ್ತಿರ ಹೋಗಿ ನನ್ನ ವಿರುದ್ಧವಾಗಿ ಏನೇನನ್ನೋ ಹೇಳಿದರು. ನಮ್ಮ ಕಚೇರಿಯ ಕ್ಷೇತ್ರದಲ್ಲೆಲ್ಲ ವಿಧ್ವಂಸಕ ಕೃತ್ಯಗಳು ನಡೆಯಲು ನಾನೇ ಕಾರಣ, ನನ್ನ ಪ್ರೋತ್ಸಾಹದಿಂದಾಗಿಯೇ ನನ್ನ ಬೀಟಿನ ಜನರು ಇತರ ಕಡೆಗಳಿಗೆ ನುಗ್ಗಿ ವಿಧ್ವಂಸಕ ಕೃತ್ಯ ನಡೆಸುತ್ತಿರುವರು, ನನ್ನ ತಮ್ಮ ಚಳವಳಿಯಲ್ಲಿ ಸೇರಿ ಜೇಲಿಗೆ ಹೋಗಿದ್ದಾನೆ, ಚಳವಳಿಯ ಬಗ್ಗೆ ನನಗೂ ಸಹಾನುಭೂತಿಯಿದೆ – ಎಂದು ಮೊದಲಾಗಿ ಹೇಳಿದ್ದರು. ಸಾಹೇಬರಿಗೂ ಆ ವೇಳೆಯೊಳಗಾಗಿ ಫೌಜದಾರರ ರೀತಿ ನಡತೆಗಳು ಅರ್ಥವಾಗಿದ್ದುವು. ನನ್ನ ವಿರುದ್ಧವಾಗಿ ಫೌಜದಾರರು ಹೇಳಿದುದನ್ನು ಸಾಹೇಬರು ನಂಬಲಿಲ್ಲ.

"ಓರ್ವ ಪೋಲೀಸ್ ಸಿಪಾಯಿಯ ಮೇಲೆ ಫೌಜದಾರನಾಗಿರುವವನು ದ್ವೇಷವಿಟ್ಟುಕೊಳ್ಳುವದು ಒಳ್ಳೆಯದಲ್ಲ. ಶಿವಣ್ಣ ಹುಷಾರ್ ಇದ್ದಾನೆ. ಅವನ

ಸಹಾಯ ಪಡೆದು ಅಪರಾಧಿಗಳನ್ನು ಬಯಲಿಗೆಳೆಯಿರಿ. ಇಲ್ಲವಾದರೆ ನೀವು ಮತ್ತೆ ಜಮಾದಾರರಾಗಬೇಕಾದೀತು!" ಎಂದು ಫೌಜದಾರರನ್ನು ಗದರಿಸಿದ್ದರು ಸಾಹೇಬರು.

ನನ್ನನ್ನು ಬೆದರಿಸಲು ಫೌಜದಾರರು ಮಾಡಿದ ಯತ್ನ ಹಾಗೆ ವಿಫಲವಾಯಿತು.

ಹಳ್ಳಿಗಳಿಗೆ ಹೋಗಿದ್ದ ಪೋಲೀಸರೆಲ್ಲರೂ ಹಿಂದಿರುಗಿ ಬಂದರು. ಯಾರಿಂದಲೂ ಯಾವ ಸಂಗತಿಯೂ ತಿಳಿಯಲಿಲ್ಲ.

ಫೌಜದಾರರು ನನ್ನನ್ನು ಕರೆದು, ಸ್ವತಃ ಡಿ.ಎಸ್.ಪಿ. ಯವರೇ ನಾನು ಆ ಕೆಲಸ ಕೈಗೊಳ್ಳಬೇಕೆಂದು ಹೇಳಿರುವರೆಂದೂ ನಾನು ಹಳ್ಳಿಗಳಿಗೆ ಹೋಗಲೇ ಬೇಕೆಂದೂ ಆಗ್ರಹಪಡಿಸಿದರು. ಆ ಕೆಲಸ ನನ್ನಿಂದಾಗದೆಂದು ನಾನು ಸ್ಪಷ್ಟವಾಗಿ ಹೇಳಿಬಿಟ್ಟೆ. ಫೌಜದಾರರ ಒಣಜಂಬ– ದರ್ಪಗಳು ಇಳಿಯುವ ವರೆಗೂ ನಾನು ಏನನ್ನೂ ಮಾಡಲು ಸಿದ್ಧನಿರಲಿಲ್ಲ. ಮತ್ತೆ ಸಾಹೇಬರವರೆಗೆ ದೂರು ಹೋಯಿತು. ಸಾಹೇಬರು ನನ್ನನ್ನು ಕರೆದು ವಿಚಾರಿಸಿದಾಗ ನಾನು ಆ ಫೌಜದಾರರ ರೀತಿನೀತಿ, ಅವರು ನನ್ನನ್ನು ನಡಸಿಕೊಳ್ಳುತ್ತಿದ್ದ ಹೀನವೃತ್ತಿ ಎಲ್ಲವನ್ನೂ ಬಿಡದೆ ಹೇಳಿದೆ. ಸಾಹೇಬರು ಫೌಜದಾರರನ್ನು ಚೆನ್ನಾಗಿ ಬಯ್ದು ನನ್ನನ್ನು ಆ ಕೆಲಸಕ್ಕೆ ನೇಮಿಸಿದರು.

ಕೆಲದಿನಗಳ ಹಿಂದೆ, ಹಳ್ಳಿಯೊಂದರ ಬಳಿ ನನ್ನನ್ನು ತಡೆದಿದ್ದ ಗುಂಪಿನ ಜನರಿದ್ದ ಊರಿಗೆ ಹೋಗಿ, ದೇವಸ್ಥಾನದಲ್ಲಿ ಅವರೆಲ್ಲರನ್ನೂ ಕೂಡಿಸಿ ನಾನು ಮಾತನಾಡತೊಡಗಿದೆ:

"ಇಂದು ದೇಶದಲ್ಲೆಲ್ಲಾ ಚಳವಳಿ ಬೇಗೆಯಂತೆ ಹಬ್ಬಿದೆ. ಸಾವಿರದ ಸಂಖ್ಯೆಯಲ್ಲಿ ಜನರು ಜೇಲಿಗೆ ಹೋಗಿದ್ದಾರೆ. ಜೇಲುಗಳು ತುಂಬಿಹೋದದ್ದರಿಂದ ಕೆಲವುಕಡೆ ಖಾಸಗೀ ಬಂಗಲೆಗಳನ್ನೂ ಸೆರೆಯಾಳುಗಳನ್ನಿಡಲು ಉಪಯೋಗಿಸುತ್ತಿದ್ದಾರೆ. ಇಂದು ಎಷ್ಟು ಜನರು ಜೇಲಿಗೆ ನುಗ್ಗುವರೋ ಅಷ್ಟು ಒಳ್ಳೆಯದು. ಮುದುಕರು ಮಕ್ಕಳು ಗಂಡಸರು ಹೆಂಗಸರು ಎಲ್ಲರೂ ಜೇಲು ಸೇರಬೇಕು. ನಿಮ್ಮ ಬೇಡಿಕೆಯ ಅರಿವು ಆಗ ಬಂದೀತು ಸರಕಾರಕ್ಕೆ. ನೀವು ಈ ಕೆಲಸ ಮಾಡದೆ ಪೂಲು ಒಡೆಯುವುದು, ರಸ್ತೆ ಕೆಡಿಸುವದು ಮಾಡುತ್ತಾ ಕೂತಿದ್ದೀರಿ. ನಿಮ್ಮೂರಿನಿಂದ ಹತ್ತಿಪ್ಪತ್ತು ಜನರಾದರೂ ಜೇಲಿಗೆ ಹೋದರೆ

ನಿಮಗೆ ಸ್ವಾತಂತ್ರ್ಯ ಬೇಕೆಂಬ ಕಲ್ಪನೆ ಸರಕಾರಕ್ಕೆ ಬಂದೀತು. ಪ್ರಸಂಗ ಬಂದರೆ ನಮ್ಮಂಥವರೂ ಬರಬಹುದು ನಿಮ್ಮ ಸಂಗಡ. ಸರಕಾರ ಇದುವರೆಗೂ ನಿಮ್ಮನ್ನು ಬಂಧಿಸದಿರಲು ಒಂದು ಕಾರಣವಿದೆ. ಜೇಲಿನಲ್ಲಿ ನಿಮ್ಮ ಖರ್ಚುವೆಚ್ಚ ನೋಡಿ ಕೊಳ್ಳಲು ಅದಕ್ಕೆ ಶಕ್ತಿಯಿಲ್ಲ. ಹಣವನ್ನೆಲ್ಲಾ ಯುದ್ಧದಲ್ಲಿ ತೊಡಗಿಸಿ ಅದು ಬಡವಾಗಿದೆ. ನಿಮ್ಮನ್ನು ಜೇಲಿಗೆ ಹಾಕಲು ಅದಕ್ಕೆ ಮನಸ್ಸಿಲ್ಲ. ನೀವು ಸುಮ್ಮ ನಿರದೆ ಜೇಲಿಗೆ ನುಗ್ಗಿ ಸರಕಾರವನ್ನು ತೊಂದರೆಗೆ ಸಿಕ್ಕಿಸಬೇಕು. ನಾಳೆಯೇ ನಮ್ಮ ಕಚೇರಿಗೆ ಬಂದು ಹಾಜರಾಗಿರಿ. ಈಗ ಆಗಬೇಕಾದ ಕೆಲಸವೆಂದರೆ ಇದೇ – ಗಾಂಧಿಯವರು ನಿಮಗೆ ಮಾಡಲು ಹೇಳಿದ್ದೂ ಇದನ್ನೇ."

"ಹೌದಪ್ಪಾ. ಇವರು ಹೇಳುವದೂ ಬರಾಬರಿ," ಎಂದು ಆ ಜನರು ತಮ್ಮ ತಮ್ಮಲ್ಲಿಯೆ ಮಾತನಾಡಿಕೊಂಡರು. ಅಂಚೆಯ ತಂತಿ ಕತ್ತರಿಸಿದವರೂ, ಸೇತುವೆಗಳನ್ನೊಡೆದವರೂ ಆ ಗುಂಪಿನವರೇ ಎಂಬುದೂ ನನಗೆ ಅವರಿಂದಲೇ ಗೊತ್ತಾಯಿತು.

"ನೀವು ಈಗಾಗಲೇ ಸಾಕಷ್ಟು ಕೆಲಸ ಮಾಡಿದ್ದೀರಿ. ಇನ್ನು ಮಾಡ ಬೇಕಾದ್ದೇನೂ ಇಲ್ಲ. ಜೇಲು ತುಂಬಿಕೊಳ್ಳುವದೇ ಕೊನೆಯ ಕೆಲಸ," ಎಂದು ನಾನು ಹೇಳಿದೆ.

"ಹೌದು. ಹೌದು. ಹಾಗೇ ಮಾಡಬೇಕು. ನೀವು ನಾಳೆ ಬರ್ರಿ. ನಾವು ಜೇಲಿಗೆ ಹೋಗುವ ತಯಾರಿ ಮಾಡುತ್ತೇವೆ," ಎಂದು ಅವರು ಹೇಳಿದರು.

ನಾನು ಹೂಡಿದ ಉಪಾಯ ಪೂರ್ಣವಾಗಿ ನಾಟಿತ್ತು. ಸಂತೋಷ ದಿಂದಲೇ ಹಿಂದಿರುಗಿ ಬಂದು ನೇರವಾಗಿ ಸಾಹೇಬರ ಹತ್ತಿರ ಹೋಗಿ ನಾನು ದೊರಕಿಸಿದ ಮಾಹಿತಿಯನ್ನೆಲ್ಲ ವಿವರಿಸಿ ಹೇಳಿದೆ. ನಾನು ಭಾಷಣ ಮಾಡಿದ ವಿಚಾರವನ್ನು ಮಾತ್ರ ಅವರಿಗೆ ತಿಳಿಸುವಂತಿರಲಿಲ್ಲ. ನಾಳೆಯದಿನವೇ ಅಪ ರಾಧಿಗಳನ್ನೆಲ್ಲ ನಾನೊಬ್ಬನೇ ತಂದು ಒಪ್ಪಿಸುವುದಾಗಿ ಹೇಳುತ್ತಲೂ ಸಾಹೇಬರಿಗೆ ವಿಸ್ಮಯವಾಗದಿರಲಿಲ್ಲ.

"ನೀನೇನೋ ಜಾದೂಗಾರ್ ಇದ್ದಂತೆ ಕಾಣುತ್ತದೆ," ಎಂದು ಅವರು ಚೇಷ್ಟೆ ಮಾಡಿದರು.

ಮಾರನೆಯ ದಿನ ನಾನು ಆ ಹಳ್ಳಿಗೆ ಹೊರಟುನಿಂತಿದ್ದಾಗ ಆ ಜನರು ನನ್ನನ್ನು ಹುಡುಕಿಕೊಂಡು ನಮ್ಮ ಮನೆಗೇ ಬಂದುಬಿಟ್ಟರು. ಅವರನ್ನು

ಕರೆದೊಯ್ದು ಸಾಹೇಬರ ಭೆಟ್ಟಿ ಮಾಡಿಸಿದೆ. ಒಂದು ಸೇತುವೆಯನ್ನೊಡೆದ ಅಪರಾಥವನ್ನು ಅವರು ಒಪ್ಪಿಕೊಂಡರು.

ಆ ಊರಿನಲ್ಲಿ ನಾನು ಮಾಡಿದ ಉಪದೇಶದ ವಿಚಾರ ಬೇರೆ ಊರುಗಳಿಗೂ ಹರಡಿ ಅಲ್ಲಿಯ ಜನರಿಗೂ ಅದು ಒಪ್ಪಿಗೆಯಾಗಿತ್ತು. ಅದೇ ದಿನ ಸಾಯಂಕಾಲ ಇನ್ನೊಂದು ಊರಿನ ಜನರು ನನ್ನನ್ನು ಕಾಣಲು ಬಂದರು. ಒಂದು ವಾರದಲ್ಲಿ ಆ ರೀತಿಯಾಗಿ ಅತ್ಯಂತ ಸುಲಭವಾಗಿ ನೂರು ಜನರ ಬಂಧನವಾಯಿತು. ನಮ್ಮ ಕ್ಷೇತ್ರದಲ್ಲಿ ನಡೆದಿದ್ದ ಅನೇಕ ಅಪರಾಥಗಳೆಲ್ಲ ಬಯಲಿಗೆ ಬಂದಂತಾಯಿತು. ಚಳವಳಿಗಾರರೆಲ್ಲರೂ ಸ್ವಸಂತೋಷದಿಂದ ಬಂದವರಾಗಿದ್ದರು. ಸೇತುವೆಗಳನ್ನೊಡೆಯಲು ಉಪಯೋಗಿಸಿದ ಗುದ್ದಲಿ – ಸಲಕೆಗಳನ್ನೂ ಅವರು ಹಾಜರುಪಡಿಸಿದರು. ಅವರೆಲ್ಲರ ಮೇಲೆ ಮೊಕದ್ದಮೆ ನಡೆದು ಶಿಕ್ಷೆಯಾಯಿತು. " ಗಾಂಧೀಮಹಾರಾಜಕೀ ಜೈ " ಎಂದು ಹೇಳುತ್ತಾ ನಗುನಗುತ್ತಾ ಸೆರೆಮನೆಗೆ ಸೇರಿದರು ಎಲ್ಲರೂ.

ಇನ್ನು ಕೇವಲ ಎರಡು ಅಪರಾಥಗಳನ್ನು ಮಾತ್ರ ನಾವು ಬಯಲಿಗೆಳೆಯುವುದುಳಿದಿತ್ತು. ಈ ಅಪರಾಥಗಳನ್ನು ಮಾಡಿದ ಗುಂಪಿನ ಮುಖಂಡ ಶೇಖರಪ್ಪನನ್ನೂ ಬಂಧಿಸುವುದಿತ್ತು. ಅವನು ಹಾಗೆಲ್ಲ ಸುಲಭವಾಗಿ ಸಿಕ್ಕಿಬೀಳುವ ಆಸಾಮಿಯಾಗಿರಲಿಲ್ಲ.

ಶೇಖರಪ್ಪನಿಗಾಗ ಇಪ್ಪತ್ತರ ಪ್ರಾಯ. ತಂದೆಗೆ ಅವನೊಬ್ಬನೇ ಮಗ. ಅವನಿಗೆ ಸ್ವಲ್ಪ ಇಂಗ್ಲಿಷಿನ ಜ್ಞಾನವೂ ಇತ್ತು. ಅವರದೊಂದು ಕಿರಾಣಿ ಅಂಗಡಿಯಿದ್ದು ವ್ಯಾಪಾರವೂ ಚೆನ್ನಾಗಿಯೆ ನಡೆದಿತ್ತು. ಶೇಖರಪ್ಪನ ತಂದೆ ವ್ಯಾಪಾರ ನೋಡಿಕೊಳ್ಳುತ್ತಿದ್ದರೆ ಅವನು ಸಾರ್ವಜನಿಕ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದ. ಅವನು ವಯಸ್ಸಿನಿಂದ ಚಿಕ್ಕವನಾಗಿದ್ದರೂ ಇಡೀ ಊರೆಲ್ಲವೂ ಅವನ ಮಾತಿಗೆ ಮನ್ನಣೆ ಕೊಡುತ್ತಿತ್ತು. ಅವರ ಊರಿಗೆ ಬಂದ ಸರಕಾರೀ ಅಧಿಕಾರಿಗಳಿಗೂ ರಾಜಕೀಯ ಪಕ್ಷಗಳ ನಾಯಕರಿಗೂ ಅವರ ಮನೆಯಲ್ಲಿಯೇ ಊಟ – ಚಹಾ – ವಸತಿ ಎಲ್ಲವೂ. ಶೇಖರಪ್ಪನಿಗೂ ನನಗೂ ತುಂಬಾ ಗೆಳೆತನ. ಚಳವಳಿಗಾರಂಭವಾದಂದಿನಿಂದ ಮಾತ್ರ ಅವನನ್ನು ನಾನು ಕಂಡಿರಲಿಲ್ಲ. ಕಾರ್ಯಕರ್ತರಿಗೆಲ್ಲ ಅವನ ಸಹಾಯವಿದ್ದೇ ಇರುತ್ತಿತ್ತು. ಅವನ ನೇತೃತ್ವದಲ್ಲಿದ್ದ ಗುಂಪು ಎರಡು ಸೇತುವೆಗಳನ್ನೊಡೆದು ತಲೆತಪ್ಪಿಸಿಕೊಂಡು ಅಲೆಯುತ್ತಿತ್ತು.

ಫೌಜದಾರರು ಶೇಖರಪ್ಪನನ್ನು ಶೋಧಿಸಲು ಯತ್ನಿಸಿ ನಿರಾಶರಾಗಿ, ಅವನ ತಂದೆಯನ್ನೇ ಬಂಧಿಸಿ ಸೆರೆಮನೆಗೆ ಕಳಿಸುವ ವಿಚಾರದಲ್ಲಿದ್ದರು. ಸೆರೆಮನೆಗೆ ಹೋಗಲು ಭಯಪಡುವಂಥ ಅಳುಬುರುಕರೇನೂ ಆಗಿರಲಿಲ್ಲ ಶೇಖರಪ್ಪನ ತಂದೆ. ಆದರೆ, ಅವರ ಪ್ರಕೃತಿ ಬಹಳ ಕೋಮಲವಾದುದು. ಸೆರೆಮನೆಯ ವಾತಾವರಣ, ಊಟ ಉಡುಗೆ ಅವರಿಗೆ ಒಗ್ಗದೆ ಅವರ ದೇಹಸ್ವಾಸ್ಥ್ಯ ಕೆಡುವುದು ಖಂಡಿತವೆಂದು ನನಗೆನ್ನಿಸುತ್ತಿತ್ತು. ಅವರನ್ನು ನಾವು ಬಂಧಿಸಿಬಿಟ್ಟರೆ ಮುಂದೆ ಅಂಗಡಿಯನ್ನು ನಡಸುವವರಾರು? ಅರ್ಥಾತ್ ಅದರ ಬಾಗಿಲು ಮುಚ್ಚುವುದು, ಮನೆಯಲ್ಲಿ ಶೇಖರಪ್ಪನ ತಾಯಿಯೊಬ್ಬಳೇ ಉಳಿಯುವಳು, ಅವಳನ್ನು ಭೆಟ್ಟಿಯಾಗಲು ಶೇಖರಪ್ಪ ಮನೆಗೆ ಬರುವುದೂ ಖಂಡಿತ, ಆಗ ಅವನನ್ನು ಬಂಧಿಸಬಹುದು, ಈಗ ಅವರನ್ನು ಜೇಲಿಗೆ ಕಳಿಸುವುದಾಗಿ ಬೆದರಿಸಿದರೆ ಶೇಖರಪ್ಪನ ತಂದೆ ಸಾವಿರ ರೂಪಾಯಿಗಳನ್ನಾದರೂ ಕೊಡಲು ಸಿದ್ಧರಾಗಬಹುದು – ಎಂಬ ಧೂರ್ತ ಯೋಚನೆ ಫೌಜದಾರರದು.

ಅದನ್ನು ಮೊಳಕೆಯಲ್ಲಿಯೇ ಮುರಿದುಬಿಡಲು ನಿಶ್ಚಯಿಸಿ ನಾನು ಒಂದು ರಾತ್ರೆ ಶೇಖರಪ್ಪನ ಊರಿಗೆ ಹೋಗಿ ಅವನ ತಾಯಿಯನ್ನು ಕಂಡೆ. ಅರ್ಥಾತ್ ಆಗ ಶೇಖರಪ್ಪ ಅಲ್ಲಿರಲಿಲ್ಲ. ಅವನ ತಂದೆಯವರಿನ್ನೂ ಅಂಗಡಿಯಿಂದ ಬಂದಿರಲಿಲ್ಲ.

ಅವನ ತಾಯಿ ನನ್ನನ್ನು ಆದರದಿಂದ ಬರಮಾಡಿಕೊಂಡು ಬಲವಂತದಿಂದ ಊಟ ಮಾಡಿಸಿದಳು. ಮೊದಲೇ ಯೋಚಿಸಿಕೊಂಡಿದ್ದ ಮೇರೆಗೆ ನಾನು ಆಕೆಯ ಎದುರಿಗೂ ಒಂದು ಭಾಷಣ ಹೊಡೆದೆ: ಇಂದಿಲ್ಲ ನಾಳೆಯಾದರೂ ಶೇಖರಪ್ಪನ ಬಂಧನವಾಗುವುದು ನಿಶ್ಚಿತ. ಅವನು ತಲೆ ತಪ್ಪಿಸಿಕೊಂಡು ತಿರುಗಿದರೆ ಗಂಡಾಂತರ ಕಟ್ಟಿಟ್ಟದ್ದು. ಇನ್ನು ಮುಂದೆ ಪೋಲೀಸರು ಗುಂಡು ಹಾಕುವಷ್ಟು ದೂರ ಹೋಗಬಹುದು. ಅವರ ಒಬ್ಬನೇ ಒಬ್ಬ ಮಗನಾದ ಶೇಖರಪ್ಪನಿಗೇನಾದರೂ ಅಂಥ ಗತಿಯೊದಗಿದರೆ? ಅವನು ಸಿಕ್ಕದಿದ್ದರೆ ಅವನ ತಂದೆಯನ್ನೇ ಬಂಧಿಸಿ ಜೈಲಿಗೆ ದೂಡುವರು. ಅಲ್ಲಿ ಅವರಿಗೆ ಕಾಹಿಲೆಯಾದರೆ ಗತಿಯೇನು? ಅವರನ್ನು ನೋಡಿಕೊಳ್ಳುವವರಾರು? ಇತ್ತ ಒಂದೆರಡು ವರ್ಷ ಅಂಗಡಿಯೂ ಮುಚ್ಚಿಹೋಗುವುದು. ಈಗ ಅಂಗಡಿಯಲ್ಲಿರುವ ಹದಿನೈದು ಇಪ್ಪತ್ತು ಸಾವಿರ ರೂಪಾಯಿಯ ಮಾಲು ಹಾಳಾಗುವುದು. ಈ ಅನಾಹುತಗಳನ್ನೆಲ್ಲ

ತಪ್ಪಿಸಬೇಕಿದ್ದರೆ ಶೇಖರಪ್ಪ ತಾನಾಗಿಯೇ ಪೋಲೀಸ್ ಕಚೇರಿಗೆ ಹಾಜರಾಗಬೇಕು. ಅವನೇನು ಕಳವು ದರೋಡೆ ಮಾಡಿ ಜೈಲಿಗೆ ಹೋಗುತ್ತಿಲ್ಲ. ಸ್ವಾತಂತ್ರ್ಯಯೋಧನಾಗಿ ಹೋಗುತ್ತಾನೆ. ಮಗ ಸೆರೆಮನೆಗೆ ಹೋಗಿ ಬಂದರೆ ತಂದೆತಾಯಿಗಳಿಗೂ ಹೆಮ್ಮೆಯ ಮಾತು....ಇತ್ಯಾದಿ. ಇತ್ಯಾದಿ.

"ಶೇಖರಪ್ಪನಿಗೆ ಹೇಳಿಕಳಿಸುತೀನಿ. ಅವನ ಮನಸಿಗೆ ಬಂದ ಹಾಂಗ ಮಾಡಲಿ," ಎಂದಳು ಅವನ ತಾಯಿ.

ಮಾರನೆಯ ದಿನ ಮಧ್ಯಾಹ್ನ ಶೇಖರಪ್ಪ, ತನಗೆ ಒಂದೆರಡು ವರ್ಷಗಳವರೆಗೆ ಬೇಕಾಗುವ ಬಟ್ಟೆ ಬರೆಗಳನ್ನೂ ಹಾಸಿಗೆ ಹೊದ್ದಿಕೆಗಳನ್ನೂ ಕಟ್ಟಿಕೊಂಡು, ಗುಂಪಿನ ಜನರನ್ನೂ ಕರೆದುಕೊಂಡು ನನ್ನ ಮನೆಗೆ ಬಂದು,

"ನಿಮ್ಮ ಹುಕುಮಿನ ಪ್ರಕಾರ ಹಾಜರಾಗಿದ್ದೀವಿ ಸರದಾರರೆ!" ಎಂದು ಮುಗುಳ್ನಗುತ್ತ ನುಡಿದ.

ಅವರೆಲ್ಲರಿಗೂ ಚಹ ಕೊಟ್ಟು ಸತ್ಕರಿಸಿ ನಾನು ಎಲ್ಲರನ್ನೂ ಸಾಹೇಬರ ಹತ್ತಿರ ಕರೆದೊಯ್ದೆ. ಅವರು ತಾವು ಮಾಡಿದ ವಿಧ್ವಂಸಕ ಕೃತ್ಯಗಳ ಬಗೆಗೆ ವಿವರಿಸಿ ಹೇಳಿದರು.

ಸಾಹೇಬರು ನನ್ನನ್ನು ಕರೆದು, ಸಂತೋಷದಿಂದ ನನ್ನ ಕೈ ಕುಲುಕಿಸಿ,

"ನಿನ್ನಿಂದಾಗಿ ಈ ಭಾಗದ ಬಗ್ಗೆ ನನಗೆ ಚಿಂತೆ ತಪ್ಪಿದಂತಾಯ್ತು. ನೀನು ಅತ್ಯುತ್ತಮ ಕೆಲಸಗಾರ!" ಎಂದು ಹೊಗಳಿದರು.

ಹಳಗೇರಿ ಫೌಜದಾರರು ಮತ್ತೆ ಮತ್ಸರದಿಂದ ತಳಮಳಿಸತೊಡಗಿದರು.

೧೯

# ಟ್ರೆಝುರಿಯ ಲೂಟಿ ತಪ್ಪಿಸಿದ್ದು

ಅಂತು, ನಮ್ಮ ಭಾಗದಲ್ಲಿ ನಡೆದಿದ್ದ ಎಲ್ಲ ಅಪರಾಧಗಳ ಶೋಧ ನಡೆದು ಅಪರಾಧಿಗಳಿಗೆ ಶಿಕ್ಷೆಯಾಗಿ ಶಾಂತತೆ ನೆಲೆಸಿತು. ನಮ್ಮ ನೆರೆಯ ಭಾಗದಲ್ಲಿ ಮಾತ್ರ ವಿಧ್ವಂಸಕ ಕೃತ್ಯಗಳು ನಿರಾತಂಕವಾಗಿ ನಡೆದಿದ್ದುವು. ಕೆಲವು ಸರಕಾರೀ ಕಟ್ಟಡಗಳು ಅಗ್ನಿಗಾಹುತಿಯಾಗಿದ್ದುವು. ನಮ್ಮ ಭಾಗದಲ್ಲಿ ಮಾತ್ರ ಯಾವ ಚಟುವಟಿಕೆಯೂ ಇರಲಿಲ್ಲ. ಹಳಗೇರಿ ಫೌಜದಾರರಿಗೆ ಅಷ್ಟೇ ಸಮಾಧಾನ. ಅನೇಕ ಕಾರ್ಯಕರ್ತರು ತಲೆ ಮರೆಸಿಕೊಂಡು ತಿರುಗುತ್ತಿದ್ದರು. ಪೋಲೀಸರ ಹೆದರಿಕೆಯಿಂದಾಗಿ ಹಳ್ಳಿಗರು ಈ ಕಾರ್ಯಕರ್ತರಿಗೆ ನೆರವಾಗುವುದೂ ನಿಂತುಹೋಗಿತ್ತು. ಅಜ್ಞಾತವಾಸಿಗಳು ಉದರ ನಿರ್ವಹಣೆಗಾಗಿ ಹೊಸ ಹೊಸ ಉಪಾಯ ಯೋಚಿಸತೊಡಗಿದರು. ಸರಕಾರೀ ಹಣ ಹಾರಿಸುವ ಕ್ರಮಕ್ಕೂ ಆರಂಭವಾಯಿತು.

ನಮ್ಮ ತಾಲ್ಲೂಕಿನ ಟ್ರೆಝುರಿಯಲ್ಲಿ ಯಾವಾಗಲೂ ಎರಡು ಮೂರು ಲಕ್ಷ ರೂಪಾಯಿಗಳಷ್ಟು ಶಿಲ್ಕು ಇರುತ್ತಿದ್ದ ಸಂಗತಿ ಎಲ್ಲ ಜನರಿಗೂ ಗೊತ್ತಿತ್ತು. ಟ್ರೆಝುರಿಯ ಕಾವಲಿಗೆಂದು ನಾಲ್ಕು ಮಂದಿ ಸಶಸ್ತ್ರ ಪೋಲೀಸರಿರುತ್ತಿದ್ದರು. ಆ ನಾಲ್ವರಲ್ಲೊಬ್ಬನು ಅಮಲ್ದಾರ್. ಅವನಿಗೆ ಕಾವಲಿನ ಕೆಲಸವಿರಲಿಲ್ಲ. ಕೇವಲ ಮೇಲ್ವಿಚಾರಣೆ. ಇನ್ನುಳಿದ ಮೂವರು ದಿನದ ಇಪ್ಪತ್ನಾಲ್ಕು ಗಂಟೆಗಳಲ್ಲಿ ಸರದಿಯ ಪ್ರಕಾರ ಹಂಚಿಕೊಂಡು, ಒಬ್ಬ ಪೋಲೀಸ ಎಂಟು ತಾಸು ಕಾವಲು ನಡಸುವಂತೆ ಏರ್ಪಡಿಸಿಕೊಂಡಿದ್ದರು. ರಾತ್ರಿಯ ಸಮಯದಲ್ಲಿ ಆ ಒಬ್ಬ ಕಾವಲುಗಾರನಿಗೆ ನಿದ್ರೆ ಬಂದು ಅವನು ತೂಕಡಿಸುವ ಸಂಭವವೂ ಇತ್ತು.

ಆಗ ಚಳವಳಿಗಾರರು ಸಮಯ ಸಾಧಿಸಿ ಟ್ರೆಝುರಿಯಿದ್ದ ತಾಲ್ಲೂಕು ಕಚೇರಿಯ ಹಿಂದಿನ ಬದಿಯಿಂದ ಬಂದು ಈ ಕಾವಲುಗಾರನ ಕೈಯಲ್ಲಿಯ ಬಂದೂಕವನ್ನು ಕಸಿದು, ಅದನ್ನೇ ಅವನ ಎದೆಗೆ ಗುರಿಹಿಡಿದರಾಯಿತು. ಅವನು ಜೀವದಾಸೆ ಯಿಂದಾಗಿ ಬಾಯಿ ತೆರೆಯಲಾರ. ಇನ್ನುಳಿದ ಮೂವರಂತೂ ಮಲಗಿಕೊಂಡಿರು ವವರು. ಅವರನ್ನು ಬೆದರಿಸುವುದೇನೂ ದೊಡ್ಡ ವಿಷಯವಲ್ಲ. ಟ್ರೆಝುರಿಯ ಬೀಗಗಳನ್ನು ಮುರಿದರೆ ಕೆಲಸ ಸಾಧಿಸಿದಂತಾಯಿತು. ಚಳವಳಿಗಾರರಿಗೆ ಅದೇನು ಅಸಾಧ್ಯದ ಕೆಲಸವಲ್ಲವೆಂದೇ ನನಗೆನ್ನಿಸುತ್ತಿತ್ತು. ಅಜ್ಞಾತವಾಸಿಗಳ ಸಂಖ್ಯೆ ಬೆಳೆದಹಾಗೆಲ್ಲ ನನಗೆ ಅವರ ಬಗೆಗೆ ಬಲವಾದ ಅನುಮಾನ ಬರತೊಡ ಗಿತು. ಕೆಲಸಗೇಡಿಗಳಾಗಿ ಅಲೆಯುತ್ತಿದ್ದ ಆ ಜನರ ಊಟೋಪಚಾರ, ಬಟ್ಟೆ ಬರೆ, ಅವರ ಮನೆತನಗಳ ಖರ್ಚು ಎಲ್ಲವೂ ಹೇಗೆ ನಡೆಯಬೇಕು ? ನಾಗರಿಕರ ಮನೆಗಳನ್ನೊಡೆದರೆ ಅದಕ್ಕೆ ಕಳವು - ದರೋಡೆ ಎಂಬ ಹೆಸರು ಬರುವುದು. ಅಂಥ ಕೆಲಸ ಮಾಡಲು ಸತ್ಯಾಗ್ರಹಿಗಳಾದ ಅವರಿಗೆ ಮನಸ್ಸು ಬರದು. ಸರಕಾರದ ಹಣವನ್ನು ಲೂಟಿ ಮಾಡಿದರೆ ಅದೂ ಒಂದು ದೇಶಭಕ್ತಿಯ ಕಾರ್ಯ ವಾಗುವುದು ! ಚಳವಳಿಯ ಜನರಿಗೆ ಅಂಥ ಯೋಚನೆಗಳು ಹೊಳೆಯುತ್ತಿದ್ದು ದನ್ನು ನಾನೂ ಬಲ್ಲವನಾಗಿದ್ದೆ. ಕೆಲವು ದಿನಗಳೊಳಗಾಗಿ ಅವರು ಟ್ರೆಝುರಿ ಲೂಟಿ ಮಾಡುವ ಸಾಹಸಕೃತ್ಯಕ್ಕೆ ತೊಡಗುವರೆಂದು ನನಗೆನ್ನಿಸುತ್ತಿತ್ತು.

ಈ ಸ್ವಾತಂತ್ರ್ಯಯೋಧರಿಗೆ ಉದಾರವಾಗಿ ಧನಸಹಾಯ ಮಾಡುತ್ತಿದ್ದ ಜನರೂ ವಿರಳವೇ. ಪೋಲೀಸರಿಗೆ ಸಾವಿರಾರು ರೂಪಾಯಿ ಸುರಿಯುತ್ತಿದ್ದ ಈ ಜನರೇ ಸ್ವಾತಂತ್ರ್ಯಯೋಧರಿಗೆ ಐದು ರೂಪಾಯಿ ಕೊಡುವುದಕ್ಕೂ ಹಿಂದೆ ಮುಂದೆ ನೋಡುತ್ತಿದ್ದುದಿತ್ತು. ಇಂಥ ಜನರನ್ನು ಯಾಚಿಸುವುದಕ್ಕೂ ಬೇಸರ ಬಂದಂತಿತ್ತು ಚಳವಳಿಗಾರರಿಗೆ. ಅಂತೆಯೆ ಅವರು ಟ್ರೆಝುರಿಯ ಕಡೆಗೆ ಲಕ್ಷ್ಯ ಹೊರಳಿಸಿದ್ದರು. ಐವತ್ತು ಜನ ಯುವಕರನ್ನೊಳಗೊಂಡ ಒಂದು ಗುಂಪು ಆ ಕಾರ್ಯಕ್ಕೆ ಅಣಿಯಾಗುತ್ತಲಿದ್ದ ಸಮಾಚಾರ ಒಂದು ಹಳ್ಳಿಯಲ್ಲಿ ನನಗೆ ಗೊತ್ತಾ ಯಿತು. ಬರಲಿದ್ದ ಮಂಗಳವಾರ ರಾತ್ರಿ ಹನ್ನೆರಡು ಗಂಟೆಯ ವೇಳೆಗೆ ಅವರು ಟ್ರೆಝುರಿಗೆ ಮುತ್ತಿಗೆ ಹಾಕುವವರಿದ್ದರು.

ಅದೇನು ಸಾಧಾರಣ ಕಾರ್ಯವಲ್ಲ. ಎಲ್ಲಾದರೂ ಸ್ವಲ್ಪ ಅಚಾತುರ್ಯ ವಾದರೆ, ಅಜಾಗರೂಕತೆಯಾದರೆ ಆ ಐವತ್ತು ಜನರೂ ಪ್ರಾಣಕ್ಕೆರವಾಗುವ

ಸಂಭವವಿತ್ತು. ಒಂದು ಸಮಯ ಅವರ ಕಾರ್ಯ ಸಫಲವಾಗಿ ಟ್ರೆಝುರಿ ಲೂಟಿ ಯಾದರೆ ಹಾಹಾಕಾರವೆದ್ದು ಸರಕಾರದವರು ಸಾವಿರಾರು ಜನ ಪೋಲೀಸರನ್ನೂ ಸೈನಿಕರನ್ನೂ ಕಳಿಸುವ ಸಂಭವವಿತ್ತು. ಸೈನಿಕರು ಹಳ್ಳಿಪಳ್ಳಿಗಳಲ್ಲಿ ಅತ್ಯಾಚಾರ ನಡೆಸಬಹುದಾಗಿತ್ತು. ಆ ಅನಾಹುತವನ್ನು ತಪ್ಪಿಸಬೇಕೆಂದು ಮನಸ್ಸಿನಲ್ಲಿಯೇ ನಿರ್ಧರಿಸಿ ನಾನು ನೇರವಾಗಿ ಇನ್‌ಸ್ಪೆಕ್ಟರರಲ್ಲಿಗೆ ಹೋಗಿ ಎಲ್ಲ ವಿಚಾರಗಳನ್ನೂ ವರದಿಯೊಪ್ಪಿಸಿದೆ. ನನ್ನ ಮಾತಿನ ಮೇಲೆ ಅವರಿಗೆ ಪೂರಾ ವಿಶ್ವಾಸ.

ಒಂದು ನಿಮಿಷವೂ ವಿಲಂಬ ಮಾಡದೆ ಇನ್ಸ್ಪೆಕ್ಟರರು ನಮ್ಮ ತಾಲ್ಲೂಕಿನ ಮಾಮಲೇದಾರರಿಗೆ ತಂತಿ ಕಳಿಸಿದರು. ಸಾಯಂಕಾಲ ಅವರು ಬರುತ್ತಲೂ ಮೂವರೂ ಸೇರಿ ಓರೆಕೋರೆ ನಗರಕ್ಕೆ ಹೋಗಿ ಡಿ.ಎಸ್.ಪಿ. ಯವರನ್ನು ಕಂಡೆವು. ನನ್ನಿಂದ ದೊರೆತ ಸಮಾಚಾರ ಕೇಳಿದಾಗ ಸಾಹೇಬರಿಗಾದ ಆನಂದ ವನ್ನು ವರ್ಣಿಸಲು ಸಾಧ್ಯವಾಗದು. ನಮ್ಮ ಜೊತೆಗೆ ಇನ್ನೂರು ಜನ ಪೋಲೀಸರನ್ನು ಕಳಿಸುವುದಾಗಿ ಹೇಳಿದುದಲ್ಲದೆ ತಾವೂ ಹೊರಡಲು ಸಿದ್ಧರಾದರು. ನಮ್ಮ ಮೋಟಾರುಗಳು ಬರದಿರಲು ಚಳವಳಿಗಾರರು ಹಾದಿಯ ಮೇಲಿನ ಸೇತುವೆಗಳನ್ನೊಡೆಯುವ ಸಂಭವವೂ ಇದ್ದಿತಾದುದರಿಂದ ನಾವು ಆ ಹಾದಿ ಯನ್ನು ಬಿಟ್ಟು ಬೇರೊಂದು ಮಾರ್ಗವಾಗಿ ಪೋಲೀಸ್ ಪಡೆಯನ್ನು ಸಾಗಿಸ ಬೇಕೆಂದು ಗೊತ್ತಾಯಿತು.

ಮಂಗಳವಾರದ ದಿನ ಬೆಳಿಗ್ಗೆ ಆರು ಮೋಟಾರುಗಳಲ್ಲಿ ಪೋಲೀಸರನ್ನು ತುಂಬಿ ಹೊರಟೆವು. ಸಾಹೇಬರು ತಮ್ಮ ಕಾರಿನಲ್ಲಿ. ಮಾಮಲೇದಾರರು ಮೊದಲೇ ಹೋಗಿದ್ದರು. ಏಳೆಂಟು ಗ್ಯಾಸ್ ದೀಪಗಳನ್ನು ತರಿಸಿಡಬೇಕೆಂದು ಅವರಿಗೆ ಸೂಚನೆ ಕೊಡಲಾಗಿತ್ತು. ರಾತ್ರೆ ಹನ್ನೊಂದೂವರೆ ಗಂಟೆಗೆ ಆ ದೀಪ ಗಳನ್ನು ಹೊತ್ತಿಸಿ ಟ್ರೆಝುರಿಯಲ್ಲಿರಿಸುವುದು, ಕಚೇರಿಯ ನಾಲ್ಕು ಮೂಲೆಗಳಲ್ಲಿ ನಾಲ್ಕು ಮಂದಿ ಪಹರೆಯವರನ್ನಿಡುವುದು, ಅಲ್ಲಿಯ ಫೌಜದಾರರನ್ನು ಕರೆದು ಕೊಂಡು ಮಾಮಲೇದಾರರೂ ಹನ್ನೊಂದೂವರೆಗೆ ಕಚೇರಿಯಲ್ಲಿರುವುದು, ನಾವು ೧೧-೪೫ ಕ್ಕೆ ಆ ಊರನ್ನು ತಲಪಿ ಊರಿನ ಹೊರಗೇ ಮೋಟಾರುಗಳನ್ನು ಬಿಟ್ಟು ಐವತ್ತು ಜನ ಪೋಲೀಸರನ್ನು ಕರೆದುಕೊಂಡು ಕಚೇರಿಗೆ ಬರುವುದು, ಇನ್ನುಳಿದ ಪೋಲೀಸರು ಊರಿನಿಂದ ಹೊರಗೆ ಹೋಗುವ ನಾಲ್ಕು ಹಾದಿಗಳ ಮಗ್ಗುಲಲ್ಲಿ ನಿಂತುಕೊಳ್ಳುವುದು, ಗುಂಪಿನವರು ಗುಂಡು ಹಾರಿಸಿದರೆ ಮಾತ್ರ

ಪೋಲೀಸರೂ ಹಾರಿಸುವುದು, ಅವರು ಸುಮ್ಮನಿದ್ದರೆ ಇವರೂ ಸುಮ್ಮ ನಿರುವುದು – ಎಂದೆಲ್ಲ ನಿಶ್ಚಿತವಾಯಿತು. ಡಿ.ಎಸ್.ಪಿ. ಯವರೂ ಒಂದು ರಸ್ತೆಯಲ್ಲಿ ಪೋಲೀಸರೊಡನೆ ಕಾದುಕೊಂಡಿದ್ದರು.

ನಾವು ಮಾಡಿಕೊಂಡಿದ್ದ ಸಿದ್ಧತೆಯ ಸುಳಿವೇ ಇರಲಿಲ್ಲ ಚಳವಳಿಗಾರರಿಗೆ. ಅವರು ತಮ್ಮ ಕಾರ್ಯಕ್ರಮದ ಪ್ರಕಾರ ಹನ್ನೊಂದೂವರೆಗೆ ಊರಿಗೆ ಬಂದು ಮುಟ್ಟಿದರು. ಟ್ರೆಝರಿಯಿಂದ ಎರಡು ಫರ್ಲಾಂಗ್ ದೂರದಲ್ಲಿ ಅವರಿದ್ದಾಗಲೇ ಗ್ಯಾಸ್ ದೀಪಗಳು ಕಾಣಿಸಿದ್ದುವು. ಕೈಯಲ್ಲಿ ಲಾಟೀನು ಹಿಡಿದುಕೊಂಡು ಬರುತ್ತಿದ್ದ ದಾಳಿಕಾರರ ಕೈಕಾಲು ತಣ್ಣಗಾಗಿದ್ದುವು. ಅವರೆಲ್ಲರನ್ನೂ ನಾವು ಸುತ್ತುವರೆದಂತಾಗಿತ್ತು. ಸಾಂಕೇತಿಕ ಸಿಳ್ಳು ಹೊರಡುತ್ತಲೂ ನಾಲ್ಕು ದಿಕ್ಕು ಗಳಿಂದ ಬಂದೂಕಧಾರಿ ಪೋಲೀಸರು ಬಂದು ದಾಳಿಕಾರರನ್ನು ಬಂಧಿಸಬಹು ದಾಗಿತ್ತು. ಆದರೆ, ಮೂರ್ಖ ಪೋಲೀಸನೊಬ್ಬನ ಅಜಾಗರೂಕತೆಯಿಂದಾಗಿ, ಅಕಸ್ಮಾತ್ತಾಗಿ ಅವನ ಬಂದೂಕಿನಲ್ಲಿನ ಗುಂಡು ಹಾರಿತು. ಅದರ ಸದ್ದು ಕೇಳು ತ್ತಲೂ ದಾಳಿಕಾರರೆಲ್ಲರೂ ಲಾಟೀನುಗಳನ್ನು ಬಿಸುಟು ಕತ್ತಲೆಯಲ್ಲಿಯೆ ಹಾದಿ ಸಿಕ್ಕಿದತ್ತ ಓಡಿಹೋಗಿ ಕಾಣದಂತಾದರು. ಗುಂಡು ಹಾರುತ್ತಲೂ ಪೋಲೀಸರ ಎದೆಗಳು ಬಡಿದುಕೊಳ್ಳತೊಡಗಿದ್ದುವು. ಎಲ್ಲರ ಗುಂಡುಗಳೂ ಹಾರುವ ಸಿದ್ಧತೆ ಯಲ್ಲಿದ್ದುವು. ಆದರೆ ಹಾಗೆ ಗುಂಡು ಹಾರಿಸುವ ಮೊದಲು ಡಿ. ಎಸ್. ಪಿ. ಯವರ ಸಾಂಕೇತಿಕ ಸಿಳ್ಳು ಹೊರಡಬೇಕಾಗಿತ್ತು. ಅದು ಹೊರಡಲಿಲ್ಲ. ಅದರ ಬದಲು ಪೋಲೀಸರೆಲ್ಲ ಒಂದೆಡೆಗೆ ಸೇರಬೇಕೆಂಬ ಸೂಚನೆ ಕೊಡುವ ಸಿಳ್ಳು ಕೇಳಬಂದಿತು. ಸರಿ. ಎಲ್ಲರೂ ಟ್ರೆಝರಿಯಲ್ಲಿ ಒಟ್ಟುಗೂಡಿದೆವು.

ಸಾಹೇಬರು ವಿಪರೀತವಾಗಿ ಕೋಪಿಸಿಕೊಂಡಿದ್ದರು. ಗುಂಡು ಹಾರಿಸಿದ ಪೋಲೀಸನನ್ನು ತಕ್ಷಣವೆ ನೌಕರಿಯಿಂದ ಕಿತ್ತೊಗೆಯುವ ಆಜ್ಞೆಯಿಾಯು ವುದರಲ್ಲಿದ್ದರವರು. ಆತ ಅವರ ಕಾಲು ಹಿಡಿದುಕೊಂಡು ಕಂಬನಿಗರೆಯ ತೊಡಗಿದ.

"ಗುಂಡು ಹಾರಲು ಏನಾದರೂ ಕಾರಣವಿರಬೇಕು," ಎನ್ನುತ್ತಾ ನಾನು ಅವನ ಬಂದೂಕವನ್ನು ಪರೀಕ್ಷಿಸಿ ನೋಡಿದೆ. ಅದರ 'ಸೇಫ್ಟಿಕ್ಯಾಚ್' ಸಡಿ ಲಾಗಿದ್ದುದೂ ಅದರಿಂದಾಗಿಯೇ ಗುಂಡು ಹಾರಿದುದೂ ಕಂಡುಬಂದಿತು. ಆ

ಅಂಶವನ್ನು ಸಾಹೇಬರ ಗಮನಕ್ಕೆ ತಂದುಕೊಟ್ಟಾಗ ಅವರು ಸ್ವಲ್ಪ ಶಾಂತರಾದರು. ಆ ಪೋಲೀಸನ ನೌಕರಿಯೂ ಉಳಿಯಿತು. ಸಾಹೇಬರು ಬಹಳ ವ್ಯಸನದಲ್ಲಿದ್ದರು: ಕೈಗೆ ಬಂದಿದ್ದ ಬೇಟೆ ಪಾರಾಗಿಹೋಯಿತಲ್ಲಾ ಎಂದು.

ಅಂದಿನ ಘಟನೆ ನಡೆದ ಬಳಿಕ, ಸರಕಾರದ ಹಣವಿರುವ ಸ್ಥಳಗಳಲ್ಲೆಲ್ಲ ಹೆಚ್ಚು ಜನರನ್ನು ಕಾವಲಿಗಿರಿಸುವ ವ್ಯವಸ್ಥೆಯಾಯಿತು.

## ೨೦

# ರೈಲಿನಲ್ಲಿ ಒಬ್ಬ ಬಂಗಾರಿ!

ಈ ಪ್ರಕರಣದಲ್ಲಿ ನನಗೆ ನೂರು ರೂಪಾಯಿಗಳ ಬಹುಮಾನವೇನೋ ದೊರೆಯಿತು. ಅದರಿಂದ ನನಗೇನೂ ತೃಪ್ತಿಯಾಗಲಿಲ್ಲ. ಡಿ. ಎಸ್. ಪಿ. ಯವರು ನನ್ನ ಕೆಲಸವನ್ನು ಮೆಚ್ಚಿಕೊಂಡು ನನಗೆ ಬಡ್ತಿ ಕೊಡಬಹುದೆಂದು ನಾನು ಆಶಿಸಿದ್ದೆ. ನಮ್ಮ ಇನ್‌ಸ್ಪೆಕ್ಟರರೂ ಆ ಬಗೆಗೆ ಸಾಹೇಬರಿಗೆ ಶಿಫಾರಸು ಮಾಡಿದ್ದರು. ಆದರೆ, ಖಾತೆಯ ನಿಯಮುಗಳ ಪ್ರಕಾರ ನನ್ನ ನೌಕರಿಯ ಅವಧಿ ಐದು ವರ್ಷಗಳದಾಗುವವರೆಗೂ ಬಡ್ತಿ ಕೊಡಲು ಸಾಧ್ಯವಾಗದೆಂದು ಸಾಹೇಬರು ಹೇಳಿದರು. ನನಗೆ ಬಹಳ ವ್ಯಸನವಾಯಿತು. ನಾನು ಸಕಾಲಕ್ಕೆ ಮುಟ್ಟಿಸಿದ ಸುದ್ದಿಯಿಂದಾಗಿ ಟ್ರೆಝರಿ ಲೂಟಿಯಾಗುವ ಪ್ರಸಂಗ ತಪ್ಪಿ ಹೋಗಿತ್ತು. ಲಕ್ಷಾಂತರ ರೂಪಾಯಿಗಳನ್ನು ನಾನು ಉಳಿಸಿಕೊಟ್ಟ ಹಾಗಾಗಿತ್ತು. ಅದರ ಪ್ರತಿಫಲವೆಂದರೆ ಕೇವಲ ನೂರು ರೂಪಾಯಿಯೆ! ಎರಡು ಮೂರು ರಾತ್ರೆ ನಿದ್ರೆಯೂ ಬರಲಿಲ್ಲ. ಊಟ ತಿಂಡಿ ಚಹ ಯಾವುದೂ ರುಚಿಸಲಿಲ್ಲ.

ಆ ಪ್ರಕರಣ ನಡೆದ ತರುವಾಯ ಹಳಗೇರಿ ಫೌಜದಾರರು ನನ್ನೊಡನೆ ಸ್ವಲ್ಪ ವಿನಯದಿಂದ ವರ್ತಿಸತೊಡಗಿದರು. ಅವರ ವರ್ತನೆಯಲ್ಲಾದ ಬದಲಾವಣೆಯನ್ನು ಕಂಡು ನನಗೆ ವಿಸ್ಮಯವಾಗದಿರಲಿಲ್ಲ.

ಟ್ರೆಝರಿಯನ್ನು ಲೂಟಿಮಾಡಲು ಹೋಗಿ ಭಗ್ನಮನೋರಥರಾಗಿ ಹಿಂದಿರುಗಿದ ಚಳವಳಿಗಾರರು ಸುಮ್ಮನೆ ಕೂತುಕೊಳ್ಳಲಿಲ್ಲ. ಮೊದಲಿಗಿಂತಲೂ ಹೆಚ್ಚು ಹುರುಪಿನಿಂದ ಅವರು ವಿಧ್ವಂಸಕ ಕೃತ್ಯ ನಡೆಸತೊಡಗಿದರು.

ಆ ಭಾಗದಲ್ಲಿದ್ದ ಸೇತುವೆಗಳೆಲ್ಲ ಮುರಿದುಬಿದ್ದುವು. ಪ್ರವಾಸಿಕರ ಬಂಗಲೆಗಳು ಸುಟ್ಟುಹೋದುವು. ಕೆಲವು ಪೋಲೀಸ್ ಠಾಣೆಗಳೂ ಚಾವಡಿಗಳೂ ಧ್ವಂಸ ವಾದುವು. ಇವರನ್ನು ಸದೆಬಡೆಯುವುದಕ್ಕೆಂದು ಪೋಲೀಸರ ಸಂಖ್ಯೆಯನ್ನು ಹೆಚ್ಚಿಸಲಾಗದ್ದಿತಾದರೂ ಚಳವಳಿಯ ತೀವ್ರತೆ ಕಡಮೆಯಾಗಲಿಲ್ಲ. ಪೋಲೀ ಸರ ಆಟ ನಡೆಯದೆಂದು ಮನವರಿಕೆಯಾಗುತ್ತಲೂ ಸರಕಾರ ಮಿಲಿಟರಿಯನ್ನು ಕಳಿಸಿತು. ಅವರೆಲ್ಲರೂ ಇಂಗ್ಲಿಷ್ ಸೈನಿಕರು. ನಮ್ಮ ಭಾಗದಲ್ಲೂ ಅವರು ಬೀಡುಬಿಟ್ಟರು. ಹಲವು ಹಳ್ಳಿಗಳಿಗೆ ಮುತ್ತಿಗೆ ಹಾಕಿ ನೂರಾರು ಜನರನ್ನು ಬಂಧಿಸಿದರು. ನೋಡಲು ಹೃಷ್ಟಪುಷ್ಟವಾಗಿ ಕಾಣುತ್ತಿದ್ದವರನ್ನೆಲ್ಲ ಹಿಡಿದು ಸೆರೆಮನೆಗೆ ದೂಡಲಾಯಿತು. ತಲೆ ತಪ್ಪಿಸಿಕೊಂಡ ಚಳವಳಿಗಾರರಿಗೆ ಎಲ್ಲಿಯೂ ಆಸರೆ ದೊರೆಯದಂತೆ ಮಾಡುವುದೇ ಆ ದಬ್ಬಾಳಿಕೆಯ ಮುಖ್ಯೋದ್ದೇಶ ವಾಗಿತ್ತು.

ಉರಿಯುವ ಮನೆಯ ಗಳು ಹಿರಿದುಕೊಳ್ಳುವ ಹೀನ ಮನೋವೃತ್ತಿಯ ಜನರಿಗೇನೂ ಕೊರತೆಯಿಲ್ಲವಲ್ಲ ನಮ್ಮ ದೇಶದಲ್ಲಿ! ಸೈನಿಕರ ದಬ್ಬಾಳಿಕೆಯಿಂದ ಜನತೆ ಕಂಗಾಲಾದ ಸಮಯ ಸಾಧಿಸಿ ಅನೇಕರ ಮನೆಗಳಲ್ಲಿನ ಬಂಗಾರದೊಡವೆ ಗಳನ್ನೂ ಹಾರಿಸಿದರು ನಮ್ಮ ಕಾರಕೂನರು. ಎಷ್ಟೋ ಕಡೆ ಹೆಂಗಸರ ಮಾನ ಭಂಗವೂ ನಡೆಯಿತು – ನಮಗೆ ಗೊತ್ತಾಗದಂತೆ. ಆ ವಿಚಾರ ನಮ್ಮ ಕಿವಿಗೆ ಬೀಳುತ್ತಲೂ ಮುಂದೆ ಅಂಥ ಕೃತ್ಯಗಳಿಗೆ ಯಾರೂ ತೊಡಗಬಾರದೆಂದು ಕಟ್ಟಪ್ಪಣೆ ಮಾಡಲಾಯಿತು.

ಸೈನಿಕರನ್ನು ತರಿಸಿದುದರಿಂದ ಸಾವಿರಾರು ಜನರ ಬಂಧನವಾಯಿ ತಾದರೂ ಅಜ್ಞಾತವಾಸಿ ಚಳವಳಿಗಾರರು ಮಾತ್ರ ಸಿಕ್ಕಲಿಲ್ಲ. ಹಳ್ಳಿಗರಿಂದ ಅವರಿಗೆ ದೊರೆಯುತ್ತಿದ್ದ ನೆರವು ಮಾತ್ರ ಪೂರ್ಣವಾಗಿ ತಪ್ಪಿಹೋಯಿತು. ಚಳವಳಿಗಾರರು ಮತ್ತು ಅವರ ಆಪ್ತರು ಮಿತ್ರರ ಮನೆಗಳ ಮೇಲೆ ಪೋಲೀಸರ ದೃಷ್ಟಿಯಿದ್ದುದರಿಂದ ಅವರು ಅಲ್ಲಿಗೂ ಬರುವಂತಿರಲಿಲ್ಲ.

ಒಂದು ದಿನ ನಮ್ಮ ಭಾಗದ ಟಪಾಲು ತರುವ ಮೋಟಾರಿನ ಮೇಲೆ ಕೆಲವರು ಮುತ್ತಿಗೆ ಹಾಕಿ, ಡ್ರೈವರನನ್ನು ಹೊಡೆದು ಟಪಾಲು ಚೀಲಗಳನ್ನು ಅಪಹರಿಸಿದರು. ಅದು ನಮ್ಮ ಕ್ಷೇತ್ರದಲ್ಲಿ ನಡೆದ ಅಪರಾಧವಾಗಿದ್ದುದರಿಂದ ನಾವೇ ಅದರ ಶೋಧ ನಡೆಸಬೇಕಾಯಿತು. ನಮ್ಮ ಬುದ್ಧಿ ಕೌಶಲ್ಯವನ್ನೂ

ಶಕ್ತಿಸಾಮರ್ಥ್ಯಗಳನ್ನೂ ಉಪಯೋಗಿಸಿ ಆ ಲೂಟಿಯಲ್ಲಿ ಭಾಗವಹಿಸಿದ್ದ ಹದಿನಾರು ಜನರನ್ನು ಸೆರೆಹಿಡಿದೆವು. ಅವರ ಮುಂದಾಳುಗಳಲ್ಲಿ ಕೆಲವರು ಮಾತ್ರ ಸಿಕ್ಕಲಿಲ್ಲ. ಟಪಾಲು ಚೀಲಗಳಲ್ಲಿ ಮನಿಆರ್ಡರುಗಳ ಹಣ ದೊರೆಯ ಬಹುದೆಂಬ ಆಸೆಯಿಂದಲೇ ಅವರು ಆ ಕೆಲಸ ಮಾಡಿದ್ದುದು. ಹಣ ಮಾತ್ರ ಸಿಕ್ಕಿರಲಿಲ್ಲ. ಗುಡ್ಡ ಬೆಟ್ಟ ಅಲೆದು ಉಪವಾಸವಿದ್ದು ಬಳಲಿದ್ದ ಆ ಜನರು ಬಂಧಿತರಾದಾಗ ಸಮಾಧಾನದ ಉಸಿರುಬಿಟ್ಟರು. ಇನ್ನು ಮೇಲಾದರೂ ಹೊಟ್ಟೆ ತುಂಬಾ ಊಟ ಸಿಕ್ಕುವುದೆಂದು !

ಈ ಮೊಕದ್ದಮೆಯನ್ನು ನಡಸುವುದಕ್ಕಾಗಿ ಒಂದು ತಿಂಗಳಿನವರೆಗೆ ನಾನು ಓರೆಕೋರೆ ನಗರದಲ್ಲಿರುವ ಪ್ರಸಂಗ ಬಂತು. ಒಂದು ಊಟಕ್ಕೆ ಒಂದು ರೂಪಾಯಿ ತೆರಬೇಕಾಗುತ್ತಿದ್ದ ಕಾಲ ಅದು. ಒಂದು ತಿಂಗಳಿನೊಳಗಾಗಿ ನನಗೆ ನೂರು ರೂಪಾಯಿಗಳವರೆಗೂ ಖರ್ಚು ಬಂದಿತ್ತು. ಅಷ್ಟು ಖರ್ಚು ಮಾಡಿ ದುದಕ್ಕೆ ಸರಕಾರದಿಂದ ನಮಗೆ ಸಿಗುವ ಭತ್ತೆ ಕೇವಲ ೧೫ ರೂಪಾಯಿ: ದಿನ ವೊಂದಕ್ಕೆ ಎಂಟಾಣೆಗಳಂತೆ. ಆ ಎಂಟು ಆಣೆಗಳಲ್ಲಿ ನಾವು ಹೇಗೆ ಜೀವ ಹಿಡಿದುಕೊಂಡಿರಬೇಕು? ಸರಕಾರಕ್ಕೆ ಆ ಯೋಚನೆಯೆಂದೂ ಬಂದಿರಲಿಲ್ಲ!

ಮೊಕದ್ದಮೆಯನ್ನು ಮುಗಿಸಿ ನಾನು ತೊಂಡೇಬಾವಿಗೆಂದು ರೈಲು ಹತ್ತಿ ನಮ್ಮ ತಾಲ್ಲೂಕಿನ ಸ್ಥಳದಲ್ಲಿಳಿಯುತ್ತಿದ್ದ ಹಾಗೇ ಆ ತಾಲ್ಲೂಕಿನ ಫೌಜ ದಾರರು ನಿಲ್ದಾಣದಲ್ಲಿ ಭೆಟ್ಟಿಯಾದರು.

" ನಿಮ್ಮನ್ನು ನೋಡುವದಕ್ಕೆ ನಾನೇ ಓರೆಕೋರೆಗೆ ಹೊರಟಿದ್ದೆ," ಎಂದರವರು.

" ನನ್ನನ್ನು ? ಯಾಕೆ ?"

" ಡಿ. ಎಸ್. ಪಿ. ಯವರಿಂದ ನನಗೊಂದು ತಂತಿ ಬಂದಿದೆ. ನಿಮ್ಮನ್ನು ಈಗಿಂದೀಗ ಓರೆಕೋರೆಗೆ ಕಳಿಸಬೇಕೆಂದು ಹುಕುಂ ಮಾಡಿದ್ದಾರೆ," ಎಂದು ಹೇಳಿ ತಂತಿಯ ಕಾಗದವನ್ನು ನನ್ನ ಕೈಗಿತ್ತರು. ಫೌಜದಾರರು ನನ್ನನ್ನು ಹುಡುಕಿಕೊಂಡು ತೊಂಡೇಬಾವಿಗೆ ಹೋಗಿ, ಅಲ್ಲಿ ನಾನಿಲ್ಲದುದು ಗೊತ್ತಾಗು ತ್ತಲೂ ಓರೆಕೋರೆಗೇ ಹೊರಟಿದ್ದರು.

ಡಿ. ಎಸ್. ಪಿ. ಯವರು ತಂತಿ ಕೊಟ್ಟು ಪೋಲೀಸರನ್ನು ಕರೆಯಿಸುವು ದೆಂದರೆ ಸಾಮಾನ್ಯ ವಿಷಯವಾಗಿರಲಿಲ್ಲ. ಯಾವನಾದರೊಬ್ಬ ಪೋಲೀಸನು

ಯಾವುದಾದರೊಂದು ಗಂಭೀರ ಸ್ವರೂಪದ ತಪ್ಪುಮಾಡಿದುದು ಕಂಡು ಬಂದಾಗ ಡಿ. ಎಸ್. ಪಿ. ಯವರು ತಂತಿ ಕೊಟ್ಟು ಅವನನ್ನು ಕರೆಯಿಸುವ ವಾಡಿಕೆಯಿತ್ತು.

“ನೀವು ಏನಾದರೂ ತಪ್ಪು ಮಾಡಿದ್ದೀರೋ ಹ್ಯಾಗೆ?” ಎಂದು ಪ್ರಶ್ನಿಸಿದರು ಫೌಜದಾರರು.

ಹಳ್ಳಿಗಳಲ್ಲಿ ನಾನು ಮಾಡಿದ ಭಾಷಣಗಳ ಬಗೆಗೆ ಸಾಹೇಬರಿಗೆ ಗುಪ್ತ ವರದಿಯೇನಾದರೂ ಹೋಗಿರಬಹುದೇ? ಆ ವಿಚಾರ ನಮ್ಮ ಹಳಗೇರಿ ಫೌಜದಾರರಿಗೆ ಗೊತ್ತಾಗಿ, ಸಾಹೇಬರಿಗೆ ಅವರೇ ತಿಳಿಸಿರಬಹುದೇ? ನನಗೆ ಯಾವ ಶಿಕ್ಷೆ ಕಾದಿದೆ?

ಡಿ. ಎಸ್. ಪಿ. ಯವರ ಆಜ್ಞೆ. ಅದನ್ನು ಕಡೆಗಣಿಸುವಂತಿರಲಿಲ್ಲ. ಓರೆಕೋರೆ ನಗರದಿಂದ ಆಗತಾನೆ ಹಿಂದಿರುಗಿ ಬಂದಿದ್ದ ನಾನು ಮತ್ತೆ ಅಲ್ಲಿಗೇ ಹೊರಡಬೇಕಾಗಿ ಬಂದಿತ್ತು. ನನ್ನ ಹತ್ತಿರ ಮೂರು ಕಾಸೂ ಇರಲಿಲ್ಲ. ತಾಲ್ಲೂಕಿನ ಸ್ಥಳದಿಂದ ತೊಂಡೇಬಾವಿಗೆ ಹೋಗಲು ಬಸ್ಸಿನ ಟಿಕೀಟಿಗಾಗಿ ಕೂಡಾ ಹಣವಿರಲಿಲ್ಲ ನನ್ನಲ್ಲಿ. ಬಸ್ಸಿನವರೆಲ್ಲರೂ ಸ್ನೇಹಿತರಾದುದರಿಂದ ಅವರು ನನ್ನಿಂದ ಹಣ ತೆಗೆದುಕೊಳ್ಳುತ್ತಿರಲಿಲ್ಲ. ಆದರೆ, ಈಗ ಪುನಃ ಓರೆಕೋರೆಗೆ ಹೋಗುವುದೆಂದರೆ ಇಪ್ಪತ್ತು ರೂಪಾಯಿಗಳಾದರೂ ಬೇಕು. ಎಲ್ಲಿಂದ ತರುವುದು ಅಷ್ಟು ಹಣವನ್ನು?

ಸರಿ. ಮೊದಲು ತೊಂಡೇಬಾವಿಗೆ ಹೋಗಿ ಏನಾದರೂ ವ್ಯವಸ್ಥೆ ಮಾಡುವುದೆಂದು ಬಗೆದು ಬಸ್ಸು ಏರಿದುದಾಯಿತು. ಮನೆಯವರನ್ನೆಲ್ಲ ಕಂಡು, ಖರ್ಚಿಗೆ ಹಣ ಒದಗಿಸಿಕೊಂಡು ಮತ್ತೆ ರಾತ್ರೆಯಲ್ಲೇ ಹೊರಟು ಬೆಳಗಾಗುವುದರೊಳ ಡಿ. ಎಸ್. ಪಿ. ಯವರ ಮುಂದೆ ಹಾಜರಾಗಬೇಕಾಗಿದ್ದಿತು.

ಡಿ. ಎಸ್. ಪಿ. ಯವರಿಂದ ತಂತಿ ಬಂದ ಸಮಾಚಾರ ತೊಂಡೇಬಾವಿಯಲ್ಲೂ ಗೊತ್ತಾಗಿತ್ತು. ನನ್ನ ತಾಯಿಯೂ ಅದೇ ಚಿಂತೆಯಲ್ಲಿ ಮುಳುಗಿದ್ದಳು. ಆಕೆಗೆ ಸಮಾಧಾನ ಹೇಳಿ, ದೇಸಾಯಿ ಮಾಸ್ತರರಲ್ಲಿಗೆ ಬಂದೆ. ನನಗೆ ಕಷ್ಟದ ಪ್ರಸಂಗ ಬಂದಾಗಲೆಲ್ಲ ಅವರ ಸಲಹೆ ಕೇಳುವುದು ನನ್ನ ಪದ್ಧತಿಯಾಗಿತ್ತು. ನನ್ನ ಪರಿಸ್ಥಿತಿಯನ್ನೆಲ್ಲ ವಿವರಿಸಿ ಹೇಳುತ್ತಲೂ ಮಾಸ್ತರರು ಇಪ್ಪತ್ತೈದು ರೂಪಾಯಿ ತಂದು ನನ್ನ ಕೈಗೆ ಹಾಕಿದರು. ಅವರಿಗೆ ಧನ್ಯವಾದಗಳನ್ನರ್ಪಿಸಿ

ಮನೆಗೆ ಬಂದು ಊಟ ಮುಗಿಸುವಷ್ಟರಲ್ಲಿ ರಾತ್ರಿಯಾಗಿತ್ತು. ರಾತ್ರಿಯಲ್ಲಿ ಬಸ್ಸು ಎಲ್ಲಿಂದ ಬರಬೇಕು? ತೊಂಡೇಬಾವಿಯಿಂದ ರೈಲ್ವೆ ನಿಲ್ದಾಣಕ್ಕೆ ಹದಿನೈದು ಮೈಲುಗಳ ಹಾದಿ. ಅಷ್ಟು ದೂರ ನಡೆದುಕೊಂಡಾದರೂ ನಾನು ಹೋಗಲೇ ಬೇಕಾಗಿತ್ತು.

"ರಾತ್ರಿ ಏನು ಹೋಗುತ್ತೀಯಪ್ಪಾ ಒಬ್ಬನೇ? ಬೇಡ, ಬಿಡು," ಎಂದಳು ತಾಯಿ.

ಡಿ.ಎಸ್.ಪಿ. ಯವರ ಹುಕುಮಿನ ಮಹಿಮೆ ಆಕೆಗೇನು ಗೊತ್ತು, ಪಾಪ?

ಸನಿಯದಲ್ಲಿದ್ದ ಒಬ್ಬ ರೈತನನ್ನು ಕಂಡು, ನನ್ನ ಅವಸರದ ಪ್ರಸಂಗದ ಕಲ್ಪನೆ ತಂದುಕೊಡುತ್ತಲೂ ಅವನು ಬಂಡಿ ಹೂಡಲು ಒಪ್ಪಿಕೊಂಡ. ರಾತ್ರಿ ಹನ್ನೊಂದು ಗಂಟೆಗೆ ಹೊರಟೆವು. ನಾವು ನಿಲ್ದಾಣವನ್ನು ಮುಟ್ಟುವುದಕ್ಕೂ ಗಾಡಿ ಬರುವುದಕ್ಕೂ ಸರಿಹೋಯಿತು. ಬಂಡಿಯವನಿಗೆ ನಾಲ್ಕು ರೂಪಾಯಿ ಕೊಡಮಾಡಿದೆ. ಅವನು ಸ್ವೀಕರಿಸಲು ಸಿದ್ಧನಾಗಲಿಲ್ಲ. ಚಹದ ಖರ್ಚಿಗೆಂದು ಎರಡು ರೂಪಾಯಿಗಳನ್ನಾದರೂ ತೆಗೆದುಕೊಳ್ಳಲೇಬೇಕೆಂದು ಬಲವಂತಪಡಿಸಿದಾಗ ಅವುಗಳನ್ನು ಸ್ವೀಕರಿಸಿದ. ನನ್ನ ಬಳಿಯಲ್ಲಿದ್ದ 'ರೈಲ್ವೆ ವಾರಂಟ್' ತೋರಿಸಿ ಟಿಕೀಟು ಪಡೆದು ರೈಲು ಹತ್ತಿದುದಾಯಿತು. ಗೊತ್ತುಪಡಿಸಿದ್ದ ಸಮಯಕ್ಕೆ ಸರಿಯಾಗಿ ಎಂದೂ ಬರದಿದ್ದ ರೈಲು ಆ ದಿನ ಬಂದಿದ್ದುದನ್ನು ಗಮನಿಸಿದಾಗ ನನಗೆ ಆಶ್ಚರ್ಯವಾಗದಿರಲಿಲ್ಲ. ಎಂ.ಎಸ್.ಎಂ. ರೈಲ್ವೆಯ ಯಾವ ಗಾಡಿಯೂ ಸಮಯಕ್ಕೆ ಸರಿಯಾಗಿ ಬಂದುದನ್ನು ನಾನೆಂದೂ ಕಂಡಿರಲಿಲ್ಲ.

೧೯೪೩ ನೆಯ ವರ್ಷದ ಮಧ್ಯಕಾಲವದು. ಗಾಡಿಯಲ್ಲಿ ವಿಪರೀತ ಗದ್ದಲ. ಗಿಡಗಳಿಗೆ ಜೋತುಬೀಳುವ ಕಪಿಗಳಂತೆ ಪ್ರಯಾಣಿಕರು ಕಂಬಿಗಳನ್ನು ಹಿಡಿದುಕೊಂಡು ಹೊರಗಡೆಯ ಹಲಗೆಯ ಮೇಲೆ ಜೋತುಬಿದ್ದಿದ್ದರು. ನಾನೂ ಅವರ ಹಾಗೇ ಕಾಲುಮಣೆಯ ಮೇಲೆ ನಿಂತುಕೊಳ್ಳುವ ಪ್ರಸಂಗ ಬರುವುದರಲ್ಲಿತ್ತು. ಆದರೆ, ಕೈದಿಗಳನ್ನು ಜೈಲಿಗೆ ಸಾಗಿಸಿಕೊಂಡೊಯ್ಯುತ್ತಿದ್ದ ನಮ್ಮ ಜಿಲ್ಲೆಯ ಸಶಸ್ತ್ರ ಪೋಲೀಸರು ಕೆಲವರು ಒಂದು ಡಬ್ಬಿಯಲ್ಲಿ ಕುಳಿತಿದ್ದವರು ನನ್ನನ್ನು ಗುರುತಿಸಿ ಒಳಕ್ಕೆ ಕರೆದುಕೊಂಡರು. ನಾನು ಒಳಸೇರಿದುದೂ ಒಂದು ಸಾಹಸದ ವಿಷಯವೇ ಆಗಿತ್ತು. ಕುಳಿತವರ, ನಿಂತವರ, ಮಲಗಿದವರ ಮೇಲೆ

ನೆಗೆಯುತ್ತಾ ಪೋಲೀಸರ ಬಳಿ ಬಂದು ಕುಳಿತುಕೊಂಡು 'ಪಾರಾದೆನಪ್ಪಾ' ಎಂದು ಮನಸ್ಸಿನಲ್ಲೇ ಹೇಳಿಕೊಂಡು ಸಮಾಧಾನದ ಉಸಿರು ಹಾಕಿದೆ.

ಸ್ಥಳ ಹಿಡಿಯುವ ಆತುರದಲ್ಲಿ ಸುತ್ತಲಿನ ಜನರನ್ನು ನಾನು ಗಮನಿಸಿರಲಿಲ್ಲ. ಪೋಲೀಸರು ತೆರವು ಮಾಡಿಕೊಟ್ಟ ಗೇಣುಜಾಗದಲ್ಲಿ ನನ್ನ ದೇಹವನ್ನೊರಗಿಸಿದ ಬಳಿಕ ಅತ್ತಿತ್ತ ದೃಷ್ಟಿ ಹೊರಳಿಸಿದೆ. ನನ್ನ ಎಡಬದಿಯಲ್ಲಿ, ನನ್ನ ದೇಹಕ್ಕೆ ಹತ್ತಿಕೊಂಡೇ ಒಬ್ಬ ಗುಜರಾತಿ ಯುವತಿಯಿದ್ದುದು ಕಾಣಿಸಿತು. ಅವಳ ಆಚೆ, ಅವಳ ತಂದೆಯಂತೆ ಕಾಣುತ್ತಿದ್ದ ಮುದುಕನೊಬ್ಬ ಡಬ್ಬಿಯ ಗೋಡೆಗೊರಗಿ ಗೊರಕೆ ಹೊಡೆಯುತ್ತಿದ್ದ. ಪೋಲೀಸರು ನನ್ನನ್ನು ಕರೆಯದಿದ್ದಲ್ಲಿ ಈ ಗುಜರಾತಿಗಳ ಪಕ್ಕದಲ್ಲಿ ನನಗೆ ಸ್ಥಳ ಸಿಕ್ಕುವುದು ಸಾಧ್ಯವೇ ಇರಲಿಲ್ಲ. ನಾನು ಹಟ ತೊಟ್ಟು ಕುಳಿತುಕೊಂಡಿದ್ದುದೇ ಆದರೆ ಹೆಂಗಸರ ಪಕ್ಕದಲ್ಲಿ ಕುಳಿತುಕೊಳ್ಳುವ ಹೇಸಿತನ ಮಾಡುವವನೆಂದು ನನ್ನನ್ನು ದೂಷಿಸಿ, ಸಹಪ್ರಯಾಣಿಕರ ದೃಷ್ಟಿಯಲ್ಲಿ ನನ್ನನ್ನು ಕೇಡಿಯನ್ನಾಗಿ ಮಾಡಿ ನನ್ನನ್ನು ಅಲ್ಲಿಂದ ಓಡಿಸಿಬಿಡುತ್ತಿದ್ದರವರು. ಆದರೆ, ನನ್ನನ್ನು ಕರೆದವರು ಪೋಲೀಸರಾದುದರಿಂದ ಅವರಿಗಂಜಿಕೊಂಡು ತೆಪ್ಪಗಿದ್ದರು. ಆದರೂ ಅವರು ರೈಲ್ವೆ ಶಾಖೆಯನ್ನು ಬಯ್ಯದಿರಲಿಲ್ಲ.

"ಎಲ್ಲರಿಂದ ದುಡ್ಡು ತೆಗೆದುಕೊಳ್ಳುತ್ತಾರೆ. ಅವರಿಗೆ ಕೂಡಲು ಸ್ಥಳವಿರುವದೋ ಇಲ್ಲವೋ ನೋಡುವಂತಿಲ್ಲ. ಇನ್ನೂ ನಾಲ್ಕಾರು ಡಬ್ಬಿ ಹಚ್ಚಿದರೆ ಈ ರೈಲ್ವೆಯವರ ಗಂಟೇನು ಹೋಗುವದೋ!" ಎಂದು ಗೊಣಗಿಕೊಂಡರು.

ಪಾಪ, ಅವರು ಸುಖಜೀವಿಗಳು. ರಾತ್ರೆಯೆಲ್ಲ ನಿದ್ದೆಗೆಟ್ಟು ಬಳಲಿದವರು. ನಾನು ಮೆಲ್ಲಗೆ ಅವರನ್ನು ಮಾತನಾಡಿಸಿ ಅವರು ಮುಂಬಯಿಗೆ ಪ್ರಯಾಣ ಹೊರಟ ಸಂಗತಿಯನ್ನು ತಿಳಿದುಕೊಂಡೆ. ರೈಲು ಹೊರಡುತ್ತಲೂ ನಾನು ಅತ್ತಿತ್ತ ಸರಿದು, ಇನ್ನೂ ಸ್ವಲ್ಪ ಸ್ಥಳ ಹಿಡಿದುಕೊಂಡೆ. ನಾನು ಅಲುಗಾಡಿದಾಗ ಆ ಯುವತಿಯ ತೊಡೆ ನನ್ನ ತೊಡೆಗೂ ಅವಳ ಮುಖ ನನ್ನ ಮುಖಕ್ಕೂ ತಾಗಿದುವು. ಜೇಬಿನಲ್ಲಿನ ಸೀಗರೇಟು ತೆಗೆಯಲೆಂದು ನಾನು ಕೈಯೆತ್ತಿದಾಗ ಅದು ಅವಳ ಸ್ತನವನ್ನು ಸ್ಪರ್ಶಿಸಿತು – ತೀರಾ ಸಹಜವಾಗಿ. ನನ್ನಲ್ಲಿ ವಿದ್ಯುತ್ಸಂಚಾರವಾದಂತಾಯಿತು. ಅವಳಿಗೂ ಹಾಗೇ ಆಯಿತೋ ಏನೊ. ಅವಳು ಒಂದು ಬಾರಿ ನನ್ನನ್ನು ದಿಟ್ಟಿಸಿನೋಡಿ ಸ್ವಲ್ಪ ಮುದುಡಿಕೊಂಡು

ಕುಳಿತಳು. ಏನನ್ನೂ ಅರಿಯದವನಂತೆ ನಾನು ಸಿಗರೇಟು ಹೊತ್ತಿಸಿದೆ. ಒಂದು 'ದಮ್' ಎಳೆದು ಹೊಗೆ ಬಿಡುತ್ತಾ ಆ ಯುವತಿಯನ್ನು ಕುರಿತು, "ಕ್ಷಮಿಸ ಬೇಕು," ಎಂದು ಹೇಳಿದೆ. ನನ್ನ ಮುಖಕ್ಕೂ ಅವಳ ಮುಖಕ್ಕೂ ನಾಲ್ಕಾರು ಇಂಚುಗಳ ಅಂತರವಿದ್ದಿತಷ್ಟೆ. ನಾನು ಮಾತನಾಡಿದಾಗ ನನ್ನ ಉಸಿರು ಕೂಡ ಅವಳ ಮುಖಕ್ಕೆ ತಾಗಿರಬೇಕು. ಹಠಾತ್ತಾಗಿ ಅವಳ ಮುಖದ ಬಣ್ಣ ಬದ ಲಾಯಿತು. ರಾತ್ರೆಯೆಲ್ಲ ನಿದ್ರೆಗೆಟ್ಟುದುದರಿಂದ ಅವಳ ಕಣ್ಣು ಕೆಂಪಗಾಗಿದ್ದುವು. ನನ್ನ ಉಸಿರಿನ ಸ್ಪರ್ಶದೊಂದಿಗೆ ಅವಳ ಕೆನ್ನೆಗಳೂ ಕೆಂಪಗಾದುವು – ಅವಳು ತುಟಿಯನ್ನು ಕಚ್ಚಿ, ದೃಷ್ಟಿಯನ್ನು ಕೆಳಗಡೆ ತಿರುಗಿಸಿದಳು. ಡಿ.ಎಸ್.ಪಿ. ಯವರನ್ನು ಭೆಟ್ಟಿಯಾಗುವ ಪ್ರಸಂಗವಿರದಿದ್ದರೆ ಈ ಬಂಗಾರಿಯ ಹಿಂದೆ ಹೊರಟು ಮುಂಬಯಿಯವರೆಗೂ ಹೋಗಿ ಮೋಜುಮಾಡಿ ಬರಬಹುದಾಗಿದ್ದಿ ತೆಂದು ನಾನೆಂದುಕೊಂಡೆ.

ಆ ಯುವತಿ ನಿದ್ರೆಯ ಜೊಂಪಿನಲ್ಲಿ ಅತ್ತಿತ್ತ ತೂಗಾಡುತ್ತಿದ್ದಳು. ಅವಳ ಮುಖ ನನ್ನ ಎಡಭುಜದ ಮೇಲೊರಗುತ್ತಿತ್ತು. ಅವಳ ತಲೆಗೂದಲು ನನ್ನ ಕಿವಿಯನ್ನು ಮುದ್ದಿಸುತ್ತಿತ್ತು. ಆ ಸುಗಂಧಯುಕ್ತ ಕೂದಲಿನ ಸ್ಪರ್ಶವಾದ ಹಾಗೆಲ್ಲ ನನ್ನ ಎದೆ ಕೆರಳುತ್ತಿತ್ತು. ಅವಳನ್ನು ಮುದ್ದಿಡಬೇಕೆಂಬ ಬಲವತ್ತರ ವಾದ ಬಯಕೆ ನನ್ನ ಅಂಗಾಂಗಗಳಲ್ಲೆಲ್ಲ ಪ್ರವಹಿಸುತ್ತಿತ್ತು. ಆದರೆ, ಅದು ರೈಲು. ಸಿನಿಮಾ ಥಿಯೇಟರಲ್ಲ. ಸಂತೆಯಲ್ಲಿನ ಮಾಂಸವನ್ನು ಕಂಡು ಬಾಯಿಂದ ಜೊಲ್ಲು ಸುರಿಸುತ್ತ ನಿಲ್ಲುವ ನಾಯಿಯಂತಾಗಿತ್ತು ನನ್ನ ಸ್ಥಿತಿ.

ಅವಳು ತೂಕಡಿಸುತ್ತಿದ್ದ ಸಮಯ ಸಾಧಿಸಿ ನಾನು ನಿಧಾನವಾಗಿ ಅವಳ ಕಡೆ ಸರಿದು ಅವಳನ್ನಂಟಿಕೊಂಡ ಹಾಗೆ ಕುಳಿತಿದ್ದೆ. ಅವಳ ಕೆನ್ನೆಗಳು ನನ್ನ ಕೆನ್ನೆಗಳನ್ನು ಚುಂಬಿಸುತ್ತಿದ್ದುವು. ಬೆಳಗಿನ ತಂಪುಗಾಳಿ ಬೀಸತೊಡಗಿತ್ತು. ನಾನು ನನ್ನ ಹೊದ್ದಿಕೆಯನ್ನು ತೆಗೆದು ಹೊದ್ದುಕೊಂಡೆ. ಅದರದೊಂದು ಮೂಲೆ ಆ ಯುವತಿಯ ತೊಡೆಗಳ ಮೇಲೂ ಹರಡಿಕೊಂಡಿತು.

ಐದೂವರೆಯಾಗುತ್ತ ಬಂದಿತ್ತು. ಪೋಲೀಸರು, ಕೈದಿಗಳು, ಇತರ ಪ್ರಯಾಣಿಕರು ಎಲ್ಲರೂ ತೂಗಡಿಸುತ್ತಿದ್ದರು. ಗುಜರಾತಿ ಯುವತಿಯ ಬಲಗೈ ಬೆಂಚಿನ ಮೇಲಿತ್ತು. ಅದರ ಹತ್ತಿರವೇ ನನ್ನ ಎಡಗೈ – ಹೊದ್ದಿಕೆಯೊಳಗಡೆ. ಬೆಂಚಿನ ಹಿಂಬದಿಗೆ ತಲೆಯಾನಿಸಿ ಮುಖದ ಮೇಲೆ ಹೊದ್ದಿಕೆಯನ್ನೆಳೆದು

ಕೊಂಡೆ. ನಿದ್ದೆಯಲ್ಲಿದ್ದ ಅವಳು ಅದು ತನ್ನ ಹೊದ್ದಿಕೆಯೇ ಎಂದು ಭಾವಿಸಿ ತಾನೂ ಅದನ್ನೆಳೆದು ಮುಖ ಮುಚ್ಚಿಕೊಂಡಳು. ನಾನು ನಿದ್ದೆಹೋದವನಂತೆ ನಟಿಸುತ್ತಾ ಮೆಲ್ಲಗೆ ಅವಳ ಕೈ ಹಿಡಿದುಕೊಂಡೆ. ಅವಳಿಗೆ ಅದರ ಅರಿವಾಗ ಲಿಲ್ಲವೋ ಏನೊ. ಅವಳು ಪ್ರತಿಭಟಿಸಲಿಲ್ಲ. ಹೊದ್ದಿಕೆಯೊಳಗಡೆ ನಮ್ಮಿಬ್ಬರ ಮುಖಗಳೂ ಒಂದಕ್ಕೊಂದು ತಾಕಲಾಡುತ್ತಿದ್ದುವು. ನಿಧಾನವಾಗಿ ಬಾಗುತ್ತ ಬಾಗುತ್ತ ಅವಳ ಮುಖ ನನ್ನ ಮುಖದ ಹತ್ತಿರ ಬಂದ ಹಾಗೆ ನಾನು ಅವಳ ಕೆನ್ನೆಗಳನ್ನೊಮ್ಮೆ ಚುಂಬಿಸಿದೆ. ಅವಳಿಗೆ ಥಟ್ಟನೆ ಎಚ್ಚರವಾಯಿತು. ಮುಖದ ಮೇಲಿನ ಹೊದ್ದಿಕೆಯನ್ನು ಸರಿಸಿದಳು. ನಾನು ಮಿಸುಕಾಡಲಿಲ್ಲ. ತನ್ನ ಕೈ ಬಿಡಿಸಿಕೊಳ್ಳಲು ಯತ್ನಿಸಿದಳು – ನಾನು ಬಿಡಲಿಲ್ಲ. ಅವಳು ಅತ್ತಿತ್ತ ನೋಡಿ ದಳು. ಎಲ್ಲರೂ ನಿದ್ರಾಧೀನರಾಗಿದ್ದುದನ್ನು ಕಂಡು ಮತ್ತೆ ಹೊದ್ದಿಕೆಯನ್ನೆಳೆದು ಮುಖ ಮುಚ್ಚಿಕೊಂಡಳು. ಮತ್ತೆ ನನ್ನ ಆಟಕ್ಕಾರಂಭವಾಯಿತು. ಅವಳಿಗೂ ಅದು ಹಿತಕರವಾಗಿದ್ದಿತೇನೊ. ಅವಳು ತೆಪ್ಪಗೆ ಬಿದ್ದುಕೊಂಡಳು.

ಮುಂದಿನ ನಿಲ್ದಾಣಕ್ಕೆ ಬೆಳಗಾಯಿತು. ಜನ ಏರುವುದು ಇಳಿಯುವುದ ಕ್ಕಾರಂಭವಾಯಿತು. ನಮ್ಮ ಎದುರಿನ ಬೆಂಚಿನ ಮೇಲಿದ್ದ ಕೆಲವರು ಇಳಿದು ಹೋದರು. ನನ್ನ ಬಲಗಡೆಗಿದ್ದ ಇಬ್ಬರು ಪೋಲೀಸರು ಎದ್ದು ಎದುರಿಗೆ ತೆರ ವಾಗಿದ್ದ ಸ್ಥಳ ಹಿಡಿದುಕೊಂಡರು. ನನಗೆ ಸ್ವಲ್ಪ ಅಗಲವಾದ ಸ್ಥಳ ದೊರೆಯಿತು. ಗುಜರಾತೀ ಮುದುಕ ಕಾಲು ಚಾಚಿದ. ಪುನಃ ನಾನು ಯುವತಿಯ ಕೈ ಹಿಡಿದುಕೊಂಡೆ. ಅವಳ ಮುಖದ ಮೇಲೆ ಹಾಸ್ಯಲಾಸ್ಯವಾಡುತ್ತಿತ್ತು. ತಲೆ ಗೂದಲು ಅಸ್ತವ್ಯಸ್ತವಾಗಿತ್ತು.

ನಾನು ಹಿಂದೀ ಭಾಷೆಯಲ್ಲಿ ಅವಳನ್ನು ಮಾತನಾಡಿಸಿದೆ: ನಿದ್ರೆ ಬಂದಿತ್ತೇ ಎಂದು.

“ನೀವು ಬಂದ ಬಳಿಕ ಒಂದು ತಾಸು ನಿದ್ದೆಯಾಯಿತು,” ಎಂದಳಾಕೆ. ನನಗೆ ನಗು ಬಂತು.

ಮುಂದಿನ ನಿಲ್ದಾಣ ಬರುವಷ್ಟರಲ್ಲಿ ಗುಜರಾತಿ ಪರಿವಾರಕ್ಕೆಲ್ಲ ಎಚ್ಚರಾಗಿತ್ತು. ನಮ್ಮ ಪೋಲೀಸನೊಬ್ಬನನ್ನು ಕಳಿಸಿ ನೀರು ತರಿಸಿಕೊಟ್ಟೆ. ಗುಜರಾತಿ ಮುದುಕ ನನ್ನನ್ನು ವಂದಿಸುತ್ತಾ ಮುಖ ತೊಳೆದುಕೊಂಡ. ಹಾಗೇ ಮಾತಿಗಾರಂಭವಾಯಿತು. ಆ ಮುದುಕನ ಸರಾಫಿ ಅಂಗಡಿಯಿತ್ತು ಬೆಂಗಳೂರಿ

ನಲ್ಲಿ. ಈಗ ಸಂಸಾರ ಸಮೇತರಾಗಿ ಮುಂಬಯಿಗೆ ಹೊರಟಿದ್ದ. ಅವನ ನಾಲ್ವರು ಮಕ್ಕಳಲ್ಲಿ ಹಿರಿಯವಳೇ ಈ ಯುವತಿ. ಅವಳ ಬೆನ್ನ ಹಿಂದೆ ೧ಳ ವರ್ಷಗಳ ಹುಡುಗನೊಬ್ಬ, ಇಬ್ಬರು ಚಿಕ್ಕ ಹುಡುಗಿಯರು. ಅವನ ಪತ್ನಿಗೆ ನಲವತ್ತು ನಲವತ್ತೈದರ ವಯಸ್ಸು. ಅವನಿಗೆ ಸುಮಾರು ಅರವತ್ತೈದು. ಹೆಂಡತಿ ಮಕ್ಕಳನ್ನೆಲ್ಲ ಕರೆದುಕೊಂಡು ಹೊರಟಿದ್ದ.

"ಹಾಗಾದರೆ ಈಗ ಅಂಗಡಿ ನೋಡುತ್ತಿರುವವರಾರು? ಅಳಿಯಂದಿರೇ?" ಎಂದು ನಾನು ಪ್ರಶ್ನಿಸಿದೆ.

ಮುದುಕನ ಮುಖದಿಂದ ನಿಟ್ಟುಸಿರೊಂದು ಹೊರಹೊರಟಿತು. ಯುವತಿಯ ಹಸನ್ಮುಖದ ಮೇಲೆ ದುಃಖದ ನೆರಳು ಕವಿಯಿತು. ಅದನ್ನು ಕಂಡು ನನಗೂ ವಿಷಾದವಾಯಿತು. ಆ ಪ್ರಶ್ನೆಯನ್ನು ಕೇಳಬಾರದಾಗಿದ್ದಿತೇನೋ ಎನಿಸಿತು.

ಮುದುಕ ಹೇಳಿದ: ತನ್ನ ಹಿರಿಯ ಮಗಳು ಗಂಡನನ್ನು ಕಳೆದುಕೊಂಡ ದುರ್ದೈವಿ. ಐದು ವರ್ಷಗಳ ಹಿಂದೆ ಅವಳ ಗಂಡ ತೀರಿಕೊಂಡಿದ್ದ. ಹದಿನೇಳರ ಪ್ರಾಯದ ಆ ಸುಂದರ ಯುವತಿಗೆ ವೈಧವ್ಯ ಪ್ರಾಪ್ತವಾಗಿತ್ತು.

"ಪಾಪ, ಪಾಪ!" ಎಂದು ನಾನು ಅನುಕಂಪ ವ್ಯಕ್ತಗೊಳಿಸಿದೆ.

"ನೀವೇನು ಮಾಡುತ್ತಿದ್ದೀರಿ?" ಎಂದು ಪ್ರಶ್ನಿಸಿದ ಮುದುಕ.

ನಾನು ಪೋಲೀಸ್ ಸಿಪಾಯಿಯಾಗಿದ್ದುದನ್ನು ಹೇಳಲು ಸಂಕೋಚ. ಆ ಬಂಗಾರಿಯ ಎದುರಿಗೆ ನಾನು ಕಡಮೆಯವನಾಗುವುದೇ!

"ನಾನೊಬ್ಬ ಪೋಲೀಸ್ ಸಬ್‌ಇನ್ಸ್‌ಪೆಕ್ಟರ್," ಎಂದು ಸುಳ್ಳು ಹಾರಿಸಿ ಬಿಟ್ಟೆ.

ಮುದುಕ ಬಹಳ ಖಾಟಿ.

"ಸಬ್‌ಇನ್ಸ್‌ಪೆಕ್ಟರರಾದ ನೀವು ಥರ್ಡ್‌ಕ್ಲಾಸಿನಲ್ಲೇಕೆ ಪ್ರವಾಸ ಮಾಡುತ್ತಿದ್ದೀರಿ?"

"ನಾವು ಸರಕಾರೀ ಕೆಲಸಕ್ಕೆ ಹೊರಟಾಗ ಮಾತ್ರ ನಮಗೆ ಇಂಟರ್ ಕ್ಲಾಸಿನ ಖರ್ಚು ಸಿಗುತ್ತದೆ. ಈಗ ನಾನು ಹೊರಟದ್ದು ಖಾಸಗೀ ಕೆಲಸಕ್ಕೆ. ಸುಮ್ಮನೆ ಯಾಕೆ ದುಡ್ಡು ಹಾಳುಮಾಡುವುದು ಅಂತ ಥರ್ಡ್‌ಕ್ಲಾಸಿನಲ್ಲೇ ಹೊರಟಿದ್ದೇನೆ. ನಿಮ್ಮಂಥ ಶ್ರೀಮಂತರೂ ಥರ್ಡ್‌ಕ್ಲಾಸಿನಲ್ಲೇ ಹೋಗುವಾಗ ನಮ್ಮಂಥವರದೇನು!"

ಅವನ ಸಿರಿವಂತಿಕೆಯ ಬಗೆಗೆ ನಾನು ಮಾತನಾಡುತ್ತಲೂ ಮುದುಕನಿಗೆ ಸ್ವಾಭಾವಿಕವಾಗಿಯೇ ಸಂತೋಷವಾಯಿತು. ಅವನು ತನ್ನ ಹೊಲ ಮನೆ, ಆಸ್ತಿಪಾಸ್ತಿಗಳ ವಿಚಾರ ಹೇಳತೊಡಗಿದ. ನಾನು 'ಹೂಂ, ಹೂಂ' ಎನ್ನುತ್ತ ಕುಳಿತೆ.

ಅವರು ಡಬ್ಬಗಳನ್ನು ತೆಗೆದು ಉಪಾಹಾರಕ್ಕಾರಂಭಿಸಿದರು. ಲಾಡುಗಳು, ಪುರಿಗಳು.

"ನೀವೂ ಸ್ವಲ್ಪ ತಗೊಳ್ಳಿ," ಎಂದ ಮುದುಕ.

"ಛೆ. ಛೆ. ಏನೂ ಬೇಡ."

"ಇರಲಿ. ತಗೊಳ್ಳಿ," ಎಂದು ಅವನ ಮಗಳು ಒತ್ತಾಯಮಾಡಿ ಒಂದು ಉಂಡೆಯನ್ನೂ ಪುರಿಯನ್ನೂ ಕೊಟ್ಟಳು. ಗುಜರಾತಿಗಳ ತಿಂಡಿ-ಪದಾರ್ಥಗಳೆಲ್ಲ ಸಾಮಾನ್ಯವಾಗಿ ಚಿಕ್ಕ ಆಕಾರದವುಗಳಾಗಿರುತ್ತವೆ.

"ಒಂದು ಕೊಟ್ಟರೆ ಸಾಕೇ?" ಎಂದು ನಾನು ತಮಾಷೆಗಾಗಿ ಹೇಳಿದೆ.

"ನಿಮಗೇ ಎಲ್ಲಾ ಕೊಟ್ಟು ನಾವೇನು ಉಪವಾಸ ಬೀಳಬೇಕೇ!" ಎಂದಳು ಆ ಬಿನ್ನಾಣಗಿತ್ತಿ.

"ಓರೆಕೋರೆ ನಗರಕ್ಕಿಳಿದು ಹೋಗಿರಿ. ನಾನು ನಿಮ್ಮೆಲ್ಲರಿಗೂ ಊಟ ಮಾಡಿಸಿ ಕಳಿಸುತ್ತೀನಿ," ಎನ್ನುತ್ತಾ ನಾನು ಅವಳ ತೊಡೆ ಚಿವುಟಿದೆ.

ಹಕ್ಕಿ ಕೈಗೇ ಬಂದಹಾಗಿತ್ತು. ಆದರೇನು? ಸರಸಕ್ಕೆ ಸಮಯವಿರಲಿಲ್ಲ. ಹತ್ತುಗಂಟೆಯೊಳಗಾಗಿ ನಾನು ಡಿ. ಎಸ್. ಪಿ. ಯವರೆದುರಿಗೆ ಹಾಜರಾಗಬೇಕಾಗಿತ್ತು.

ಓರೆಕೋರೆ ನಿಲ್ದಾಣವೂ ಬಂತು. ಮುದುಕ ನನ್ನ ವಿಳಾಸ ಕೇಳಿ ತಿಳಿದುಕೊಂಡ. ಅವರ ವಿಳಾಸವನ್ನು ನಾನು ಬರೆದುಕೊಂಡೆ. ಬಂಧುಗಳನು ಬೀಳ್ಕೊಡುವಂತೆ ನಾನು ಅವರನ್ನು ಬೀಳ್ಕೊಟ್ಟೆ.

ಗಾಡಿ ಹೊರಡುವಾಗ, ಪ್ಲಾಟ್‌ಫಾರ್ಮಿನ ಮೇಲೆ ನಿಂತುಕೊಂಡಿದ್ದ ನನ್ನ ಕೈಗೆ ಅವಳು ತನ್ನ ಕೈವಸ್ತ್ರವನ್ನಿತ್ತಳು.

"ಬೆಂಗಳೂರಿಗೊಮ್ಮೆ ಬಂದಾಗ ನಮ್ಮನ್ನು ಕಂಡು ಹೋಗಿರಿ," ಎಂದ ಅವಳ ತಂದೆ.

"ಬರ್ರಿ. ಅವಶ್ಯ ಬರ್ರಿ," ಎಂದಳು ಅವಳೂ.

ಗಾಡಿ ವೇಗವಾಗಿ ಮುಂದೆ ಸಾಗಿತು. ಅವಳು ಕೊಟ್ಟ ಕೈವಸ್ತ್ರ ಬೀಸುತ್ತಾ ನಾನು ನಿಂತುಕೊಂಡಿದ್ದೆ. ಅವಳೂ ಕೈ ಬೀಸುತ್ತಿದ್ದಳು. ಹೆಣ್ಣು-ಗಂಡಿನ ಈ ನಂಟು ಎಷ್ಟು ವಿಲಕ್ಷಣವಾದುದು! ಎಂದುಕೊಳ್ಳುತ್ತಾ ಜಡ ಹೃದಯವನ್ನು ಹೊತ್ತು ನಿಲ್ದಾಣವನ್ನು ತ್ಯಜಿಸಿ ನಡೆದೆ.

ಪೋಲೀಸ್ ಕ್ಲಬ್ಬಿನಲ್ಲಿ ನಮ್ಮ ಇನ್ಸ್‌ಪೆಕ್ಟರರು ನನ್ನ ಬರುವಿಕೆಯನ್ನೇ ಕಾಯುತ್ತ ಕುಳಿತಿದ್ದರು. ಹೊರಗಡೆ ಮಿಲಿಟರಿ ವಾಹನವೊಂದು ಕಾದಿತ್ತು.

"ಅಂತೂ ವೇಳೆಗೆ ಸರಿಯಾಗಿ ಬಂದಿಯಲ್ಲ! ಈಗ ವಿರಮಿಸಿಕೊಳ್ಳಲೂ ಪುರಸತ್ತಿಲ್ಲ. ಮೋಟಾರಿನಲ್ಲಿ ಕೂತುಕೋ," ಎಂದರು ಇನ್ಸ್‌ಪೆಕ್ಟರು. ನನಗೆ ಮಾತನಾಡುವುದಕ್ಕೂ ಆಸ್ಪದವೀಯದೆ ತಾವು ಮುಂದೆ ಕುಳಿತುಕೊಂಡರು. ನಾನು ಹಿಂಭಾಗದಲ್ಲಿ ಕುಳಿತೆ. ಅಲ್ಲಿ ಹತ್ತು ಹನ್ನೆರಡು ಮಂದಿ ಸಶಸ್ತ್ರ ಪೋಲೀಸರಿದ್ದರು. ಅವರಲ್ಲಿ ಅನೇಕರು ನನ್ನ ಸ್ನೇಹಿತರು. ಅವರ ಮುಖದಿಂದ ಎಲ್ಲ ವಿಚಾರಗಳೂ ತಿಳಿದುಬಂದುವು.

ನಮ್ಮ ಜಿಲ್ಲೆಯಲ್ಲೇ ಒಂದು ಊರಿನಲ್ಲಿ ಬ್ಯಾಂಕು ಲೂಟಿಯಾಗಿತ್ತು, ಕೆಲದಿನಗಳ ಹಿಂದೆ. ಅಪರಾಧಿಗಳ ಶೋಧಕ್ಕೆಂದು ನಮ್ಮ ಇನ್ಸ್‌ಪೆಕ್ಟರರನ್ನು "ಸ್ಪೆಶಲ್ ಡ್ಯೂಟಿ"ಯ ಮೇಲೆ ನೇಮಿಸಲಾಗಿತ್ತು. ಆ ಕೆಲಸದಲ್ಲಿ ನೆರವಾಗಬಲ್ಲ ನಾಲ್ಕು ಜನ ಚಾಣಾಕ್ಷ ಹವಾಲ್ದಾರರನ್ನೂ ನನ್ನನ್ನೂ ಆರಿಸಿಕೊಂಡಿದ್ದರು ಇನ್ಸ್‌ಪೆಕ್ಟರು.

"ಇಷ್ಟೇಯೇ!" ಎಂದುಕೊಳ್ಳುತ್ತಾ ನಾನು ಸಮಾಧಾನದ ಉಸಿರು ಹಾಕಿದೆ. ಡಿ. ಎಸ್. ಪಿ. ಯವರೆದುರಿಗೆ ಎಂಥ ಪ್ರಶ್ನೆ ಬರುವುದೋ ಎಂದು ದಿಗಿಲುಗೊಂಡಿದ್ದ ನನ್ನ ಎದೆ ಹಗುರಾಯಿತು.

ಆದರೆ, ಬ್ಯಾಂಕಿನ ದರೋಡೆಯ ಶೋಧವೆಂದರೆ ಸಣ್ಣ ಕೆಲಸವಲ್ಲ. ಒಂದೆರಡು ದಿನಗಳಲ್ಲಿ ಮುಗಿಯತಕ್ಕ ಕಾರ್ಯವಲ್ಲ. ತಿಂಗಳು ಎರಡು ತಿಂಗಳು ಆದರೂ ಆದೀತು. ನನ್ನ ಹತ್ತಿರವಿದ್ದ ಹಣ ಖರ್ಚಿಗೆ ಸಾಲುವಂತಿರಲಿಲ್ಲ. ಈಗಾಗಲೇ ಎರಡು ನೂರು ರೂಪಾಯಿಗಳವರೆಗೂ ಸಾಲವಾಗಿತ್ತು. ಇನ್ನೂ ಸಾಲ ಮಾಡುವುದಕ್ಕೆ ನನಗೆ ಇಚ್ಛೆಯಿರಲಿಲ್ಲ. ಪ್ರವಾಸ ಕಾಲದಲ್ಲಿ ಸಾಲ ಕೊಡುವವರಾದರೂ ಯಾರು?

೨೧

## ಖಾನಾವಳಿಯ ಪಾರಕ್ಕ

ಆ ಬ್ಯಾಂಕಿನ ದರೋಡೆ ನಮ್ಮ ಪ್ರಾಂತದಲ್ಲೆಲ್ಲ ತುಂಬಾ ಕೋಲಾಹಲ ವುಂಟುಮಾಡಿತ್ತು. ಅದು ಆಗಸ್ಟ್ ಚಳವಳಿಗಾರರ ಕೆಲಸವೆಂದೇ ಎಲ್ಲರೂ ಹೇಳುತ್ತಿದ್ದರು. ಅದರಿಂದಾಗಿ ಸರಕಾರ ಗಡಬಡಿಸಿಕೊಂಡು ಎದ್ದು, ಸರ್ವ ಸಾಹಸಮಾಡಿ ಅಪರಾಧಿಗಳನ್ನು ಹಿಡಿಯಲು ಆಜ್ಞೆ ವಿಧಿಸಿತ್ತು.

ಒಂದು ರಾತ್ರೆ ಮೂರು ಗಂಟೆಯ ಸಮಯಕ್ಕೆ ಆ ದರೋಡೆ ನಡೆದಿತ್ತು. ಬ್ಯಾಂಕಿನಲ್ಲಿನ ದೊಡ್ಡ ಟ್ರೆಜರಿಯೊಂದನ್ನೊಡೆದು ಅದರಲ್ಲಿದ್ದ ಇಪ್ಪತ್ತೆರಡು ಸಾವಿರ ರೂಪಾಯಿ ನಗದು ಹಣವನ್ನು, ಸುಮಾರು ಇಪ್ಪತ್ತು ಸಾವಿರ ಬೆಲೆಯ ಬಂಗಾರದೊಡವೆಗಳನ್ನೂ ದೋಚಿಕೊಂಡು ಹೋಗಿದ್ದರು. ಅಲ್ಲಿಯ ವ್ಯಾಪಾರಸ್ಥನೊಬ್ಬನಿಗೆ ಸಾಲ ಕೊಡಲೆಂದು ಬ್ಯಾಂಕಿನ ಮುಖ್ಯ ಕಚೇರಿಯಿಂದ ಹಿಂದಿನ ದಿನವೇ ಇಪ್ಪತ್ತು ಸಾವಿರ ರೂಪಾಯಿ ತರಿಸಿ ಇಡಲಾಗಿತ್ತು. ಆ ಸುದ್ದಿ ದರೋಡೆಗಾರರಿಗೆ ಹೇಗೋ ತಿಳಿದಿತ್ತು. ರಾತ್ರೆ ಬ್ಯಾಂಕ್ ಮ್ಯಾನೇಜರರ ಮನೆಗೆ ಹೋಗಿ ಅವರನ್ನೆಬ್ಬಿಸಿ, ಎದೆಗೆ ಪಿಸ್ತೂಲು ಗುರಿಯಿಟ್ಟು ಬೆದರಿಸಿ ಬ್ಯಾಂಕಿಗೆ ಕರೆದುಕೊಂಡು ಬಂದು ಬೀಗದಕೈ ಕಸಿದುಕೊಂಡು, ಅವರನ್ನು ಕಂಬಕ್ಕೆ ಬಿಗಿದು ಟ್ರೆಝುರಿ ಲೂಟಿ ಮಾಡಿದ್ದರು. ಅಲ್ಲಿ ಇಬ್ಬರು ಪೋಲೀಸರೂ ಒಬ್ಬ ಹವಾಲ್ದಾರನೂ ಇದ್ದರು. ದರೋಡೆಗಾರರು ಅವರ ಮನೆಗಳಿಗೂ ಕಾವಲಿದ್ದರು. ದರೋಡೆಗಾರರು ಹೊರಟುಹೋದ ತಕ್ಷಣವೇ ಆ ಹವಾಲ್ದಾರನು ಕೊಂಚ ಬುದ್ಧಿಯನ್ನುಪಯೋಗಿಸಿ ಆ ಊರಿನ ರೈಲ್ವೆ ಸ್ಟೇಶನ್ನಿಗೆ ಹೋಗಿ ಹೆಡ್‌ಕ್ವಾರ್ಟರಿಗೆ ಸಮಾಚಾರ ತಿಳಿಸಿದ್ದಲ್ಲಿ ಅರ್ಧ ಗಂಟೆಯೊಳಗಾಗಿ ಪೋಲೀಸ್

ಪಡೆ ಬಂದು ಸುತ್ತಮುತ್ತಲಿನ ದಾರಿಗಳನ್ನು ಅಡ್ಡಗಟ್ಟಲು ಸಾಧ್ಯವಾಗುತ್ತಿತ್ತು, ದರೋಡೆಗಾರರಲ್ಲಿ ಕೆಲವರಾದರೂ ಸಿಕ್ಕಿಬೀಳಬಹುದಾಗಿತ್ತು. ಆದರೆ, ಆತ ಬುದ್ಧಿಗೇಡಿ. ಸ್ಟೇಶನ್ನಿನ ಟೆಲಿಫೋನ್ ಉಪಯೋಗಿಸುವ ಗೊಡವೆಗೆ ಹೋಗದೆ, ತಂತಿಯನ್ನೂ ಕೊಡದೆ, ಮಾರನೆಯ ಬೆಳಗಿನ ರೈಲಿಗೆ ಒಬ್ಬ ಪೋಲೀಸನನ್ನು ಕಳಿಸಿಕೊಟ್ಟಿದ್ದ! ಅವನ ಅಜಾಗರೂಕತೆಯಿಂದಾಗಿ ದರೋಡೆಗಾರರೆಲ್ಲ ಲೂಟಿಯ ಹಣ ಮತ್ತು ಒಡವೆಗಳ ಸಮೇತ ಜಾರಿಕೊಂಡಿದ್ದರು.

ಅಂದಿಗೆ ಹದಿನೈದು ದಿನಗಳು ಕಳೆದುಹೋಗಿದ್ದುವು, ಲೂಟಿ ನಡೆದು. ಅದುವರೆಗೆ ದರೋಡೆಗಾರರ ಸುಳಿವು ಸಿಕ್ಕಿರಲಿಲ್ಲ.

ಅವರನ್ನು ಶೋಧಿಸಲೆಂದು ಪ್ರಚಂಡ ಸಿದ್ಧತೆ ನಡೆದಿತ್ತು. ಅನೇಕ ಜನ ಸಿ.ಐ.ಡಿ. ಗಳು, ನೂರು ಜನ ಪೋಲೀಸರು, ಓರ್ವ ಇನ್‌ಸ್ಪೆಕ್ಟರರು, ಮೂವರು ಫೌಜದಾರರು, ನಾವು ಐವರು ಪತ್ತೇದಾರರು. ನಮ್ಮೆಲ್ಲರ ಮೇಲೆ ಒಬ್ಬರು ಆಂಗ್ಲ ಎ. ಎಸ್. ಪಿ. ನಮ್ಮ ಬಿಡಾರವೇ ಒಂದು ಊರಿನಂತೆ ಕಾಣುತ್ತಿತ್ತು.

ನಾವು ಅಲ್ಲಿಗೆ ಹೋದ ನಾಲ್ಕು ದಿನಗಳ ತರುವಾಯ ಡಿ. ಎಸ್. ಪಿ. ಯವರು ಬಂದರು. ಬಂಗಲೆಗೆ ನಮ್ಮನ್ನು ಕರೆಯಿಸಿಕೊಂಡು, ಈ ದರೋಡೆಯ ಶೋಧ ನಡೆಸಿ ಅಪರಾಧಿಗಳನ್ನೂ ಮಾಲನ್ನೂ ವಶಪಡಿಸಿಕೊಂಡಲ್ಲಿ ಬಡ್ತಿ ಕೊಡುವುದಾಗಿ ಆಶ್ವಾಸನವಿತ್ತರು. ನನ್ನ ಎದೆಯಲ್ಲಿ ಹೊಸ ಉತ್ಸಾಹ ಸಂಚರಿಸಿದಂತಾಯಿತು. ನನ್ನ ಬುದ್ಧಿಕೌಶಲ್ಯವನ್ನೆಲ್ಲ ಉಪಯೋಗಿಸಿ ದುಡಿಯಲು ನಿರ್ಧರಿಸಿದೆ. ನನ್ನ ದೃಷ್ಟಿಯಲ್ಲಿ ಈ ಬಡ್ತಿಗೆ ಮಹತ್ವವಿತ್ತು. ನಾನು ಅಮಲ್ದಾರಿಕೆ ಪಡೆದರೆ ಸಾಕು, ಮುಂದೆ ಫೌಜದಾರಿಕೆ ಪಡೆಯುವುದು ಬಹಳ ಸುಲಭವಾಗುತ್ತಿತ್ತು.

ನನ್ನ ಜೊತೆಗಾರರಾಗಿದ್ದ ನಾಲ್ವರು ಹವಾಲ್ದಾರರು, ಕಲ್ಲನಗೌಡ, ಪುಟ್ಟಪ್ಪ, ನಿಂಗಪ್ಪ ಮತ್ತು ರಸೂಲ್ ಸಾಹೇಬರು ಕೂಡಾ ಬಹಳ ಬುದ್ಧಿವಂತರು. ಅನೇಕ ಅಪರಾಧಗಳನ್ನು ಪತ್ತೆಮಾಡಿ ಪ್ರಸಿದ್ಧರಾದವರು. ತಮ್ಮ ಕರ್ತವ್ಯ ನೆರವೇರಿಸುವಾಗ ಪ್ರಾಣಕ್ಕೆರವಾಗುವ ಪ್ರಸಂಗ ಬಂದರೂ ಹಿಂಜರಿಯದ ವೀರರು. ಅಂತೆಯೆ, ಇನ್‌ಸ್ಪೆಕ್ಟರರು ಅವರನ್ನು ಸಹಾಯಕ್ಕಾಗಿ ಆರಿಸಿಕೊಂಡಿದ್ದರು. ಅವರಷ್ಟು ಕೆಲಸಗಳನ್ನು ನಾನೇನೂ ಮಾಡಿರಲಿಲ್ಲ. ನಮ್ಮ ಇನ್‌ಸ್ಪೆಕ್ಟರರು ವಿಶ್ವಾಸದಿಂದ ನನ್ನನ್ನು ಆರಿಸಿದ್ದರಷ್ಟೆ.

ನಮಗೆ ಐದು ಮಂದಿಗೂ ತಲಾ ಐವತ್ತು ರೂಪಾಯಿಗಳಂತೆ ಹಣ ದೊರೆಯಿತು – ಖರ್ಚಿಗಾಗಿ. ಹಣಕ್ಕಾಗಿ ಚಿಂತಿಸುತ್ತಿದ್ದ ನನಗಾಗ ಕೊಂಚ ಹಾಯೆನ್ನಿಸಿತು.

ನಾವು ಕೆಲವರು ಸುದ್ದಿಗಾರರನ್ನು ಹಿಡಿದು, ಅವರಿಗೆ ಸ್ವಲ್ಪ ಹಣ ಕೊಟ್ಟು ದರೋಡೆಯ ಸಂಬಂಧದ ಸುದ್ದಿಗಳನ್ನು ತಿಳಿದುಕೊಂಡು ಬರಲು ಕಳಿಸಿದೆವು. ಆ ಭಾಗದಲ್ಲಿ ನೂರಾರು ಚಿಕ್ಕ ಪುಟ್ಟ ದರೋಡೆಗಳು ನಡೆದು ಬೆಳಕಿಗೆ ಬರದೆ ಉಳಿದಿದ್ದುವು. ಅವುಗಳನ್ನು ಬಯಲಿಗೆಳೆದು ಅಪರಾಧಿಗಳನ್ನು ಬಂಧಿಸುವ ಕೆಲಸವೂ ನಮ್ಮ ಪಾಲಿಗೇ ಬಂತು.

ಹತ್ತು ಹದಿನೈದು ದಿನಗಳೊಳಗಾಗಿ ಸುತ್ತಮುತ್ತಲಿನ ಹಳ್ಳಿಗಳ ಪುಂಡರ ಬಗೆಗೆ ಮಾಹಿತಿ ಕಲೆಹಾಕಿಕೊಂಡೆವು. ನಾವು ನೇಮಿಸಿದ ಸುದ್ದಿಗಾರರಿಂದಲೂ ಸುದ್ದಿಗಳು ಬರುತ್ತಿದ್ದುವು. ಪ್ರತಿಯೊಂದು ಹಳ್ಳಿಗೂ ಹೋಗಿ ಶೋಧ ನಡಸುವು ದೆಂದು ಗೊತ್ತಾಯಿತು. ಇಪ್ಪತ್ತು ಜನ ಪೋಲೀಸರನ್ನೊಳಗೊಂಡ ಐದು ಗುಂಪು ಮಾಡಲಾಯಿತು. ಆ ಗುಂಪುಗಳು ಬೇರೆ ಬೇರೆಯಾಗಿ ಬೇರೆ ಬೇರೆ ಯವರ ನೇತೃತ್ವದಲ್ಲಿ ಹೊರಡುತ್ತಿದ್ದುವು.

ನಮ್ಮ ಗುಂಪಿನ ನೇತೃತ್ವವನ್ನು ವಹಿಸಿಕೊಂಡಿದ್ದವರು ಸಚ್ಯಾಪುರ ಫೌಜದಾರರು. ಅವರನ್ನು ನಾವು ತಮಾಷೆಗಾಗಿ 'ಗಾಂಧೀ ಫೌಜದಾರ' ರೆಂದು ಕರೆಯುತ್ತಿದ್ದೆವು; ಜಮಾದಾರರಾಗಿದ್ದ ಸಚ್ಯಾಪುರರು, ಆಗಸ್ಟ್ ಚಳ ವಳಿಗಾರಂಭವಾದೊಡನೆ ದರೋಡೆ – ಸುಲಿಗೆಗಳು ಹೆಚ್ಚಾಗುತ್ತಲೂ ಬಡ್ತಿ ಪಡೆದು ಫೌಜದಾರರಾಗಿ ನಿಯಮಿಸಲ್ಪಟ್ಟುದುದೇ ಅದಕ್ಕೆ ಕಾರಣವಾಗಿತ್ತು. ಗಾಂಧೀಜಿಯವರ ಪುಣ್ಯದಿಂದಲೇ ಅವರು ಫೌಜದಾರರಾಗಿದ್ದುದು. ವಾಸ್ತವ ವಾಗಿ ಅವರು ತಮ್ಮ ಜೀವಮಾನದಲ್ಲಿಯೇ ಫೌಜದಾರಿಕೆ ಪಡೆಯುವ ಸಂಭವ ವಿರಲಿಲ್ಲ.

ಸಚ್ಯಾಪುರರು ಮುಹಮ್ಮದೀಯರು. ನಲವತ್ತೈದು ವರ್ಷ ವಯಸ್ಸು. ಎಂಟು ಜನ ಮಕ್ಕಳ ತಂದೆ. ಸಂಬಳದ ಹಣ ಅವರ ಸಂಸಾರಕ್ಕೇ ಸಾಲುತ್ತಿರ ಲಿಲ್ಲ. ಫೌಜದಾರಿಕೆ ದೊರೆತ ತರುವಾಯ ಫೌಜದಾರೀ ಸಮವಸ್ತ್ರ ಕೊಳ್ಳಲು ಕೂಡ ಹಣವಿರಲಿಲ್ಲ ಅವರ ಹತ್ತಿರ. ಜಮಾದಾರಿಯ ಸಮವಸ್ತ್ರವನ್ನೇ ಧರಿಸಿ, ತಲೆಗೆ ಮಾತ್ರ ಫೌಜದಾರೀ ಹ್ಯಾಟು ಹಾಕುತ್ತಿದ್ದರು. ಫೌಜದಾರರೆಂದರೆ ಸ್ವಲ್ಪ

ವಾದರೂ ಅಚ್ಚುಕಟ್ಟುತನ, ಶಿಸ್ತು, ಸ್ವಚ್ಛತೆಯಿರಬೇಕು. ಸಚ್ಚ್ಯಾಪುರರಿಗೆ ಮಾತ್ರ ಸ್ವಚ್ಛತೆಯ ಅರಿವೇ ಇರಲಿಲ್ಲ. ಅಲ್ಲದೆ, ಆಸಾಮಿ ಬಹಳ ಅಂಜುಬುರುಕ. ಹಳ್ಳಿಗಳನ್ನು ಶೋಧಿಸುತ್ತಿದ್ದ ನಮಗೆ ಆ ಕಾರ್ಯದಲ್ಲಿ ಪೋಲೀಸರ ನೆರವು ಬೇಕಾಗುತ್ತಿತ್ತು. ಆದರೆ, ನಮ್ಮ ಸಚ್ಚ್ಯಾಪುರ ಫೌಜದಾರರ ಕಾವಲಿಗೇ ಹತ್ತು ಜನ ಪೋಲೀಸರು ನಿಂತುಕೊಳ್ಳಬೇಕಾಗಿ ಬರುತ್ತಿತ್ತು. ಊರ ಹೊರಗಿನ ನಮ್ಮ ವಾಹನವನ್ನು ಕಾಯಲು ನಾಲ್ಕು ಜನ. ಇನ್ನುಳಿದ ಆರು ಜನರನ್ನು ಮಾತ್ರ ಜತೆಗೆ ಕರೆದುಕೊಂಡು ನಾನು ಹಳ್ಳಿಯಲ್ಲಿ ಪ್ರವೇಶಿಸಿ ಮನೆಮನೆಗೆ ಹೋಗಿ, ಯಾದಿಯಲ್ಲಿದ್ದ ಹೆಸರಿನ ಜನರನ್ನು ಬಂಧಿಸಬೇಕಾಗುತ್ತಿತ್ತು. ಒಂದೇ ಸಮಯಕ್ಕೆ ನಾಲ್ಕಾರು ಜನರನ್ನು ಬಂಧಿಸುವುದಿದ್ದಾಗ ಹೆಚ್ಚು ಜನ ಪೋಲೀಸರು ಬೇಕಾಗುತ್ತಿದ್ದರು. ಸರಕಾರದ ವಿರುದ್ಧವಾಗಿ ರೊಚ್ಚಿಗೆದ್ದಿದ್ದ ಭಾಗ ಅದು. ಅಲ್ಲಿನ ಜನರೇನೂ ಅಹಿಂಸಾವಾದಿಗಳಾಗಿರಲಿಲ್ಲ. ಅವರ ಹತ್ತಿರವೂ ಬಂದೂಕ, ಪಿಸ್ತೂಲು, ಗುಂಡುಗಳಿದ್ದುವು. ನಮ್ಮ ಮೈಮೇಲೆ ಏರಿಬರುವುದಕ್ಕೂ ಹಿಂಜರಿಯದ ಜನ ಅದು. ಸಚ್ಚ್ಯಾಪುರ ಫೌಜದಾರರು ಅಷ್ಟು ಹೆದರಿಕೊಳ್ಳುವುದಕ್ಕೂ ಅದೇ ಕಾರಣವಾಗಿತ್ತು.

ಬ್ಯಾಂಕ್ ಲೂಟಿಯಾದ ಊರಿನಲ್ಲಿ ಒಳ್ಳೆಯ ಭೋಜನಾಲಯಗಳಿರಲಿಲ್ಲ. ಪ್ರವಾಸಿಕರ ಧರ್ಮಶಾಲೆಯಲ್ಲಿಯೆ ನಾವು ಬಿಡಾರ ಹೂಡಿದ್ದುದು. ಒಂದು ಕೊಠಡಿಯಲ್ಲಿ ಇನ್‌ಸ್ಪೆಕ್ಟರರು ಮತ್ತು ಫೌಜದಾರರುಗಳು. ಹೊರಗಡೆ ಇದ್ದ ಕೈಸಾಲೆಯಲ್ಲಿ ನಾವು ಪೋಲೀಸರು. ಪೋಲೀಸರೆಲ್ಲರೂ ಅಲ್ಲಿಯೆ ಒಲೆ ಹೂಡಿ ಅಡುಗೆ ಮಾಡಿಕೊಳ್ಳುತ್ತಿದ್ದರು. ನಾವು ಐದು ಜನ ಪತ್ತೇದಾರರು ಮಾತ್ರ ಅಲ್ಲಿಯೇ ಇದ್ದ ಒಂದು "ಶ್ರೀಮದ್ವೀರಶೈವ ಶುದ್ಧ ಲಿಂಗಾಯತರ ಖಾನಾವಳಿ"ಗೆ ಮೊರೆಹೊಕ್ಕಿದ್ದೆವು.

ಆ ಖಾನಾವಳಿಯದೂ ಸ್ವಾರಸ್ಯಕರವಾದ ಕಥೆಯೇ. ಜಂಗಮರವನಾದ ವೀರಯ್ಯ ಅದರ ಒಡೆಯ. ಮನೆಯಲ್ಲಿ ಹೆಂಡತಿ, ಇಬ್ಬರು ಹೆಣ್ಣು ಮಕ್ಕಳು; ವೀರಯ್ಯನ ಪ್ರೇಯಸಿ ಪಾರಕ್ಕ. ಖಾನಾವಳಿ ವೀರಯ್ಯನದಾದರೂ ಅಲ್ಲಿ ಪಾರಕ್ಕನದೇ ಹಿರಿಯತನ. ಅವನ ಹೆಂಡತಿಯೂ ಮಕ್ಕಳೂ ಅವಳ ದಾಸಿಯರಂತೆ ದುಡಿಯುತ್ತಿದ್ದರು. ಪಾರಕ್ಕನಿಗೂ ವೀರಯ್ಯನಿಗೂ ಎಂದೋ ಒಮ್ಮೆ ಗೆಳೆತನವುಂಟಾಗಿತ್ತು. ಅವಳ ಗಂಡ ತೀರಿಕೊಳ್ಳುತ್ತಲೂ ಅವಳು ವೀರಯ್ಯನ

ಮನೆ ಸೇರಿ ಯಜಮಾನಿಯಾಗಿಬಿಟ್ಟಿದ್ದಳು. ಅವಳ ಅಕ್ಕ ಅಡಿವೆಕ್ಕ ಓರೆಕೋರೆ ನಗರದಲ್ಲಿ ಒಂದು ಖಾನಾವಳಿಯಿಟ್ಟು 'ಸಾಹುಕಾರ್ತಿ'ಯಾಗಿ ಮೆರೆಯುತ್ತಿದ್ದಳು. ಅವಳಂತೆಯೇ ತಾನೂ ಮೆರೆಯಬೇಕೆಂಬ ಅಭಿಲಾಷೆಯಿಂದ ಪಾರಕ್ಕ ವೀರಯ್ಯನಿಗೆ ಗಂಟುಬಿದ್ದು, ಹಣ ಕೊಟ್ಟು ಊಟಕ್ಕೆ ಬರುವ ಗಿರಾಕಿಗಳು ಸಿಕ್ಕುವ ಭರವಸೆಯಿರದಿದ್ದರೂ ಮನೆಯ ಮುಂದೆ 'ಖಾನಾವಳಿ' ಎಂಬ ಬೋರ್ಡು ಹಾಕಿಸಿದ್ದಳು. ಯುದ್ಧಕ್ಕಾರಂಭವಾಗಿ ಆಹಾರ ಧಾನ್ಯಗಳ ಕೊರತೆ ಹೆಚ್ಚುತ್ತಲೂ ಅವರ ಖಾನಾವಳಿಗೆ ಗಿರಾಕಿಗಳೂ ಬರತೊಡಗಿದ್ದರು. ಮೊದಲಿನಂತೆ ಗುರುತು ಪರಿಚಯದವರ ಮನೆಗಳಿಗೆ ಊಟಕ್ಕೆ ಹೋಗುವಂತಿರಲಿಲ್ಲ ಯಾರೂ. ಸರಿ. ಪಾರಕ್ಕನೂ 'ಸಾಹುಕಾರ್ತಿ'ಯಾಗತೊಡಗಿದ್ದಳು.

ಪಾರಕ್ಕ ನಮಗೆ ಕೊಡುವ ಊಟದ ಬೆಲೆ ಬಹಳವಾದರೆ ನಾಲ್ಕಾಣೆಗಳದಾಗಬಹುದು, ಅಷ್ಟೆ. ನಮ್ಮಿಂದ ಅವಳು ಕಿತ್ತುಕೊಳ್ಳುತ್ತಿದ್ದುದು ಮಾತ್ರ ಒಂದು ರೂಪಾಯಿ. ಕೈಯಿಂದ ಅಡುಗೆ ಮಾಡಿಕೊಳ್ಳಲು ನಮಗೆ ವೇಳೆಯಿರಲಿಲ್ಲವಾದುದರಿಂದ ಪಾರಕ್ಕನಿಗೇ ಶರಣು ಹೋಗದೆ ಬೇರೆ ಹಾದಿಯಿರಲಿಲ್ಲ. ನಾವು ಹಿಡಿದು ತರುತ್ತಿದ್ದ ಜನರಿಗೂ ಊಟವೊದಗಿಸಬೇಕಲ್ಲವೆ? ಈಗಾಗಲೆ ಎರಡುನೂರಕ್ಕಿಂತ ಹೆಚ್ಚು ಜನರನ್ನು ನಾವು ಬಂಧಿಸಿದ್ದೆವು. ಅವರಿಗೆಲ್ಲರಿಗೂ ಬೆಳಿಗ್ಗೆ ಮತ್ತು ಸಂಜೆ ಎರಡೂ ವೇಳೆ ಎರಡೆರಡು ರೊಟ್ಟಿ, ಹಿಟ್ಟಿನ ಪಲ್ಯ ಕೊಡಲಾಗುತ್ತಿತ್ತು. ಒಬ್ಬೊಬ್ಬರಿಗೆ ಆರು ಆಣೆಗಳಂತೆ ದಿನವೂ ೭೫ ರೂಪಾಯಿ ಖರ್ಚು ಬರುತ್ತಿತ್ತು ಅವರಿಗಾಗಿ. ವಾರಕ್ಕೊಂದು ಬಾರಿ ಪಾರಕ್ಕನಿಗೆ ಆ ಹಣ ಮುಟ್ಟಿಸುತ್ತಿದ್ದೆವು.

ಅಷ್ಟು ಜನರಿಗೆ ರೊಟ್ಟಿಗಳನ್ನೊದಗಿಸಲು ಅವಶ್ಯವಿದ್ದ ಜೋಳವನ್ನೆಲ್ಲಿಂದ ತರಬೇಕು ಪಾರಕ್ಕ? ಹಣ ಕೊಟ್ಟರೂ ಜೋಳ ಸಿಕ್ಕುವುದು ದುಸ್ತರವಾಗಿದ್ದ ಕಾಲವದು. ಸರಿ. ಹಳ್ಳಿಗಳನ್ನು ಸುತ್ತುವಾಗ ಜನರನ್ನು ಹಿಡಿಯುವುದರ ಜೊತೆಗೆ ಜೋಳವನ್ನೂ ಕೊಂಡು ತರುವ ಕೆಲಸ ನಮ್ಮದಾಯಿತು. ಒಂದೊಂದು ಸಲ ನಾವು ಎಂಟು ಹತ್ತು ಚೀಲಗಳಷ್ಟು ಜೋಳ ತಂದು ಪಾರಕ್ಕನಿಗೊಪ್ಪಿಸುತ್ತಿದ್ದುದೂ ಇತ್ತು. ಅವಳು ಮಹಾ ಘಾಟಿ ಹೆಣ್ಣು. ನಮಗೆ ಗೊತ್ತಾಗದಂತೆ ಜೋಳವನ್ನು ಕಳ್ಳಸಂತೆಯಲ್ಲಿ ವಿಕ್ರಯಿಸಿ ಲಾಭ ಹೊಡೆಯುತ್ತಿದ್ದಳು. ನಾವು

ಅಲ್ಲಿ ಬಿಡಾರ ಹೂಡಿದಂದಿನಿಂದ ಅವಳಿಗೆ ಶುಕ್ರದೆಸೆ ಬಂದುಬಿಟ್ಟಿತ್ತು. ಗೋಣೀ ತಟ್ಟಿನ ಮೇಲೆ ಕೂಡುವ ಪಾರಕ್ಕ ಈಗ ಜಮುಖಾನದ ಮೇಲೆ ದಿಂಬಿಗೊರಗಿ ಠೀವಿಯಿಂದ ಕೂಡುವ 'ಪಾರಮ್ಮನವರು' ಆಗಿದ್ದಳು.

ವಯಸ್ಸಿನಿಂದ ವೀರಯ್ಯನಿಗಿಂತ ದೊಡ್ಡವಳು ಪಾರಕ್ಕ. ಅವನಿಗೆ ಐವತ್ತು ವರ್ಷವಾಗಿದ್ದರೆ ಇವಳಿಗೆ ಐವತ್ತೈದು. ಸ್ಥೂಲದೇಹ. ಸೌದೆಯಂಗಡಿ ಯಲ್ಲಿನ ಮಣದ ಕಲ್ಲುಗಳನ್ನು ನೆನಪಿಗೆ ತಂದುಕೊಡುವಂಥ ಎದೆ. ಅವಳು ನಡೆದಾಡುವಾಗ ಸರ್ಕಸಿನ ಆನೆ ನಡೆದಂತಾಗುತ್ತಿತ್ತು. ನಾವು ಊಟಕ್ಕೆ ಕುಳಿತಾಗಲೆಲ್ಲ ಬೇಕೆಂತಲೇ ಅವಳನ್ನು ಹೊಗಳಿ ಹಾಸ್ಯಮಾಡುತ್ತಿದ್ದೆವು.

"ಹರೆಯದವಳಿದ್ದಾಗ ಪಾರಕ್ಕ ಸುಂದರಿಯಿದ್ದಿರಬೇಕು," ಎಂದು ನಾನು ಆರಂಭಿಸುತ್ತಿದ್ದೆ.

"ಊರಲ್ಲಿಯ ಹುಡುಗರದೆಲ್ಲಾ ದೃಷ್ಟಿ ತಾಕಿರಬೇಕು ಇವಳಿಗೆ!" ಎಂದು ಇನ್ನೊಬ್ಬ ಹೇಳುತ್ತಿದ್ದ.

"ಎಷ್ಟು ಜನರು ಇವಳ ಬೆನ್ನು ಹತ್ತಿದ್ದರೋ ಏನೊ!" ಎಂದು ಮತ್ತೊಬ್ಬ.

"ವೀರಯ್ಯನ ಭಾಗ್ಯ!" ಎಂದು ಮಗದೊಬ್ಬ.

ನಾವು ಹಾಗೆ ಮಾತಾಡುವುದರಲ್ಲಿದ್ದ ಅಣಕವನ್ನು ಅರ್ಥಮಾಡಿಕೊಳ್ಳುವಂಥ ತೀಕ್ಷ್ಣಬುದ್ಧಿ ಪಾರಕ್ಕನಿಗಿರಲಿಲ್ಲ. ನಾವು ನಿಜಕ್ಕೂ ಅವಳ ಸೌಂದರ್ಯವನ್ನು ಪ್ರಶಂಸಿಸುತ್ತಿರುವೆವೆಂದೇ ನಂಬಿ ಅವಳು ಮನಸ್ಸಿನಲ್ಲಿಯೇ ಹಿಗ್ಗಿ, ಕುಲುಕುಲು ನಗುತ್ತಾ ನಮಗೆ ಮತ್ತೆರಡು ಚಮಚಗಳಷ್ಟು ತುಪ್ಪ ಹೆಚ್ಚಿಗೆ ಬಡಿಸುತ್ತಿದ್ದಳು. ಅಂಥ ಇಳಿವಯಸ್ಸಿನಲ್ಲಿಯೂ, ತನ್ನ ಸ್ಥೂಲದೇಹದ ಬೊಜ್ಜನ್ನು ಮರೆತು, ಹದಿನಾರರ ಹುಡುಗಿಯಂತೆ ವೈಯಾರ ಮಾಡುತ್ತಿದ್ದ ಪಾರಕ್ಕನನ್ನು ಕಂಡು ನಾವು ತುಟಿಗಳಲ್ಲೇ ನಗುತ್ತಿದ್ದೆವು.

ಒಂದೊಂದು ಬಾರಿ ಅವಳಿಗೂ ತನ್ನ ಸ್ಥೂಲದೇಹದ ಬಗೆಗೆ ಅಸಹ್ಯವೆನಿಸುತ್ತಿತ್ತು. ಅವಳು ನೊಂದ ಧನಿಯಲ್ಲಿ ಹೇಳುತ್ತಿದ್ದಳು :

"ಆಗ ನೀವು ನನ್ನ ನೋಡಿದ್ದರೆ ನನ್ನ ಬೆನ್ನು ಹತ್ತುವದಿರಲಿ, ನನ್ನ ಚಾಕರಿಯ ಆಳಿನಂತೆ ನನ್ನ ಮನೆ ಕಾಯುತ್ತಿದ್ದಿರಿ. ಗೌರಿ ಇದ್ದ ಹಾಗಿದ್ದೆ.

ಕೇಳಿರಿ ಬೇಕಾದರೆ ಸ್ವಾಮಿಗೆ!" ವೀರಯ್ಯನನ್ನು ಅವಳು ಸಂಬೋಧಿಸುತ್ತಿದ್ದುದು 'ಸ್ವಾಮಿ'ಯೆಂದು.

"ನೀನು ಗೌರಿಯಾದರೆ ಅವನು ಶಂಕರನ ಹಾಗೆ ಕಾಣುತ್ತಿದ್ದನೇನು!" ಎಂದು ನಾನು ತಮಾಷೆ ಮಾಡುತ್ತಿದ್ದೆ.

"ಗೌರಿಯ ಹಾಗಲ್ಲಪ್ಪ. ಗಂಗೆಯ ಹಾಗೆ!" ಎನ್ನುತ್ತಿದ್ದ ನಿಂಗಪ್ಪ.

"ಇಶ್ಶ್ಯಾ! ಬಿಡಿರಿ! ನಿಮಗೆ ಯಾವಾಗಲೂ ಚೇಷ್ಟೆಯೇ!" ಎನ್ನುತ್ತಾ ನಿಂಗಪ್ಪನನ್ನು ಕಡೆಗಣ್ಣಿನಿಂದ ದಿಟ್ಟಿಸುತ್ತಿದ್ದಳು ಪಾರಕ್ಕ. "ನೀನು ಬಯಸಿದರೆ ಈಗಲೂ ನಾನು ತಯಾರು!" ಎಂದು ಸೂಚಿಸುವಂಥ ದೃಷ್ಟಿಯದು. ನಾವು ನಕ್ಕು ಸುಮ್ಮನಾಗುತ್ತಿದ್ದೆವು.

ಅವಳು ನಮಗೆ ಬಡಿಸುತ್ತಿದ್ದ ಅಡುಗೆಯೂ ಸಾಧಾರಣ ತರಗತಿಯದೇ. ಹಾಗೆಂದು ನಾವು ಸ್ಪಷ್ಟವಾಗಿ ಹೇಳುವಂತೆಯೂ ಇರಲಿಲ್ಲ. ಎಂಥ ಅಡುಗೆಯಾದರೇನು, ಅಂತೂ ಹೊಟ್ಟೆ ತುಂಬುತ್ತಿದ್ದಿತಲ್ಲವೆ! ನಾವು ಅವಳ ಅಡುಗೆಯನ್ನು ಟೀಕಿಸಿದರೆ ಅವಳು ರೇಗಿ ನಮಗೆ ಊಟ ಹಾಕುವುದನ್ನೇ ನಿಲ್ಲಿಸಿಬಿಡಬಹುದಾಗಿತ್ತು. ನಾವು ಒತ್ತಾಯ ಮಾಡುವಂತಿರಲಿಲ್ಲ. ಅಂತೆಯೆ, ಆವಳನ್ನು ಅನಾವಶ್ಯಕವಾಗಿ ಹೊಗಳುತ್ತಾ 'ವಾಹವ್ವಾ' ಎನ್ನುತ್ತಾ ಊಟ ದೊರಕಿಸಬೇಕಾಗಿಬಂದಿತ್ತು.

ಇನ್ನೂರು ಮಂದಿಯನ್ನು ನಾವು ಬಂಧಿಸಿದ್ದುದು ಕೇವಲ ಸಂಶಯದಿಂದ. ಅವರನ್ನು ತಕ್ಷಣ ಸೆರೆಮನೆಗೆ ಸಾಗಿಸಿದ್ದಲ್ಲಿ ಅವರ ಊಟದ ಖರ್ಚು ತಪ್ಪಬಹುದಾಗಿತ್ತು. ವಿಚಾರಣೆ ಮುಗಿಯದ ವಿನಾ ನಾವು ಅವರನ್ನು ಸೆರೆಮನೆಗೆ ಕಳಿಸುವಂತಿರಲಿಲ್ಲ. ದರೋಡೆಯ ಶೋಧವಾಗಬೇಕಲ್ಲವೆ? ಈ ಸಂಶಯಿತ ಜನರನ್ನು ಕಾಡಿಸಿ ಪೀಡಿಸಿ ದರೋಡೆಗಾರರ ವಿಷಯ ತಿಳಿದುಕೊಳ್ಳಬೇಕಾಗಿತ್ತು. ಅವರ ಊಟದ ವೆಚ್ಚಕ್ಕೆಂದು ಹದಿನೈದು ದಿನಗಳೊಳಗಾಗಿ ಸಾವಿರಾರು ರೂಪಾಯಿ ಕೈಬಿಟ್ಟು ಹೋಗಿದ್ದುವು. ಶೋಧನಾಕಾರ್ಯದಲ್ಲಿ ಉಪಯೋಗಿಸಲು ಸರಕಾರ ನಮಗೆ ಕೊಡುತ್ತಿದ್ದ ಹಣ ಅತ್ಯಲ್ಪವಾದುದು. ಬಂಧಿತರಾಗಿದ್ದವರಲ್ಲಿ ಅನೇಕರು ನಮಗೆ ಹಣ ಕೊಟ್ಟು ಬಿಡುಗಡೆ ಹೊಂದಲು ಸಿದ್ಧರಿದ್ದರಾದರೂ ನಾವು ಅವರನ್ನು ಬಿಟ್ಟುಬಿಡುವ ಹಾಗೂ ಇರಲಿಲ್ಲ. ಅವರಲ್ಲಿ ಕೆಲವರು

ನಿಜವಾದ ಅಪರಾಧಿಗಳಾಗಿರುವ ಸಂಭವವೂ ಇತ್ತು. ಆಗ ಅವರನ್ನು ನಾವು ಬಿಟ್ಟುಬಿಟ್ಟಿದ್ದರೆ ಮುಂದೆ ಅವರು ನಮ್ಮ ಕೈಗೆ ಸಿಗುವ ಸಂಭವವಿರಲಿಲ್ಲ.

ನಮ್ಮ ಹತ್ತಿರ ಹಣವಂತೂ ಇರಲಿಲ್ಲ. ಬಂಧಿತರ ಖರ್ಚಿಗಾಗಿ ಜರೂರಾಗಿ ಹಣ ಬೇಕಾಗಿತ್ತು. ಯಾವುದೊಂದು ಉಪಾಯ ಯೋಚಿಸಿ ಹೇಗಾದರೂ ಹಣ ಒದಗಿಸಿಕೊಳ್ಳಬೇಕಲ್ಲವೆ? ಸರಿ. ದರೋಡೆಯಾದ ಬ್ಯಾಂಕಿನಿಂದ ಇಪ್ಪತ್ತು ಸಾವಿರ ರೂಪಾಯಿ ಸಾಲ ಕೇಳಿದ್ದ ವರ್ತಕನನ್ನೂ ಆ ಊರಿನ ಎಂಟು ಮಂದಿ ಪ್ರಮುಖರನ್ನೂ ಬಂಧಿಸಲಾಯಿತು. ಅವರೆಲ್ಲರೂ ಧನಿಕರು. ಕಟ್ಟಿಗೆಯ ವ್ಯಾಪಾರದಲ್ಲಿ ಲಕ್ಷಾಂತರ ಹಣ ಸಂಪಾದಿಸಿದವರು.

"ದರೋಡೆ ನಡೆಯಲು ನೀವೇ ಕಾರಣರಾಗಿರಬೇಕು. ಬ್ಯಾಂಕಿನಲ್ಲಿ ಇಪ್ಪತ್ತು ಸಾವಿರ ರೂಪಾಯಿ ಇರುವ ಸುದ್ದಿಯನ್ನು ನೀವೇ ತಿಳಿಸಿರಬೇಕು ಆ ಜನರಿಗೆ. ಅವರೂ ನೀವೂ ಕೂಡಿಕೊಂಡೇ ಈ ಕೆಲಸ ಮಾಡಿರಬೇಕು. ಈಗ ನಾವು ಈ ಬಂಧಿತರ ಊಟಕ್ಕೆ ವಾರಕ್ಕೆ ಐದುನೂರು ರೂಪಾಯಿ ಖರ್ಚು ಮಾಡುವ ಪ್ರಸಂಗ ಬಂದಿದೆ. ನಿಮ್ಮನ್ನೂ ಜೇಲಿಗೆ ಕಳಿಸುತ್ತೇವೆ, ಭಾರತ ಸಂರಕ್ಷಣ ಕಾಯದೆಯ ಮೇರೆಗೆ," ಎಂದು ಹೇಳಿ ಅವರನ್ನು ಬೆದರಿಸಲಾಯಿತು.

ಅದು ಯುದ್ಧಕಾಲ. ಕಟ್ಟಿಗೆಯ ವ್ಯವಹಾರ ಬಲು ಬಿರುಸಾಗಿ ನಡೆದಿತ್ತು. ಪ್ರತಿನಿತ್ಯವೂ ಒಬ್ಬೊಬ್ಬ ವ್ಯಾಪಾರಿಯೂ ಸಾವಿರಾರು ರೂಪಾಯಿ ಲಾಭ ಗಿಟ್ಟಿಸುತ್ತಿದ್ದ. ಸರಕಾರಕ್ಕೂ ಅವರು ಕಟ್ಟಿಗೆಯನ್ನೊದಗಿಸುತ್ತಿದ್ದರು. ಅಂಥವರು ಸೆರೆಮನೆಗೆ ಹೋಗಿ ಬೀಳಲು ಸಿದ್ಧರಾಗುವುದುಂಟೇ? ನಮ್ಮ ಬತ್ತಳಿಕೆಯಲ್ಲಿನ ಬ್ರಹ್ಮಾಸ್ತ್ರದಂತಿದ್ದ ಸಂರಕ್ಷಣ ಕಾಯದೆಗೆ ಹೆದರಿಕೊಂಡು, ಬೆಳಗಾಗುವುದರೊಳಗಾಗಿ ಎಂಟು ಸಾವಿರ ರೂಪಾಯಿ ತಂದುಕೊಟ್ಟು ಸಾಷ್ಟಾಂಗ ಹಾಕಿ ಹೊರಟುಹೋದರು.

ಹಾಗೆ, ನಾವು ಖರ್ಚಿನ ತಗಾದೆಯನ್ನು ತಪ್ಪಿಸಿದೆವು.

ಎಲ್ಲ ಹಣವನ್ನು ಸಿಂಗಪ್ಪನ ಹತ್ತಿರ ಕೊಡಲಾಯಿತು. ಎಲ್ಲ ಖರ್ಚುಗಳನ್ನೂ ಅವನೇ ನೋಡಿಕೊಂಡು ಸರಿಯಾಗಿ ಲೆಕ್ಕವಿಡುತ್ತಿದ್ದ. ತಮಾಷೆಗಾಗಿ 'ಕ್ಯಾಂಪಿನ ಕ್ಯಾಶಿಯರ್' ಎಂದು ಅವನನ್ನು ಸಂಬೋಧಿಸುತ್ತಿದ್ದರು ಇನ್‌ಸ್ಪೆಕ್ಟರರು. ಮುಂದೆ ಅವನಿಗೆ ಆ ಹೆಸರೇ ರೂಢಿಯಾಯಿತು.

ಒಂದು ತಿಂಗಳು ಕಳೆಯುವಷ್ಟರಲ್ಲಿ ನಾವು ಪುಂಡಜನರನ್ನೆಲ್ಲ ಬಂಧಿಸಿದ್ದೆವಾದರೂ ಬ್ಯಾಂಕಿನ ದರೋಡೆಗೂ ಅವರಿಗೂ ಸಂಬಂಧವಿರಲಿಲ್ಲವಾದುದರಿಂದ ನಮ್ಮ ಕೆಲಸ ಹಾಗೇ ಸಾಗಿತ್ತು. ಬಂಧಿತರಾಗಿದ್ದ ಈ ಜನರಲ್ಲಿ ಕೆಲವರು ಅದೇ ಭಾಗದಲ್ಲಿ ಚಿಕ್ಕ ಪುಟ್ಟ ದರೋಡೆ ಮಾಡಿದ್ದರು, ಕೆಲವರು ಗೌಡ ಕುಲಕರಣಿಯರ ಕಾಗದಪತ್ರಗಳನ್ನು ಧ್ವಂಸಗೊಳಿಸಿದ್ದರು. ಅವರನ್ನು ಬಂಧಿಸುತ್ತಲೂ ಅವರು ದರೋಡೆಮಾಡಿದ ವಸ್ತು ಒಡವೆಗಳೂ ಬೆಳಕಿಗೆ ಬರತೊಡಗಿದ್ದುವು. ಅವುಗಳನ್ನೆಲ್ಲ ಜಪ್ತುಮಾಡಿ ಆಪಾದಿತರನ್ನು ಸೆರೆಮನೆಗೆ ಸಾಗಿಸಲಾಗುತ್ತಿತ್ತು. ಅವರ ಮತ್ತು ಸಾಕ್ಷಿದಾರರ ಹೇಳಿಕೆಗಳನ್ನು ಬರೆದುಕೊಳ್ಳುವ ಕೆಲಸ ನನ್ನ ಪಾಲಿಗೆ ಬಂದಿತ್ತು.

ಫೌಜದಾರರಿಗೂ ವಿಪರೀತ ಕೆಲಸ. ಬೆಳಗಿನ ಮೂರು ಗಂಟೆಯಿಂದ ರಾತ್ರಿ ಹತ್ತು ಹನ್ನೊಂದು ಗಂಟೆಯವರೆಗೂ ಅವರು ವಿರಾಮವಿಲ್ಲದೆ ಕೆಲಸ ಮಾಡಬೇಕಾಗುತ್ತಿತ್ತು. ಒಂದು ಸಲವೂ ಅವರು ಯಾರನ್ನೂ ಸಹಾಯಕ್ಕೆ ಕರೆದಿರಲಿಲ್ಲ. ಅವರು ಹಾಗೆ ದುಡಿಯುವುದನ್ನು ನೋಡಲಾರದೆ ನಾನೇ ಅವರ ಕೆಲಸಗಳಲ್ಲಿ ನೆರವಾಗತೊಡಗಿದೆ. ಅವರ ದಿನಚರಿಯನ್ನು ಟೈಪ್ ಮಾಡುವ ಕೆಲಸವನ್ನೂ ನಾನೇ ವಹಿಸಿಕೊಂಡೆ. ಅದರಿಂದಾಗಿ ಅವರಿಗೆ ತುಸು ವಿಶ್ರಾಂತಿ ಲಭಿಸತೊಡಗಿತು. ಸಹಜವಾಗಿಯೇ ನನ್ನ ಬಗೆಗೆ ಅವರಲ್ಲಿ ಕುತೂಹಲ ಉತ್ಪನ್ನವಾಯಿತು. ಬಿಡುವಾದಾಗ ನನ್ನ ಸ್ಥಿತಿಗತಿಗಳನ್ನು ವಿಚಾರಿಸುವರು. ಆದರೆ, ಒಂದೊಂದು ದಿನ ಮಾತನಾಡಲು ಕೂಡಾ ಬಿಡುವು ದೊರೆಯುತ್ತಿರಲಿಲ್ಲ ಅವರಿಗೆ. ಹದಿನೈದು ದಿನಗಳಲ್ಲಿ ಒಂದು ಸಲವೂ ಸ್ನಾನ ಮಾಡಲು ಸಾಧ್ಯವಾಗಿರಲಿಲ್ಲ. ಚಹ ಕುಡಿಯುವಾಗಲೂ ಕೆಲಸ, ಊಟ ಮಾಡುವಾಗಲೂ ಕೆಲಸ. ಕೊಂಚವೂ ಗೊಣಗದೆ ಅದನ್ನೆಲ್ಲ ನಿರ್ವಹಿಸಿಕೊಂಡು ಹೋಗುತ್ತಿದ್ದ ಅವರ ನಿಗ್ರಹ ಶಕ್ತಿಯನ್ನು ನಿರೀಕ್ಷಿಸಿ ನಾನು ಬೆರಗುಗೊಂಡುದು ಎಷ್ಟೋ ಬಾರಿ.

ನಾನೂ ಸಹ ದಿನಕ್ಕೆ ಹದಿನೆಂಟು ಇಪ್ಪತ್ತು ಗಂಟೆಗಳ ಕಾಲ ಕೆಲಸ ಮಾಡಬೇಕಾಗಿತ್ತು. ಅಪರಾಧಗಳ ದಿನಚರಿಯನ್ನು ಟೈಪ್‌ಮಾಡುತ್ತ ಒಂದೊಂದು ಸಲ ಏಳೆಂಟು ತಾಸುಗಳವರೆಗೆ ಹಾಗೇ ಕುಳಿತಿರುತ್ತಿದ್ದೆ. ಅದನ್ನು

ಕಂಡು ನಮ್ಮ ಇನ್‌ಸ್ಪೆಕ್ಟರರಿಗೆ ವಿಸ್ಮಯವಾಗುತ್ತಿರಲು ಸಾಕು. ಫೌಜದಾರ ರೊಡನೆ ಮಾತನಾಡುತ್ತ ಅವರು ಹೇಳುತ್ತಿದ್ದರು:

"ದೈತ್ಯನ ಹಾಗೆ ದುಡೀತಾನೆ ನೋಡಿರಿ ಶಿವಣ್ಣ!"

ಆದರೆ ದುಡಿತಕ್ಕೂ ಒಂದು ಮಿತಿಯಿದೆ. ಸರಕಾರದಿಂದ ನಮಗೆ ಸಿಗುತ್ತಿದ್ದ ಮೂವತ್ತು ರೂಪಾಯಿಗಳಲ್ಲಿ ಹೊಟ್ಟೆ ಬಟ್ಟೆ ಕೂಡಾ ಸಾಗುವಂತಿರ ಲಿಲ್ಲ. ಅಂಥದರಲ್ಲೂ ನಾವು ದುಡಿಯಬೇಕು. ನಾಲ್ಕು ತಾಸುಗಳ ನಿದ್ರೆಯಿಂದ ತೃಪ್ತಿಪಟ್ಟುಕೊಳ್ಳಬೇಕು. ಆ ನಿದ್ರೆಯೂ ಅರೆನಿದ್ರೆ. ನೂರಾರು ಜನರ ನಡುವೆ, ಆ ಹಾಳು ಧರ್ಮಶಾಲೆಯಲ್ಲಿ, ತಿಗಣೆ, ಹೇನು, ಕೂರಿಗಳಿಂದ ಕಡಿಸಿ ಕೊಳ್ಳುತ್ತಾ ಅತ್ತಿತ್ತ ಹೊರಳಾಡುತ್ತಾ ಬಿದ್ದುಕೊಂಡಿರುವುದು. ಬೆಳಗಾಗು ತ್ತಲೂ ಪುನಃ ಬರವಣಿಗೆಯ ಕೆಲಸ, ಟೈಪಿಂಗ್.

ಇನ್ನುಳಿದ ನಾಲ್ವರು ಪತ್ತೇದಾರರು ಮಾತ್ರ ಸುಖವಾಗಿ ದಿನಗಳೆಯುತ್ತಿ ದ್ದರು. ನನ್ನ ಹಾಗೆ ಬರವಣಿಗೆಯ ಜವಾಬ್ದಾರಿಯೇನೂ ಅವರಿಗಿರಲಿಲ್ಲ. ಆಗಾಗ ಹಳ್ಳಿಗಳಿಗೆ ಹೋಗಿ ಅಪರಾಧಿಗಳನ್ನೋ ನಿರಪರಾಧಿಗಳನ್ನೋ ಹಿಡಿದು ಕೊಂಡು ಬರುವುದು, ಅವರಿಂದ ಹಣ ಸಿಕ್ಕಿದರೆ ಬಿಟ್ಟುಬಿಡುವುದು, ಉಳಿ ದವರನ್ನು ಜೈಲಿಗೆ ಸಾಗಿಸುವುದು – ಇದೇ ಅವರ ಕಾಯಕವಾಗಿತ್ತು. ಆ ನಾಲ್ವರೂ ಆ ವೇಳೆಗಾಗಲೇ ಸಾಕಷ್ಟು ಹಣವನ್ನು ಸಂಗ್ರಹಿಸಿದ್ದರು. ನನ್ನ ಹತ್ತಿರ ಮಾತ್ರ ಚಹ ಕುಡಿಯುವುದಕ್ಕೂ ಕಾಸಿರಲಿಲ್ಲ. ತೊಂಡೇಬಾವಿಯಿಂದ ಬರುವಾಗ ಮೈಮೇಲಿದ್ದ ಕೋಟು ಕೊಳೆಯಾಗಿ ಗಾಣಿಗನ ಬಟ್ಟೆಯಂತಾಗಿತ್ತು. ಕ್ಯಾಶಿಯರ್ ಸಂಗಪ್ಪನನ್ನು ಹಣಕ್ಕಾಗಿ ಕೇಳಬಹುದಾಗಿದ್ದಿತಾದರೂ ಇನ್‌ ಸ್ಪೆಕ್ಟರರು ಏನು ತಿಳಿದುಕೊಳ್ಳುವರೋ ಎಂಬ ಭಯದಿಂದ ಸುಮ್ಮನಿದ್ದೆ. ಖರ್ಚಿಗಾಗಿ ಅವನಿಂದಲೇ ನಲವತ್ತು ರೂಪಾಯಿ ಕೈಗಡ ತೆಗೆದುಕೊಂಡಿದ್ದೆನಷ್ಟೆ.

ಆ ತಿಂಗಳಿನ ಸಂಬಳ ಬರುತ್ತಲೂ ಒಂದೆರಡು ದಿನಗಳ ಮಟ್ಟಿಗೆ ತೊಂಡೇ ಬಾವಿಗೆ ಹೋಗಿ ಬರುವುದಾಗಿ ಇನ್‌ಸ್ಪೆಕ್ಟರರಿಗೆ ತಿಳಿಸಿ, ಅವರ ಅಪ್ಪಣೆ ಪಡೆದು ಕೊಂಡು ಫೌಜದಾರರ ಹತ್ತಿರ ಬಂದು ಐವತ್ತು ರೂಪಾಯಿ ಕೈಗಡ ಕೊಡು ವಂತೆ ಬಿನ್ನವಿಸಿಕೊಂಡೆ.

"ಅದೇನು, ಸಾಲ ಯಾಕೆ ಕೇಳುತ್ತೀರಿ?" ಎಂದರು ಫೌಜದಾರರು, ಆಶ್ಚರ್ಯದ ದನಿಯಲ್ಲಿ.

"ಇನ್ನೇನು ಮಾಡಲಿ? ನನ್ನ ಹತ್ತಿರವಂತೂ ಏನೂ ಇಲ್ಲ."

"ಸಂಗಪ್ಪನ ಹತ್ತಿರ ಹರಾಮದ ಹಣಕ್ಕೇನು ಕೊರತೆ? ಅಪರಾಧಿಗಳನ್ನು ಬಡಿದು ಸ್ಥಾವಿರಾರು ರೂಪಾಯಿ ಎಬ್ಬಿಸಿದ್ದಾರಲ್ಲಾ, ನಿಮಗೇನೂ ಕೊಟ್ಟಿಲ್ಲವೇನು?"

"ನಾನೇನು ಕೇಳಲಿಲ್ಲ."

"ಆಯ್ತು. ಹೀಗೆ ಸುಮ್ಮನಿದ್ದರೆ ಅವರಾಗೇ ಕೊಡುವರೆಂದು ತಿಳಿದೀರೇನು ನೀವು? ಅವರಿಗೇನು, ಅಷ್ಟೇ ಉಳಿಯಿತು. ಮತ್ತೊಂದು ತೊಲೆ ಬಂಗಾರವಾಯಿತು."

ಫೌಜದಾರರು ಸಂಗಪ್ಪನನ್ನು ಕರೆದು ಚೆನ್ನಾಗಿ ಬಯ್ದು, ನನಗೂ ನೂರು ರೂಪಾಯಿ ಕೊಡಿಸಿದರು. ನಾನು ತೊಂಡೇಬಾವಿಗೆ ಹೋಗಿ ತಾಯಿಗೆ ಸ್ವಲ್ಪ ಹಣ ಕೊಟ್ಟು, ದೇಸಾಯಿ ಮಾಸ್ತರರಿಂದ ತೆಗೆದುಕೊಂಡ ಸಾಲವನ್ನು ಮುಟ್ಟಿಸಿ ಮತ್ತೆ ನಮ್ಮ ಶಿಬಿರಕ್ಕೆ ಹಿಂದಿರುಗಿದೆ.

## ೨೨

# ಬೆಂಗಳೂರು : ಮೀರಾ

ತೊಂಡೇಬಾವಿಯ ಹತ್ತಿರ ಟಪಾಲು ಮೋಟಾರು ಲೂಟಿಯಾಗಿದ್ದ ಸಂಗತಿಯನ್ನು ಈಗಾಗಲೆ ಹೇಳಿಯಾಗಿದೆ. ಇಷ್ಟರಲ್ಲಿಯೇ ಅದರ ಮೊಕದ್ದಮೆ ಗಾರಂಭವಾಗುವುದಿತ್ತು. ಆ ಲೂಟಿಯಲ್ಲಿ ಭಾಗವಹಿಸಿದ ಕಾರ್ಯಕರ್ತನೊಬ್ಬ ಬೆಂಗಳೂರಿಗೆ ಓಡಿಹೋಗಿ ಅಲ್ಲಿಯ ಸರಕಾರೀ ಆಸ್ಪತ್ರೆಯೊಂದರಲ್ಲಿ ಕೆಲವು ದಿನ ಚಿಕಿತ್ಸೆ ಪಡೆದಿದ್ದ. ಅವನನ್ನು ಅಲ್ಲಿಯೇ ಬಂಧಿಸಿ ತರಲಾಗಿತ್ತು. ಆ ಆಸ್ಪತ್ರೆಯ ಡಾಕ್ಟರರನ್ನು ಸಾಕ್ಷಿಗಾಗಿ ಕರೆಯಿಸಬೇಕೆಂದು ಆ ಆಪಾದಿತನ ವಕೀಲರು ನ್ಯಾಯಾಧೀಶರನ್ನು ಬಿನ್ನವಿಸಿಕೊಂಡಿದ್ದರು. ಒಬ್ಬ ಪೋಲೀಸನನ್ನು ಬೆಂಗಳೂರಿಗೆ ಕಳಿಸಿ, ಡಾಕ್ಟರರಿಗೆ 'ಸಮನ್ಸ್' ಜಾರಿಮಾಡಿ ಅವರನ್ನು ಕರೆದುಕೊಂಡು ಬರುವಂತೆ ನ್ಯಾಯಾಧೀಶರ ಆಜ್ಞೆಯಾಗಿತ್ತು. ತೊಂಡೇಬಾವಿಯ ಫೌಜದಾರರಾದ ಹಳಗೇರಿಯವರು ಆ ಕೆಲಸವನ್ನು ನನಗೇ ಒಪ್ಪಿಸಿ, ನನ್ನನ್ನು ನಾಲ್ಕು ದಿನಗಳ ಮಟ್ಟಿಗೆ ಬಿಟ್ಟುಕೊಡುವಂತೆ ಇನ್‌ಸ್ಪೆಕ್ಟರರನ್ನು ಬೇಡಿಕೊಂಡಿದ್ದರು. ಬೆಂಗಳೂರಿಗೆ ಹೋಗುವ ಮನಸ್ಸಿಲ್ಲದಿದ್ದರೂ ನಾನು ಹೊರಡಲೇಬೇಕಾಯಿತು.

ನಾನು ಹೊರಟುನಿಂತಾಗ ನಿಂಗಪ್ಪ ನೂರು ರೂಪಾಯಿಗಳನ್ನು ನನ್ನ ಕೈಗೆ ಹಾಕಿದ. ನಾನು ನೇರವಾಗಿ ಓರೆಕೋರೆ ನಗರಕ್ಕೆ ಬಂದು ರಾತ್ರಿಯ ರೈಲು ಹತ್ತಿ ಮಾರನೆಯ ದಿನ ಸಾಯಂಕಾಲದ ವೇಳೆಗೆ ಬೆಂಗಳೂರಿಗೆ ಬಂದು ಮುಟ್ಟಿದೆ. ಆಸ್ಪತ್ರೆಗೆ ಹೋಗಿ ಡಾಕ್ಟರರನ್ನು ಕಂಡು 'ಸಮನ್ಸ್' ಜಾರಿ ಮಾಡಿದುದಾಯಿತು. ಒಂದು ದಿನ ಬಿಟ್ಟು ಮರುದಿನ ಬರುವುದಾಗಿ ಅವರು ಹೇಳಿದರು. ಮೊಕದ್ದಮೆಯಿನ್ನೂ ಮೂರು ದಿನಗಳ ತರುವಾಯ ಇದ್ದುದರಿಂದ

ನನಗೇನೂ ಅವಸರವಿರಲಿಲ್ಲ. ನಾನು ಬೆಂಗಳೂರನ್ನು ನೋಡುತ್ತಿದ್ದುದು ಅದೇ ಮೊದಲನೆಯ ಬಾರಿ. ಸರಕಾರದ ಖರ್ಚಿನಲ್ಲಿ ಬೆಂಗಳೂರನ್ನು ನೋಡಲು ಸಿಕ್ಕಿತಲ್ಲಾ ಎಂದು ಸ್ವಲ್ಪ ಸಂತೋಷವೂ ಇತ್ತು. ಕೆಲವು ತಿಂಗಳುಗಳ ಹಿಂದೆ ರೈಲಿನಲ್ಲಿ ಕಂಡ ಆ ಗುಜರಾತೀ ಬಂಗಾರಿಯನ್ನು ನಾನು ಮರೆತಿರಲಿಲ್ಲ. ಅವಳ ತಂದೆಯ ಸರಾಫಿ ಅಂಗಡಿಯ ವಿಳಾಸವನ್ನೂ ನಾನು ನೆನಪಿನಲ್ಲಿಟ್ಟುಕೊಂಡಿದ್ದೆ. ಬೆಂಗಳೂರಿಗೆ ಬಂದಾಗ ಅವರನ್ನು ಕಂಡು ಹೋಗಬೇಕೆಂದು ಆತ ಹೇಳಿದ್ದ ನಲ್ಲವೆ? ನನಗೂ ಆ ಯುವತಿಯನ್ನು ನೋಡುವ ಬಯಕೆ. ಅವರಿವರನ್ನು ವಿಚಾರಿಸುತ್ತಾ ಆ ಸೇಠಜಿಯ ಅಂಗಡಿಯನ್ನು ಹುಡುಕಿಕೊಂಡು ಹೊರಟೆ. ನನ್ನ ಕೈಯಲ್ಲಿದ್ದುದು ಒಂದು ಬ್ಯಾಗು. ಅದರಲ್ಲಿ ಒಂದು ಶರ್ಟು, ಒಂದು ದೋತರ, ಒಂದು ಟಾವೆಲ್, ಒಂದು ಹೊದ್ದಿಕೆ, ಅಷ್ಟೆ.

ಎರಡು ತಾಸುಗಳವರೆಗೆ ಅಲೆದ ತರುವಾಯ ಸೇಠಜಿಯ ಅಂಗಡಿಯು ಪತ್ತೆಯಾಯಿತು. ಮೂಗಿನ ಮೇಲೆ ಕನ್ನಡಕವಿಟ್ಟುಕೊಂಡು ದಿಂಬಿಗೊರಗಿ ಕುಳಿತಿದ್ದ ಮುದುಕ ಸೇಠಜಿ ನನ್ನನ್ನು ಒಬ್ಬ ಗಿರಾಕಿಯೆಂದೇ ಭಾವಿಸಿ ಮಾತ ನಾಡಿಸಿದ.

"ಏನು ಬೇಕು? ಬೆಳ್ಳಿಯೆ? ಬಂಗಾರವೆ?"

"ಬೆಳ್ಳಿಯೂ ಅಲ್ಲ, ಬಂಗಾರವೂ ಅಲ್ಲ, ಬಂಗಾರಿ ಬೇಕು," ಎಂದು ನನ್ನಷ್ಟಕ್ಕೆ ನಾನೇ ಹೇಳಿಕೊಳ್ಳುತ್ತಾ ಕೈಯಲ್ಲಿದ್ದ ಬ್ಯಾಗನ್ನು ಬೆಂಚಿನ ಮೇಲಿರಿಸಿ ನನ್ನ ಪರಿಚಯ ಮಾಡಿಕೊಟ್ಟೆ.

"ಆ ದಿವಸ ನೀವು ಮುಂಬಯಿಗೆ ಹೋಗುವಾಗ ರೈಲಿನಲ್ಲಿ...."

ಅವನಿಗೆ ಆ ದಿನದ ನೆನಪು ಬಂದಿರಬೇಕು.

"ಹೋ! ಹೋ! ಗೊತ್ತಾಯಿತು. ಗೊತ್ತಾಯಿತು. ಕ್ಷಮಿಸಿ. ವಯಸ್ಸಾಗುತ್ತಾ ಬಂತು. ಮರೆವು," ಎಂದ ಮುದುಕ.

ಅವನು ನನ್ನನ್ನು ತಕ್ಷಣ ಗುರುತಿಸದಿದ್ದುದರಲ್ಲಿ ಆಶ್ಚರ್ಯವೇನೂ ಇರಲಿಲ್ಲ. ರೈಲಿನಲ್ಲಿ ಎಷ್ಟೋ ಜನರ ಪರಿಚಯವಾಗುತ್ತದೆ, ಮರೆತುಹೋಗುತ್ತದೆ. ಅವನ ಮಗಳ ನೆನಪಿನಿಂದಾಗಿಯೇ ಅಲ್ಲವೇ ನಾನೂ ಅವನನ್ನು ಗುರುತಿಸಿದ್ದುದು?

"ನೀವೆಲ್ಲಿ ಇಳಿದುಕೊಂಡಿದ್ದೀರಿ?"

"ನಾನು ಬೆಂಗಳೂರಿಗೆ ಬಂದದ್ದು ಇದೇ ಮೊದಲ ಸಲ. ಎಲ್ಲಿ ಇಳಿಯ

ಬೇಕೆಂದೂ ಗೊತ್ತಿಲ್ಲ. ಒಳ್ಳೆಯ ಹೋಟಲು ಯಾವದಿದೆ ಇಲ್ಲಿ?" ಎಂದು ಕೇಳಿದೆ. "ನಿಮ್ಮ ಮನೆಗೇ ಬರುತ್ತೀನಿ," ಎಂದು ಹೇಳುವಂತಿರಲಿಲ್ಲವಲ್ಲ!

ಮುದುಕ ಒಬ್ಬ ಸೇವಕನನ್ನು ಕೂಗಿ, ಸಮೀಪದಲ್ಲಿದ್ದ ಒಂದು ಹೋಟಲಿಗೆ ನನ್ನನ್ನು ಕರೆದೊಯ್ದು ಬಿಟ್ಟು ಬರುವಂತೆ ತಿಳಿಸಿ, ನನ್ನತ್ತ ದೃಷ್ಟಿ ತಿರುಗಿಸಿ ದೇಶಾವಾರದ ನಗು ಬೀರುತ್ತ ಕೇಳಿದ :

"ಏನು, ಬೆಡ್ಡಿಂಗ್ ಗಿಡ್ಡಿಂಗ್ ತಂದಿಲ್ಲವೇನು ?"

"ಅವಸರದಲ್ಲಿ ಹೊರಟೆ. ತರಲಾಗಲಿಲ್ಲ."

"ನಮ್ಮ ಮನೆಯಿಂದ ತರಿಸಿಕೊಡುತ್ತೀನಿ," ಎಂದು ಹೇಳಿ ಸೇಠಜಿ, ನನಗೊಂದು ಹಾಸಿಗೆ ತಂದುಕೊಡಲು ಸೇವಕನಿಗೆ ಆಜ್ಞೆ ವಿಧಿಸಿದ.

ಹೋಟಲಿಗೆ ಬಂದು ಕೊಠಡಿ ಸೇರಿದ್ದಾಯಿತು. ಆ ಸೇವಕನಿಗೆ ಕಾಫಿ ತಿಂಡಿ ಕೊಡಿಸಿ, ಮೇಲೊಂದು ಸಿಗರೇಟು ಕೊಟ್ಟು, ದೋಸ್ತಿ ಮಾಡಿಕೊಂಡು ಮೆಲ್ಲಗೆ ಸೇಠಜಿಯ ಮನೆಯವರ ಮಾತು ತೆಗೆದೆ.

"ಅವರೆಲ್ಲಾ ಚೆನ್ನಾಗಿರುವರೋ ?"

"ಇದ್ದಾರೆ."

"ಸೇಠಜಿಯವರ ಮಗಳು ?"

"ಯಾರು ? ಮೀರಾಬೇನಳೇ ?"

ಮೀರಾ! ಆ ಸುಂದರಿಯ ಹೆಸರನ್ನು ನಾನು ಕೇಳುತ್ತಿದ್ದುದೂ ಅದೇ ಮೊದಲ ಬಾರಿ.

"ಹೌದು. ಮೀರಾಬೇನ್ ಚೆನ್ನಾಗಿದ್ದಾರೆಯೋ ?"

"ಇದ್ದಾರೆ ಸಾರ್."

"ನಿನಗೆ ಸೇಠಜಿ ಎಷ್ಟು ಸಂಬಳ ಕೊಡುತಾರೆ ?"

"ಆರು ರೂಪಾಯಿ."

"ಹಾ ?" ಎಂದೆ ನಾನು. ಒಬ್ಬ ಸೇವಕನಿಗೆ ಆರು ರೂಪಾಯಿ !

"ದಿವಸಕ್ಕೆ ಆರೋ, ತಿಂಗಳಿಗೋ ?"

"ದಿವಸಕ್ಕೆ ಆರು ಯಾರು ಕೊಟ್ಟಾರು ಸಾರ್ ? ತಿಂಗಳಿಗೆ ಆರು ಕೊಡಬೇಕಾದರೇ ಅಳ್ತಾರೆ."

ನಾನು ಅವನ ಕೈಗೆ ಒಂದು ರೂಪಾಯಿ ಹಾಕಿ,

"ಏನಾದರೂ ತೆಗೆದುಕೊಳ್ಳಪ್ಪಾ," ಎಂದು ಹೇಳಿದೆ.

ಅವನಿಗೆ ಪರಮಸಂತೋಷವಾಯಿತು. ಆರು ರೂಪಾಯಿ ಸಂಬಳದ ಬಡವನಿಗೆ ಒಂದು ರೂಪಾಯಿಯೆಂದರೇನೇ ದೊಡ್ಡ ನಿಧಿಯಂತೆ.

"ಮೀರಾಗೆ ನನ್ನ ನೆನಪು ಕೊಡಪ್ಪಾ," ಎಂದು ಹೇಳಿ ನನ್ನ ಹೆಸರು ಮತ್ತು ವಿವರ ತಿಳಿಸಿದೆ.

"ಆಗಲಿ ಸಾರ್. ಅದಕ್ಕೇನು? ನೀವಿಲ್ಲಿ ಇರುವದನ್ನೂ ಹೇಳಲೇ?"

"ಅದಕ್ಕೇನು, ಹೇಳು."

ಅವನು ಸೇಠಜಿಯ ಮನೆಗೆ ಹೊರಟ. ನಾನು ಸ್ನಾನ ತೀರಿಸಿಕೊಂಡು ಬಟ್ಟೆ ಬದಲಿಸುವಷ್ಟರಲ್ಲಿ ಅವನೂ ಹಿಂದಿರುಗಿ ಬಂದ.

"ಏನಯ್ಯಾ, ಏನಂತಾಳೆ? ನನ್ನ ಗುರುತು ಹಿಡಿದಳೇ?"

"ಹಾಗೆ ಒಮ್ಮೆಲೆ ಗುರುತು ಹಿಡಿಯೋದು ಕಷ್ಟ ಸಾರ್. ನಿಮ್ಮ ಹೆಸರು ಹೇಳಿಕೊಂಡು ಬೇರೆ ಯಾರಾದರೂ ಬಂದಿದ್ದರೆ ಹೇಗೆ ಅಂತಾಳೆ ಆಕೆ! ನೀವೇ ಅಂತ ಖಚಿತವಾಗಿ ಗೊತ್ತಾಗಬೇಡವೆ?"

ನಾನು ತಲೆ ತುರಿಸಿಕೊಂಡೆ. ಪಕ್ಕಾ ಗುಜರಾತೀ ಹೆಣ್ಣು ಅವಳು! ಅವಳು ನನ್ನನ್ನು ಖಚಿತವಾಗಿ ಗುರುತಿಸುವಂಥದೇನಿತ್ತು ನನ್ನ ಹತ್ತಿರ? ಮುಸುಕಿನಲ್ಲಿ ಮುಖಕ್ಕೆ ಮುಖ ಕೂಡಿತ್ತು. ಪ್ರವಾಸ ಮಾಡುವಾಗ ಹಾಗೆ ಎಷ್ಟೋ ಸಲ ಆಗುವುದುಂಟು. ನಾನು ಅವಳ ಕೈ ಹಿಡಿದುಕೊಂಡಿದ್ದೆ, ತೊಡೆ ಚಿವುಟಿದ್ದೆ. ಬೇರೆ ಯುವಕರಿಂದಲೂ ಅವಳಿಗೆ ಅಂಥದೇ ಅನುಭವ ಬಂದಿರಲು ಸಾಕು. ಹಠಾತ್ತಾಗಿ ನನಗೆ ಅವಳ ಕರವಸ್ತ್ರದ ನೆನಪಾಯಿತು. ಓರೆಕೋರೆ ನಿಲ್ದಾಣದಲ್ಲಿ ನಾನು ಅವಳನ್ನು ಬೀಳ್ಕೊಡುವಾಗ ನನಗೆ ತನ್ನ ಕರವಸ್ತ್ರವನ್ನು ಕೊಟ್ಟಿದ್ದಳಲ್ಲವೇ ಮೀರಾ? ಅರ್ಥಾತ್, ಆಗ ನನ್ನ ಹತ್ತಿರ ಇರಲಿಲ್ಲ ಆ ವಸ್ತ್ರ. ಆದರೂ, ಅವಳು ಅದನ್ನು ನನಗೆ ಕೊಟ್ಟು ಸಂಗತಿ ತಿಳಿಸಿದರೆ ಸಾಕಾಗುವುದೊ ಏನೊ.

ಸೇವಕನಿಗೆ ಆ ವಿಚಾರ ಹೇಳಿ ಕಳಿಸಿ ಆತುರತೆಯಿಂದ ಅವನ ಹಾದಿ ಕಾಯತೊಡಗಿದೆ. ಹತ್ತು ನಿಮಿಷಗಳಲ್ಲಿಯೆ ಅವನು ಹಿಂದಿರುಗಿ ಬಂದ.

"ನಿಮ್ಮ ಕೆಲಸವಾಯ್ತು ಬಿಡಿ ಸಾರ್. ನಿಮ್ಮ ಗುರುತು ಇದೆಯಂತೆ ಅವಳಿಗೆ!"

"ಮತ್ತೇನು ಹೇಳಿದಳು ?"

"ಭೆಟ್ಟಿಯಾಗಬೇಕಂತೆ. 'ಪ್ರಭಾತ ಟಾಕೀಸ್'ಗೆ ಬರಲು ತಿಳಿಸಿದ್ದಾಳೆ. ಫಸ್ಟ್‌ಕ್ಲಾಸಿನಲ್ಲಿರುತ್ತಾಳೆ. ನೀವು ಬಂದು ನೋಡಬೇಕಂತೆ."

ಸಿಕ್ಕಿತು ಹಕ್ಕಿ! ಎಂದು ಹಿಗ್ಗಿ ಕೈಗಡಿಯಾರ ನೋಡಿಕೊಂಡೆ. ಸಿನಿಮಾದ ಸಮಯವೂ ಆಗಿತ್ತು. ಆ ಸೇವಕನನ್ನು ಕರೆದುಕೊಂಡು ಹೋಗಿ ಮತ್ತೊಂದು ಸಲ ಅವನಿಗೆ ಕಾಫಿ ಕೊಡಿಸಿದೆ.

"ಬಸ್ ಹತ್ತಿಹೋಗಿ ಸಾರ್. ಮೆಜೆಸ್ಟಿಕ್‌ಗೆ ಇಳಿಸುತ್ತಾರೆ. ಅಲ್ಲಿಂದ ಇಪ್ಪತ್ತು ಹೆಜ್ಜೆ ನಡೆದರೆ 'ಪ್ರಭಾತ್' ಸಿಕ್ಕುತ್ತೆ," ಎಂದು ಹೇಳಿ ಅವನು ಅಂಗಡಿಗೆ ತೆರಳಿದ.

ನಾನು ಥಿಯೆಟರಿನಲ್ಲಿ ಅಡಿಯಿರಿಸಿದಾಗ ಇನ್ನೂ ಚಿತ್ರ ಪ್ರದರ್ಶನ ಕ್ಕಾರಂಭವಾಗಿರಲಿಲ್ಲ. ಒಳಗಡೆ ವಿದ್ಯುದ್ದೀಪಗಳು ಉರಿಯುತ್ತಿದ್ದುವು. ಹಿಂದಿನ ಸಾಲಿನಲ್ಲಿ ಕುಳಿತಿದ್ದ ಮೀರಾಳನ್ನು ಗುರುತಿಸುವುದಕ್ಕೇನೂ ವಿಲಂಬ ವಾಗಲಿಲ್ಲ. ನನ್ನನ್ನು ಕಂಡು ಅವಳು ಕಣ್ಣು ಮಿಟುಕಿಸಿದಳು. ನಾನು ಮುಗುಳ್ನಗುತ್ತಾ ಹೋಗಿ ಅವಳ ಪಕ್ಕದ ಕುರ್ಚಿಯಲ್ಲಿ ಕುಳಿತುಕೊಂಡೆ. ಸುತ್ತಲಿನ ಹಲವು ಕಣ್ಣುಗಳು ನಮ್ಮ ಕಡೆ ಹೊರಳಿದುವು. ಮೀರಾಳ ಮಗ್ಗುಲಲ್ಲಿ ಕುಳಿತಿದ್ದ ಅವಳ ಪುಟ್ಟ ತಂಗಿ ನನ್ನನ್ನು ದಿಟ್ಟಿಸುತ್ತಾ,

"ಯಾರವರು ಬಂದವರು ?" ಎಂದಳು, ಅವಳು ಪುಟ್ಟ ಹುಡುಗಿ. ಅವಳಿಗೆ ಹೆಚ್ಚಿನ ವಿಷಯ ತಿಳಿಯುವಂತಿರಲಿಲ್ಲ.

ಚಿತ್ರ ಪ್ರದರ್ಶನಕ್ಕಾರಂಭವಾಯಿತು. ದೀಪಗಳು ಆರಿ ಥಿಯೆಟರಿನಲ್ಲಿ ಕತ್ತಲೆ ಹರಡಿಕೊಂಡಿತು. ನಾನು ಮೆಲ್ಲಗೆ ಮೀರಳ ಭುಜದ ಮೇಲೆ ಕೈ ಹಾಕಿದೆ. ಪಿಸುದನಿಯಲ್ಲಿ ಮಾತಿಗಾರಂಭವಾಯಿತು.

"ಅಂತೂ ನೆನಪಿಟ್ಟದ್ದೀರಲ್ಲ!" ಎಂದಳಾಕೆ.

"ನೀವು ರೈಲಿನಲ್ಲಿ ಕೂಡಿದಂದಿನಿಂದ ದಿನಾಲೂ ನಿಮ್ಮದೇ ಧ್ಯಾನ!" ಎಂದು ನಾನೊಂದು ಬುರುಡೆ ಹಾರಿಸಿದೆ. ವಾಸ್ತವವಾಗಿ, ನಾನು ಬೆಂಗಳೂರಿಗೆ ಬರುವವರೆಗೂ ಅವಳ ನೆನಪೇ ಇರಲಿಲ್ಲ.

ನನ್ನಂಥ ಎಷ್ಟು ಯುವಕರನ್ನು ಅವಳು ಕಂಡಿದ್ದಳೋ! ನನ್ನ ಬುರುಡೆ ಯನ್ನು ನಂಬುವಂಥ ಮುಗುದೆಯೇನೂ ಆಗಿರಲಿಲ್ಲ ಆಕೆ,

"ಆಹಾ! ಸಾಕು, ಸಾಕು. ಎಲ್ಲಾ ಬಣ್ಣದ ಮಾತು!" ಎಂದಳು.

"ನಿಮ್ಮ ಬಣ್ಣ ನೋಡಿದರೇ ಸಾಕು, ಎಂದೆಂದೂ ಮರೆಯುವದಿಲ್ಲ."

"ಇರಲಿರಲಿ. ಪರವಾಯಿಲ್ಲ. ನಿಮಗೆ ಮದುವೆಯಾಗಿಲ್ಲವೋ?"

"ಆಗಿದೆ. ಆದರೇನಂತೆ! ಅವಳು ಹಳ್ಳಿಯ ಹುಡುಗಿ. ನಿಮ್ಮಂಥ ರೂಪವಿಲ್ಲ, ಬುದ್ಧಿಯೂ ಇಲ್ಲ. ನನ್ನ ಜೊತೆಗೇ ಯಾಕೆ ಬಂದುಬಿಡಬಾರದು ನೀವು?"

"ಸರಿ. ನೀವು ಮದುವೆಯಾದವರು. ನನ್ನನ್ನು ಕಟ್ಟಿಕೊಂಡೇನು ಮಾಡುತ್ತೀರಿ?"

"ಹೋಗಲಿ. ಇಂದಿನ ಕಾರ್ಯಕ್ರಮ ಹ್ಯಾಗೆ?"

"ಈಗ ನೀವು ಉಳಿದುಕೊಂಡಿರುವ ಹೋಟಲಿಗೆ ನಾನು ಬರಲಾರೆ. ಅಲ್ಲಿ ನನ್ನನ್ನು ಎಲ್ಲರೂ ಗುರುತಿಸುತ್ತಾರೆ. ಬೇರೆ ಹೋಟಲಿನಲ್ಲಿ ವ್ಯವಸ್ಥೆ ಮಾಡಿ."

"ನಾನು ಬೆಂಗಳೂರಿಗೆ ಹೊಸಬ. ಅನುಕೂಲವಾದ ಹೋಟಲುಗಳು ಯಾವುದೆಂಬುದೂ ತಿಳಿಯದು."

"ಈ ಥಿಯೆಟರಿನ ಹತ್ತಿರವೇ ಒಂದು ಇದೆ. ನೀವು ಈಗಲೇ ಹೋಗಿ ರೂಂ ತೆಗೆದುಕೊಂಡು ನಿಮ್ಮ ಸಾಮಾನು ತಂದು ಹಾಕಿಬಿಡಿ. ಸಿನಿಮಾ ಮುಗಿಯುವದರೊಳಗಾಗಿ ಆದೀತೋ?"

"ಓಹೋ! ಅದೇನು ಮಹಾ!" ಎಂದು ಹೇಳಿ, ಅವಳ ಕೆನ್ನೆಗೊಂದು ಮುತ್ತು ಕೊಟ್ಟು ಹೊರಬಂದೆ. ಅವಳು ತಿಳಿಸಿದ ಹೋಟಲಿನಲ್ಲಿ ರೂಂ ಹಿಡಿದು ನನ್ನ ಸಾಮಾನನ್ನೂ ಅಲ್ಲಿಗೆ ಸಾಗಿಸಿ ಒಂದು ಗಂಟೆಯ ತರುವಾಯ ಮರಳಿ 'ಪ್ರಭಾತ'ಕ್ಕೆ ಬಂದೆ. ಅಷ್ಟರಲ್ಲಿ ಸಿನಿಮಾ ಮುಗಿದುಹೋಗಿ ಅವಳೂ ಹೊರಗೆ ಬರುತ್ತಿದ್ದಳು. ಅವಳನ್ನು ಮನೆಗೆ ಕರೆದೊಯ್ಯುವುದಕ್ಕಾಗಿ ಆ ಸೇವಕ ಬಂದು ಕಾದಿದ್ದ.

"ನಾನು ಇನ್ನೊಂದು ಸಿನಿಮಾ ನೋಡಿಕೊಂಡು ಬರ್ತೀನಿ, ಮೆಜಸ್ಟಿಕ್‌ನಲ್ಲಿ. ನೀನು ಮನೆಯಲ್ಲಿ ಹೇಳಿಬಿಟ್ಟು ಬಾ," ಎಂದು ಹೇಳಿ ಅವನನ್ನು ಕಳಿಸಿ ಕೊಟ್ಟಳು ಮೀರಾ.

ಸರಿ. ಮತ್ತೆ ಟಿಕೀಟು ತೆಗೆಯಿಸಿ ಮೆಜಸ್ಟಿಕ್ ಥಿಯೇಟರಿನಲ್ಲಿ ಪ್ರವೇಶಿಸಿದ್ದಾಯಿತು. ಅರ್ಧಗಂಟೆ ಬಿಟ್ಟು ಸೇವಕನೂ ಬಂದು ಸೇರಿದ.

"ಅಮ್ಮ ಏನಂದಳೋ ?" ಎಂದು ಕೇಳಿದಳು ಮೀರಾ.

"ಸ್ವಲ್ಪ ಕೋಪ ಮಾಡಿಕೊಂಡರು."

"ಅಪ್ಪಗೆ ಗೊತ್ತಾದರೆ ?"

"ಗೊತ್ತಾಗುವದಿಲ್ಲ ಬಿಡಿ. ಹಿತ್ತಿಲ ಬಾಗಿಲಿನಿಂದ ಬರಬೇಕೆಂತ ಅಮ್ಮ ಹೇಳಿದ್ದಾರೆ."

"ಸರಿ. ನೀನು ಸಿನಿಮಾ ನೋಡುತ್ತಿರು. ನಾನು ಸ್ವಲ್ಪ ಕಾಫಿ ಕುಡಿದುಕೊಂಡು ಬಂದು ಬಿಡುತೀನಿ," ಎಂದು ಹೇಳಿ ಸೇವಕನ ಜೊತೆಗೆ ತಂಗಿಯನ್ನು ಬಿಟ್ಟು ನನ್ನೊಡನೆ ಬಂದಳು ಮೀರಾ.

ಹೋಟಲಿನಲ್ಲಿ ಯಾರೂ ನಮ್ಮನ್ನು ಮಾತನಾಡಿಸಲಿಲ್ಲ. ನೇರವಾಗಿ ಕೊಠಡಿಗೆ ಬಂದು ಬಾಗಿಲು ತೆಗೆದು ಒಳಗಡೆ ಪ್ರವೇಶಿಸಿದೆವು. ಹೋಟಲಿನ ಮಂಚ, ಹಾಸಿಗೆ ನಮ್ಮಿಬ್ಬರನ್ನೂ ಆಹ್ವಾನಿಸುತ್ತಿದ್ದುವು. ಹಾಸಿಗೆಯ ಮೇಲೊರಗಿಕೊಂಡು ರವಿಕೆಯನ್ನು ತೆಗೆದು ಕುರ್ಚಿಯ ಬೆನ್ನಮೇಲಿಟ್ಟಳು ಮೀರಾ. ಅವಳ ಸುಪುಷ್ಟ ಸ್ತನಗಳು ವಿದ್ಯುದ್ದೀಪದ ಪ್ರಖರ ಬೆಳಕಿನಲ್ಲಿ ಮಂಜಿನ ಮುದ್ದೆಗಳಂತೆ ಕಂಗೊಳಿಸುತ್ತಿದ್ದುವು.

"ನಿಮ್ಮ ಧೈರ್ಯವನ್ನು ನೋಡಿ ನನಗೆ ಬಹಳ ದಿಗಿಲು," ಎಂದೆ ನಾನು.

"ಇದರಲ್ಲೇನು ಬಂತು ಧೈರ್ಯ? ಯಾರೂ ಮಾಡದ್ದನ್ನು ನಾನು ಮಾಡುತ್ತಿಲ್ಲವಲ್ಲ ?"

ನಾನು ಮತ್ತೆ ಮಾತನಾಡಲಿಲ್ಲ. ದೀಪವನ್ನಾರಿಸಿ ಅವಳನ್ನು ತೋಳುಗಳಲ್ಲಿ ಬಿಗಿದುಕೊಂಡೆ.

ಅರ್ಧ ಗಂಟೆ ಕಳೆಯಿತು.

"ಅಂದು ರೈಲಿನಲ್ಲಿ ನಿಮ್ಮನ್ನು ನೋಡಿದಾಗಲೇ ನನಗೆನ್ನಿಸಿತ್ತು. ನಾವಿಬ್ಬರೂ ಒಂದಿಲ್ಲೊಂದು ದಿನ ಹೀಗೆ ಕೂಡುವೆವೆಂದು," ಎಂದಳು ಮೀರಾ.

"ನನಗೂ ಅನ್ನಿಸಿತ್ತು."

"ನೋಡಿ. ನಾನೂ ಎಷ್ಟೋ ಯುವಕರನ್ನು ನೋಡಿದ್ದೀನಿ. ಆದರೆ, ಇದುವರೆಗೆ ಯಾರೊಬ್ಬರ ಬೆನ್ನು ಬಿದ್ದಿಲ್ಲ."

"ಅಂದರೆ? ನಾನೇ ಮೊದಲನೆಯವನು ಅಂತೀರಾ?"

"ನೀವು ನಂಬುವಿರೋ ಇಲ್ಲವೋ. ನನ್ನ ಗಂಡ ಹೋದಂದಿನಿಂದ ಬೇರೆ ಯಾರನ್ನೂ ನಾನು ಮುಟ್ಟಿರಲಿಲ್ಲ."

"ಪಾಪ. ಪಾಪ. ಬಹಳ ಕಷ್ಟಪಟ್ಟಿರಬೇಕು."

"ಏನು ಮಾಡುವದು ಹೇಳಿ. ನಮ್ಮ ಜಾತಿಯಲ್ಲಿ ಪುನರ್ವಿವಾಹವಿಲ್ಲ."

"ಇನ್ನು ಮುಂದೆ ಎಲ್ಲಾ ಜಾತಿಗಳೂ ಮಣ್ಣುಗೂಡಿ ಗಂಡು ಹೆಣ್ಣೆಂಬ ಎರಡೇ ಜಾತಿ ಉಳಿಯುವ ಕಾಲ ಬರುತ್ತದೆ ಮೀರಾ."

"ಯಾವಾಗ ಬರುತ್ತೋ!" ಎಂದು ಒಂದು ನಿಟ್ಟುಸಿರು ಬಿಟ್ಟು ಅವಳು ಕೇಳಿದಳು.

"ನೀವಿಲ್ಲಿ ಎಷ್ಟು ದಿನ ಇರುತ್ತೀರಿ?"

"ನಾಳೆಯೊಂದು ದಿನವಷ್ಟೆ. ನಾಡಿದ್ದು ಹೊರಡಬೇಕು."

"ಅಯ್ಯೋ! ಇಷ್ಟು ಅವಸರವೇನು?"

"ನಾನು ಸ್ವತಂತ್ರನಲ್ಲವಲ್ಲ ಮೀರಾ. ಸರಕಾರೀ ನೌಕರ. ನಾನಿಲ್ಲಿಗೆ ಬಂದದ್ದು ಸರಕಾರೀ ಕೆಲಸಕ್ಕಾಗಿ."

"ಹಾಗಾದರೆ ನೀವಿಂದು ನಮ್ಮ ಮನೆಗೆ ಬಂದುಬಿಡಿ!"

"ಹಾ?"

"ನನ್ನ ರೂಂ ಇರುವದು ಮಹಡಿಯ ಮೇಲೆ. ರಾತ್ರಿ ಯಾರೂ ಅಲ್ಲಿಗೆ ಬರುವದಿಲ್ಲ. ನಮ್ಮ ತಂದೆಗಂತೂ ಹೃದಯ ರೋಗವಿದೆ. ಅವರು ಮಹಡಿ ಹತ್ತುವದಿಲ್ಲ. ನೀವು ಹಿತ್ತಿಲ ಬಾಗಿಲಿನಿಂದ ಬಂದು ಬೆಳಗಾಗುವದರೊಳಗಾಗಿ ಹೊರಟುಹೋಗಬಹುದು. ಯಾರಿಗೂ ಗೊತ್ತಾಗುವದಿಲ್ಲ."

ಸರಿ. ನಾನೇನು ಅಳ್ಳೆದೆಯವನಲ್ಲ. ಇಂಥ ಅನೇಕ ಸಾಹಸ ಕೃತ್ಯಗಳಿಗೆ ಕೈಹಾಕಿ ಪಳಗಿದವನು.

ಸಿನಿಮಾ ಬಿಡುವುದರೊಳಗಾಗಿ ಇಬ್ಬರೂ ಥಿಯೇಟರಿಗೆ ಬಂದುದಾಯಿತು. ಅವರು ಮೂವರೂ ಮುಂದೆ ಮುಂದೆ ನಡೆದರು. ನಾನು ಹಿಂದೆ ಹಿಂದೆ ಹೊರಟೆ. ಅವರದು ಭವ್ಯವಾದ ಮನೆ. ಹಿತ್ತಲು ಕಡೆಯ ಭಾಗವೂ ಬಹಳ ಆಕರ್ಷಕ ವಾಗಿತ್ತು.

ಹಿತ್ತಲು ಬಾಗಿಲಿಗೆ ಚಿಲಕ ಹಾಕಿರಲಿಲ್ಲ. ಅವರು ಮೂವರೂ ಒಳ

ಸೇರಿದರು. ಮಹಡಿಯ ಮೆಟ್ಟಲುಗಳ ಬಳಿ ಹಾಸಿಗೆ ಬಿಡಿಸಿ ಸೇವಕ ಮಲಗಿಕೊಂಡ. ಮೀರಾ ಕೈಮಾಡಿ ನನ್ನನ್ನು ಕರೆದಳು. ಚಪ್ಪಲುಗಳನ್ನು ಸೇವಕನ ವಶಕ್ಕೊಪ್ಪಿಸಿ ನಾನು ಸಪ್ಪಳವಾಗದಂತೆ ಮೆಟ್ಟಲುಗಳನ್ನೇರಿ ಹೋದೆ. ಅವಳ ಕೊಠಡಿಯನ್ನು ಕಂಡು ಆಶ್ಚರ್ಯವಾಗದಿರಲಿಲ್ಲ. ಆ ಮಂಚ, ಆ ಹಾಸುಗೆ, ಆ ಸೊಳ್ಳೆಯಪರದೆ, ಆ ಅಲಂಕಾರ!

"ಮೇರೇ ಕೃಷ್ಣ!" ಎನ್ನುತ್ತಾ ಮೀರಾ ನನ್ನನ್ನು ತಬ್ಬಿಕೊಂಡಳು.

ಗಂಟೆಗಳು ಉರುಳುತ್ತಿದ್ದುವು.

ಅವಳನ್ನು ಬಿಟ್ಟು ಹೊರಡುವುದು ಬಹಳ ಕಷ್ಟಕರವಾದ ಕೆಲಸವಾಗಿತ್ತು. ಅಲ್ಲಿಯೇ ಇದ್ದುಬಿಡುವುದೂ ಸಾಧ್ಯವಿರಲಿಲ್ಲ. ನಾನೇನು ಅವರ ಮನೆಯಳಿಯನೇ? ಐದೂವರೆ ಗಂಟೆಯ ಹೊತ್ತಿಗೆ ಎದ್ದು, ಸೇವಕನ ಜೊತೆಗೆ ಹೋಟಲಿಗೆ ಬಂದೆ.

ಅವನಿಗೆ ಮತ್ತೆ ಲಂಚ ಕೊಡಬೇಕಾಯಿತು. ಮುಖ ತೊಳೆದುಕೊಂಡು ಬಂದು ಇಡ್ಲಿ – ಚಟ್ನಿ – ಕಾಫಿ ತರಿಸಿದೆ. ಆ ಆಳು ಇನ್ನೂ ಹುಡುಗ. ಹದಿಮೂರು ಹದಿನಾಲ್ಕು ವರ್ಷ ವಯಸ್ಸಿನವನು, ಅಷ್ಟೆ. ಸೇಠಜಿಯ ಬಗೆಗೆ ಆ ಹುಡುಗನಿಗೆ ಬಹಳ ಸಿಟ್ಟು.

"ಒಂದು ರೂಪಾಯಿ ಸಂಬಳ ಜಾಸ್ತಿ ಮಾಡು ಅಂತ ಒಂದು ವರ್ಷದಿಂದ ಕೇಳುತಾ ಇದೀನಿ. ಆತ ಮಹಾ ಜಿಪುಣ. ಮಾಡಲೊಲ್ಲ."

"ಮನೆಯಲ್ಲಿ ಬೇರೆ ಆಳುಗಳಿಲ್ಲವೇನು?"

"ಇವನ ಹತ್ತಿರ ಯಾರು ಬಂದಾರು ಸಾರ್? ನಿಮ್ಮ ವಯಸ್ಸಿನವರನ್ನು ಅವನು ಕೆಲಸಕ್ಕಿಟ್ಟುಕೊಳ್ಳುವದಿಲ್ಲ. ಯಾಕೆ ಗೊತ್ತೋ?" ಎನ್ನುತ್ತಾ ಆತ ಮುಸಿಮುಸಿ ನಕ್ಕ.

"ಗೊತ್ತು ಗೊತ್ತು. ಮೀರಾಳ ತಾಯಿ ಹ್ಯಾಗೆ?"

"ಅವಳೂ ಹಾಗೇ. ಅವಳೂ ಒಬ್ಬನನ್ನು ಮಡಗಿಕೊಂಡಿದ್ದಾಳೆ. ಸೇಠಜಿ ಅಂಗಡಿಯಲ್ಲಿದ್ದಾಗ ಇವನು ಬಂದು ಹೋಗುತ್ತಾನೆ."

"ಎಲಾ! ಮೀರಾಗೆ ಗೊತ್ತಿಲ್ಲವೇ ಈ ವಿಷಯ?"

"ಗೊತ್ತಿದೆ. ಅವಳಾದರೂ ಏನು ಮಾಡಿಯಾಳು?"

"ಸರಿ. ಮೀರಾ ಹ್ಯಾಗೆ?"

"ಅದೇನೋ ನನಗೆ ಗೊತ್ತಿಲ್ಲ," ಎಂದಿಷ್ಟೆ ಹೇಳಿ ಅವನು ಜಾರಿಕೊಂಡ.

ಮಧ್ಯಾಹ್ನ ನಾನು ಸ್ನಾನ ಊಟ ಮುಗಿಸಿ ವಿರಮಿಸಿಕೊಳ್ಳುತ್ತಿದ್ದಾಗ ಅವನು ಬಂದ – ಮೀರಳ ಸಂದೇಶದೊಡನೆ.

"ಇವತ್ತು 'ಸಾಗರ್'ಗೆ ಬರುತ್ತಾಳಂತೆ. ಆರು ಗಂಟೆಗೆಲ್ಲಾ ನೀವು ಥಿಯೇಟರಿನ ಹತ್ತಿರ ಇರಬೇಕಂತೆ."

ಮತ್ತೆ ಸಿನಿಮಾ ಥಿಯೇಟರು. ಅಲ್ಲಿಂದ ಹೋಟೆಲು. ನನ್ನ ಹಿಂದೆ ಓಡಿ ಬರುವುದಕ್ಕೂ ಅವಳು ಸಿದ್ಧಳಾಗಿದ್ದಳು. ಐದಾರು ಸಾವಿರ ರೂಪಾಯಿಗಳನ್ನು ಅವಳು ತೆಗೆದುಕೊಂಡು ಬರಬಹುದಾಗಿತ್ತು. ಅವಳನ್ನು ಓಡಿಸಿಕೊಂಡು ಹೋಗಲು ನನಗೇ ಧೈರ್ಯವಿರಲಿಲ್ಲ. ನಾನು ಸ್ವತಂತ್ರನಲ್ಲ. ನನ್ನನ್ನು ನಂಬಿಕೊಂಡ ಸಂಸಾರವಿದೆ. ತಮ್ಮಂದಿರಿದ್ದಾರೆ. ಅವರ ವಿದ್ಯಾಭ್ಯಾಸ ಮುಗಿಯಬೇಕು. ನಾನು ಅವರನ್ನೆಲ್ಲ ನಡುನೀರಲ್ಲಿ ಬಿಟ್ಟು ಪೋಲಿಯ ಹಾಗೆ ಆಚರಿಸುವಂತಿರಲಿಲ್ಲ.

ಮೈಸೂರಿಗೆ ಹೋಗಿ ಬಂದು ಅವಳನ್ನು ಕಾಣುವುದಾಗಿ ಹೇಳಿ ತುಂಬಾ ಕಷ್ಟದಿಂದ ಅವಳನ್ನು ಬೀಳ್ಕೊಂಡುದಾಯಿತು. ರಾತ್ರಿಯ ಮೇಲ್ ಗಾಡಿಗೆ ಡಾಕ್ಟರರೊಡನೆ ಊರಿಗೆ ಹೊರಟುಬಂದೆ.

ನಾನು ಮೈಸೂರಿನಿಂದ ಹಿಂದಿರುಗುವುದನ್ನೇ ಕಾದು ಕಾದು ನಿರಾಸೆಗೊಂಡಿರಬಹುದು ಮೀರಾ.

ಈಗಲೂ ಅವಳಿಗೆ ನನ್ನ ನೆನಪು ಇರಬಹುದೋ ಏನೊ.

ನಾನು ಮಾತ್ರ ಅವಳನ್ನು ಮರೆತಿಲ್ಲ. ಮರೆಯಲು ಸಾಧ್ಯವೂ ಇಲ್ಲ.

ಗುಜರಾತಿ ಹೆಂಗಸರನ್ನು ನೋಡಿದಾಗಲೆಲ್ಲಾ ನನಗೆ ಮೀರಾಳ ನೆನಪು ಬರುತ್ತದೆ. ಅವಳೊಡನೆ ಕಳೆದ ಆ ಎರಡು ದಿನಗಳನ್ನು ಜ್ಞಾಪಿಸಿಕೊಂಡಾಗ ಕರುಳಿನಲ್ಲಿ ಕಲಮಲವಾಗುತ್ತದೆ.

೨೩

# ಬಂಗಾರದ ಬೇಟೆ

ಮತ್ತೆ ಶಿಬಿರಕ್ಕೆ ಬಂದು ನನ್ನ ಕೆಲಸ ಕೈಗೆತ್ತಿಕೊಂಡೆ. ಮತ್ತೆ ಟೈಪ್ ರೈಟರಿನ ಸಹವಾಸ. ಮತ್ತೆ ಪಾರಕ್ಕನ ಖಾನಾವಳಿಯ ಊಟ.

ಅಷ್ಟರಲ್ಲಿ ಬ್ಯಾಂಕ್ ದರೋಡೆಯ ಅಪರಾಧಿಗಳ ಸುಳಿವೂ ತಿಳಿದಿತ್ತು.

ಸುಮಾರು ಇಪ್ಪತ್ತು ಜನ ಚಳವಳಿಗಾರರು ಆ ದರೋಡೆಯಲ್ಲಿ ಭಾಗವಹಿಸಿದ್ದರು. ಸ್ವಾತಂತ್ರ್ಯದ ಹೋರಾಟದಲ್ಲಿ ಉಪಯೋಗಿಸುವ ಉದ್ದೇಶದಿಂದಲೇ ಅವರು ದರೋಡೆ ಮಾಡಿದ್ದರು. ಆದರೆ, ಕಾಂಗ್ರೆಸ್ ನಾಯಕರಿಗೆ ಈ ಕೃತ್ಯ ಒಪ್ಪಿಗೆಯಾಗಿರಲಿಲ್ಲ. ದರೋಡೆ ಮಾಡಿದವರನ್ನೆಲ್ಲ ಅವರು ಖಂಡಿಸಿ, ಹಣವನ್ನೂ ಒಡವೆಗಳನ್ನೂ ಬ್ಯಾಂಕಿಗೆ ಹಿಂದಿರುಗಿಸುವಂತೆ ಸಲಹೆ ಕೊಟ್ಟಿದ್ದರು. ಅಷ್ಟರಲ್ಲಿ, ನಾವು ಪೋಲೀಸರು ಬಂದೂಕು ಹಿಡಿದು ಅವರ ಬೇಟೆಯಾಡಲು ಹೊರಟಿದ್ದುದರಿಂದ ಅವರು ತಲೆ ತಪ್ಪಿಸಿಕೊಂಡಿದ್ದರು. ಅಜ್ಞಾತವಾಸದಲ್ಲಿದ್ದಾಗ ಒಂದೆರಡು ಸಾವಿರದಷ್ಟು ಖರ್ಚಾಗಿ ಹೋಗಿತ್ತು. ಇನ್ನುಳಿದ ಹಣವೂ ಒಡವೆಗಳೂ ಅಲ್ಲಿ ಇಲ್ಲಿ ಕೂಡಿಬಿದ್ದಿದ್ದುವು. ಅವುಗಳನ್ನೆಲ್ಲ ಶೋಧಿಸಿ ವಶಪಡಿಸಿಕೊಳ್ಳಲು ನಾನು ಎರಡು ತಿಂಗಳುಗಳವರೆಗೆ ಕಷ್ಟಪಡಬೇಕಾಯಿತು.

ಬ್ಯಾಂಕಿನಲ್ಲಿ ಒಡವೆಗಳನ್ನಿಟ್ಟಿದ್ದ ಜನರನ್ನು ಬರಮಾಡಿಕೊಂಡು ನಾವು ಜಪ್ತುಮಾಡಿ ತಂದ ಆಭರಣಗಳನ್ನು ತೋರಿಸಿದಾಗ ಅವರೆಲ್ಲರೂ ತಮ್ಮ ತಮ್ಮ ವಸ್ತುಗಳನ್ನು ಗುರುತಿಸಿದರು. ಗುರುತಿಸಲಾಗದ ಆಭರಣವೊಂದು ಉಳಿಯಿತು. ಐದು ಎಳೆಗಳ ಚಿನ್ನದ ಹಾರ. ಅಂಥ ಹಾರವೊಂದನ್ನು ತಾವು ಬ್ಯಾಂಕಿನಲ್ಲಿಟ್ಟಿದ್ದುದಾಗಿಯೂ ಅದು ಏಳು ಎಳೆಗಳದಾಗಿದ್ದುದಾಗಿಯೂ ಒಬ್ಬರು ಹೇಳಿ

ದರು. ಹಾರವೇನೋ ಅದೇ ಆಗಿರಬೇಕು, ಎರಡು ಎಳೆಗಳನ್ನು ಮಾತ್ರ ಯಾರೋ ಹಾರಿಸಿರಬೇಕು ಎಂಬ ಅನುಮಾನ ನಮ್ಮದು.

ಆ ಆಭರಣಗಳನ್ನಿಟ್ಟುಕೊಂಡಿದ್ದ ಐದು ಜನರಲ್ಲಿ ನಾಲ್ವರು ಆಗಲೇ ಸೆರೆಮನೆಯಲ್ಲಿದ್ದರು. ಐದನೆಯವನು ಒಬ್ಬ ಆಯುರ್ವೇದ ಡಾಕ್ಟರು. ಆ ಆಭರಣಗಳನ್ನೆಲ್ಲ ಒಂದು ದಿನ ಅವನಲ್ಲಿಡಲಾಗಿತ್ತು. ಅವನನ್ನು ಹಿಡಿದು ತರಿಸಿ ವಿಚಾರಿಸಿದೆವು. ಆ ವಿಷಯ ತನಗೇನೂ ತಿಳಿಯದೆಂದೇ ಅವನು ಸಾಧಿಸ ತೊಡಗಿದ.

“ನಾನು ಡಾಕ್ಟರ್. ಊರಲ್ಲಿ ಪ್ರಮುಖ. ನಾನು ಇಂಥಾ ಹೇಸಿ ಕೆಲಸ ಯಾಕೆ ಮಾಡೇನು? ಒಂದು ದಿವಸದ ಮಟ್ಟಿಗೆ ಒಡವೆ ಇಟ್ಟುಕೊಳ್ಳಿರಿ ಅಂತ ಇವರು ಹೇಳಿದ್ದಕ್ಕೆ ಇಟ್ಟುಕೊಂಡಿದ್ದೆನಷ್ಟೆ. ನಾನು ಅದನ್ನು ಮುಟ್ಟಲ್ಲ ಕೂಡ.”

“ನಿಮ್ಮ ಹೊರತು ಯಾರೂ ಆ ಎಳೆ ಮುಟ್ಟಿಲ್ಲ,” ಎಂಬವನೇ ಹವಾಲ್ದಾರ್ ಸಿಂಗಪ್ಪ ಡಾಕ್ಟರರನ್ನು ಹಿಡಿದು ಎರಡು ಏಟು ಹಾಕಿದ.

ಆಗ ಹೊರಬಿತ್ತು ಸತ್ಯಸಂಗತಿ. ಒಡವೆಗಳು ತನ್ನ ಮನೆಯಲ್ಲಿದ್ದಾಗ ಒಬ್ಬ ಅಕ್ಕಸಾಲಿಗನನ್ನು ಹಿಡಿದು ಹಾರದ ಎಳೆಗಳನ್ನು ಕತ್ತರಿಸಿ ಆ ಚಿನ್ನದಿಂದ ಉಂಗುರ ಮಾಡಿಸಿದ್ದುದಾಗಿ ಅವನು ಹೇಳಿದ.

ತಕ್ಷಣವೆ ಅವನನ್ನು ಕರೆದುಕೊಂಡು ಮೋಟಾರಿನಲ್ಲಿ ಅವನ ಊರಿಗೆ ಬಂದೆವು. ನಮ್ಮನ್ನು ದೂರದಲ್ಲಿಯೆ ನೋಡಿದ್ದ ಅವನ ಹೆಂಡತಿ ಆ ಉಂಗುರ ಗಳನ್ನು ದನದ ಹಕ್ಕೆಯಲ್ಲಿ ಎಮ್ಮೆಯ ಮೂತ್ರದಲ್ಲಿ ಎಸೆದುಬಿಟ್ಟಿದ್ದಳು. ಉಂಗುರಗಳನ್ನು ತಂದುಕೊಡುವಂತೆ ಡಾಕ್ಟರು ಹೇಳಿದರೂ ಅವಳು, “ಎಲ್ಲಿಯ ಉಂಗುರ? ನನಗೇನು ಗೊತ್ತು?” ಎನ್ನತೊಡಗಿದಳು. ಬಂಗಾರವೆಂದರೆ ಎಲ್ಲರಿಗೂ ಆಸೆಯಲ್ಲವೆ?

ಆದರೂ, ನಾವು ಸಿಟ್ಟುಗೊಂಡವರಂತೆ ನಟಿಸುತ್ತಾ ಅವಳನ್ನೂ ಬಂಧಿಸಿ ಕೊಂಡು ಹೋಗುವುದಾಗಿ ಬೆದರಿಸುತ್ತಲೂ ಇನ್ನೂ ಗರ್ಭಿಣಿಯವಳಾಗಿದ್ದ ಆಕೆ ಅಂಜಿಕೊಂಡು ಮೂತ್ರದಲ್ಲಿ ಬಿದ್ದುಕೊಂಡಿದ್ದ ಉಂಗುರಗಳನ್ನು ತೆಗೆದು ಕೊಟ್ಟಳು.

“ಅಬ್ಬ! ಬುದ್ಧಿಯೇ! ನಿಮಗಿಂತ ನಿಮ್ಮ ಹೆಂಡತಿಯೇ ಜಾಣಳಿದ್ದಾಳೆ ನೋಡಿರಿ ಡಾಕ್ಟರರೇ!” ಎಂದು ಸಿಂಗಪ್ಪ ಹಾಸ್ಯಮಾಡಿದ.

ಉಂಗುರಗಳನ್ನು ಜಪ್ತುಮಾಡಿ, ಡಾಕ್ಟರರನ್ನೂ ಬಂಧಿಸಿ, ಶಿಬಿರಕ್ಕೆ ಮರಳಿದೆವು.

ಆದರೆ, ಮುಖ್ಯ ಅಪರಾಧಿಗಳಿಬ್ಬರು ಮಾತ್ರ ಇನ್ನೂ ಸಿಕ್ಕಿಬಿದ್ದಿರಲಿಲ್ಲ. ಅವರನ್ನು ಶೋಧಿಸದೆ ನಮ್ಮ ಕೆಲಸ ಮುಗಿಯುವಂತಿರಲಿಲ್ಲ. ಇನ್ನೂ ಎರಡು ಮೂರು ದರೋಡೆಗಳನ್ನೂ ನಾವು ಶೋಧಿಸುವುದಿತ್ತು. ನಮ್ಮ ಸುದ್ದಿಗಾರರು ಅಲ್ಲಿ ಇಲ್ಲಿ ಅಲೆಯುತ್ತಿದ್ದರು.

ಪೋಲೀಸರ ಸುದ್ದಿಗಾರರದೂ ಒಂದು ವೈಶಿಷ್ಟ್ಯವೇ ಇರುತ್ತದೆ. ಹಿಂದೆ ಅವರೂ ಕಳವು ದರೋಡೆ ಮಾಡಿದವರೇ ಆಗಿರುತ್ತಾರೆ. ಅಂತೆಯೆ, ಅವರಿಗೆ ಕಳ್ಳರೆಲ್ಲರ ಪರಿಚಯವೂ ಇರುತ್ತದೆ. ಅಂಥ ಗುರುತಿನ ಕಳ್ಳರನ್ನೆಲ್ಲ ಕಂಡು, ಅವರಿಗೆ ಚಹಾ, ಸೇಂದಿ, ಸೆರೆ, ಬೀಡಿ ಕೊಟ್ಟು ಉಪಚರಿಸಿ, ಮಾತಿಗೆ ಮಾತು ಬೆಳೆಸಿ ತಮಗೆ ಬೇಕಾದ ಮಾಹಿತಿ ದೊರಕಿಸುವುದರಲ್ಲಿ ಈ ಸುದ್ದಿಗಾರರು ನಿಪುಣರು. ಅವರು ಸುದ್ದಿ ತಿಳಿಸಿದರೆ ಮಾತ್ರ ನಾವು ಮುಂದಿನ ಕ್ರಮ ಕೈಗೊಳ್ಳಲು ಸಾಧ್ಯವಾಗುವುದು.

ಮತ್ತೊಂದು ತಿಂಗಳು ಹಳ್ಳಿ ಪಳ್ಳಿ ಸುತ್ತಿದ ತರುವಾಯ ನಮ್ಮ ಕೆಲಸ ಮುಕ್ಕಾಲು ಭಾಗ ಪೂರ್ತಿಯಾದಂತಾಯಿತು. ಬ್ಯಾಂಕಿನ ದರೋಡೆಯ ಶೋಧ ವಂತೂ ಎಂದೋ ಮುಗಿದುಹೋಗಿತ್ತು. ಡಿ. ಎಸ್. ಪಿ. ಯವರು ವಚನವಿತ್ತ ಮೇರೆಗೆ ನನಗೆ ಬಡ್ತಿ ದೊರೆಯುವುದನ್ನೇ ನಾನು ಕಾಯುತ್ತಿದ್ದೆ.

‘ಕ್ಯಾಂಪಿನ ಕ್ಯಾಶಿಯರ್’ ನಿಂಗಪ್ಪನಿಗೆ ಮಾತ್ರ ಬಡ್ತಿಯ ಬಗೆಗೆ ಅನುಮಾನವೇ ಇರಲಿಲ್ಲ. ನಾವು ಅಲ್ಲಿ ಬಿಡಾರ ಹೂಡಿದ ಆರು ತಿಂಗಳುಗಳಲ್ಲಿ ಆತ ಹತ್ತು ಹನ್ನೆರಡು ಸಾವಿರ ರೂಪಾಯಿಗಳಷ್ಟು ಹಣ ಗಂಟುಹಾಕಿದ್ದ. ಫೌಜದಾರರಿಗೂ ಮೂವತ್ತು ನಲವತ್ತು ಸಾವಿರದವರೆಗೂ ದೊರಕಿಸಿಕೊಟ್ಟಿದ್ದ. ಸಮಯ ಸಾಧಿಸಿ, ಯಾರಿಗೂ ಗೊತ್ತಾಗದಂತೆ ಓರೆಕೋರೆಗೆ ಹೋಗಿ, ಡಿ. ಎಸ್. ಪಿ. ಆಫೀಸಿನ ಕಾರಕೂನನಿಗೆ ಸಾವಿರ ರೂಪಾಯಿ ಲಂಚ ತೆತ್ತು ತನ್ನ ಬಡ್ತಿಯನ್ನು ಸ್ಥಿರಗೊಳಿಸಿಕೊಂಡು ಬಂದಿದ್ದ. ಅಂದಬಳಿಕ ನಿಂಗಪ್ಪನಿಗೇನು ಚಿಂತೆ?

ಕಲ್ಲನಗೌಡ ಮತ್ತು ಪುಟ್ಟಪ್ಪ ಹವಾಲ್ದಾರರು ದರೋಡೆಯ ಶೋಧದಲ್ಲಿ ಘಂಬಾ ಶ್ರಮವಹಿಸಿ ದುಡಿದವರು. ನಿಂಗಪ್ಪ ಖಜಾಂಚಿಯಾಗಿದ್ದನೇ ವಿನಾ

ಯಾವ ಕೆಲಸವನ್ನೂ ಮಾಡಿರಲಿಲ್ಲ. ಅಂಥವನಿಗೆ ಬಡ್ತಿ ಸಿಕ್ಕು ತಮಗೆ ಸಿಕ್ಕುವ ಭರವಸೆಯಿಲ್ಲವೆಂದಾಗ ಕಲ್ಲನಗೌಡನಿಗೂ ಪುಟ್ಟಪ್ಪನಿಗೂ ಸ್ವಾಭಾವಿಕವಾಗಿಯೆ ಕೋಪ ಬಂದಿತು.

"ಕಾರಕೂನನಿಗೆ ರೂಪಾಯಿ ಕೊಟ್ಟು ನೀನೊಬ್ಬ ಬಡ್ತಿ ಹೊಡೆದು ಕೊಂಡಿ. ನಮಗೆ ಪರಟೆ ಕೊಟ್ಟಿ!" ಎಂದು ಕೂಗಿಕೊಂಡ ಪುಟ್ಟಪ್ಪ.

"ನಾನು ರೂಪಾಯಿ ಕೊಟ್ಟರೆ ನಿನಗೇನು! ನೀನೂ ಕೊಡು ಹೋಗು ಬೇಕಾದರೆ!" ಎಂದ ನಿಂಗಪ್ಪ.

"ಇಲ್ಲಿ ಸಿಕ್ಕ ರೂಪಾಯಿ ನಮಗೆ ಕೊಡದೆ ನೀನೇ ನುಂಗಿ ಕಾರಕೂನನಿಗೆ ಕೊಟ್ಟು ಹೀಗೆ ಮಾತಾಡುತೀಯಾ!" ಎಂದ ಪುಟ್ಟಪ್ಪ.

"ನನ್ನ ಹೆಂಡತಿಯ ಕೈಯಾಗಿನ ಬಂಗಾರದ ಬಳೆ ಮಾರಿ ರೂಪಾಯಿ ಕೊಟ್ಟದ್ದೀನಿ," ಎಂದ ನಿಂಗಪ್ಪ.

"ಯಾರ ಅಂಗಡಿಯೊಳಗೆ ಮಾರಿದ್ದೀ ಹೇಳು," ಎಂದ ಪುಟ್ಟಪ್ಪ.

ಆ ಪ್ರಶ್ನೆಗೆ ನಿಂಗಪ್ಪನಿಂದ ಸಮರ್ಪಕ ಉತ್ತರ ಬರಲಿಲ್ಲ.

ಪುಟ್ಟಪ್ಪ ಅಷ್ಟಕ್ಕೇ ಬಿಡದೆ ಓರೆಕೋರೆ ನಗರಕ್ಕೆ ಹೋಗಿ, ನಿಂಗಪ್ಪನ ಸ್ನೇಹಿತನಾಗಿದ್ದ ಸರಾಫಿ ಅಂಗಡಿಯವನೊಬ್ಬನನ್ನು ವಿಚಾರಿಸಿದಾಗ, ನಿಂಗಪ್ಪ ಅವನ ಹತ್ತಿರ ಇಪ್ಪತ್ತು ತೊಲ ಬಂಗಾರ ಖರೀದಿ ಮಾಡಿದ್ದುದೂ, ನಾಲ್ಕು ಸಾವಿರ ರೂಪಾಯಿ ನಗದು ಹಣವನ್ನು ಠೇವು ಇಟ್ಟಿದ್ದುದೂ ಗೊತ್ತಾಯಿತು.

ಪುಟ್ಟಪ್ಪನಿಗೂ ನಿಂಗಪ್ಪನಿಗೂ ಭಾರಿ ವ್ಯಾಜ್ಯ ನಡೆಯಿತು. ನಾನು ಮಾತ್ರ ಅದರಲ್ಲಿ ಭಾಗವಹಿಸಲಿಲ್ಲ. ಊಟ ಮತ್ತು ಚಹದ ಖರ್ಚು ಕಳೆದರೆ ಸಾಕೆನ್ನಿಸಿತ್ತು ನನಗೆ.

ಪುಟ್ಟಪ್ಪ, ಕಲ್ಲನಗೌಡ, ರಸೂಲ್‌ಸಾಹೇಬ್ ಮೂವರೂ ಸೇರಿ ಅವ ರಿವರನ್ನು ಹಿಡಿದು ಬೆದರಿಸಿ ನೂರಿನ್ನೂರು ರೂಪಾಯಿ ಕಿತ್ತುಕೊಂಡು ತಮಗೂ ತಮ್ಮ ಮಕ್ಕಳುಮರಿಗಳಿಗೂ ಬಟ್ಟೆಬರೆ ಮಾಡಿಸಿಕೊಂಡರು. ನನ್ನ ಮೈಮೇಲಿನ ಬಟ್ಟೆಗಳೆಲ್ಲ ಹರಿದು ಹೋಗಿದ್ದುವು. ಒಂದು ಕೋಟು ಹೊಲಿಸಿಕೊಳ್ಳುವುದಕ್ಕೂ ಕಾಸಿರಲಿಲ್ಲ ನನ್ನ ಹತ್ತಿರ. ನನ್ನ ಆ ದಾರಿದ್ರ್ಯವನ್ನು ಕಂಡು ಜನರಿಗೆಲ್ಲ ಅಚ್ಚರಿ ಯಾಗುತ್ತಿತ್ತು.

"ಎನ್ರೀ, ಹೀಗಿದ್ದೀರಿ? ಬ್ಯಾಂಕಿನ ಲೂಟಿ ತಪಾಸಣೆಗೆ ಹೋಗಿ ಆ

ಭಾಗವನ್ನೆಲ್ಲಾ ಲೂಟಿ ಮಾಡಿ ಒಬ್ಬೊಬ್ಬ ಪೋಲೀಸರೂ ಹತ್ತು ಹತ್ತು ಸಾವಿರ ಗಳಿಸಿದ್ದೀರಿ ಅಂತ ಸುದ್ದಿಯಾಗಿದೆಯಲ್ಲ. ನೀವ್ಯಾಕೆ ಹೀಗಿದ್ದೀರಿ?" ಎನ್ನುವರು ಜನ.

ನಾನು ಸ್ವಲ್ಪ ನಕ್ಕು ಸುಮ್ಮನಾಗುತ್ತಿದ್ದೆ. ಹತ್ತು ಸಾವಿರದ ಮಾತು ಹಾಗಿರಲಿ, ಹತ್ತು ರೂಪಾಯಿ ಕೂಡಾ ಇರಲಿಲ್ಲ ನನ್ನ ಹತ್ತಿರ.

ನಾವು ಹೊರಡಬೇಕಾದ ದಿನವೂ ಬಂದಿತು. ಫೌಜದಾರರು ನನ್ನನ್ನು ಕರೆದು ನೂರು ರೂಪಾಯಿಗಳದೊಂದು ನೋಟನ್ನು ನನ್ನ ಕೈಯಲ್ಲಿಟ್ಟು,

"ನೀವು ಆರು ತಿಂಗಳು ಬಹಳ ಕಷ್ಟಪಟ್ಟಿದ್ದೀರಿ. ನೀವು ಇರದಿದ್ದರೆ ನನಗೆ ಬಹಳ ತೊಂದರೆಯಾಗುತ್ತಿತ್ತು. ಬಹಳ ಸಹಾಯ ಮಾಡಿದಿರಿ," ಎಂದು ಉಪಚಾರದ ಮಾತನ್ನಾಡಿದರು.

ಓರೆಕೋರೆಗೆ ಬಂದು, ತಾಯಿಗೂ ಹೆಂಡತಿಗೂ ಸೀರೆಗಳನ್ನೂ ಜಯಣ್ಣ ನಿಗೆ ಕೋಟಿನ ಬಟ್ಟೆಯನ್ನೂ ತೆಗೆದುಕೊಂಡು ತೊಂಡೇಬಾವಿಯ ಹಾದಿ ಹಿಡಿದೆ. ಹದಿನೈದು ದಿನಗಳವರೆಗೆ ನಮಗೆ ವಿಶ್ರಾಂತಿಯ ರಜೆ ಕೊಡುವಂತೆ ಡಿ.ಎಸ್.ಪಿ. ಯವರು ಆಜ್ಞೆ ಮಾಡಿದ್ದರು.

ಈ ಮಧ್ಯೆ ಹಳಗೇರಿ ಫೌಜದಾರರಿಗೆ ತೊಂಡೇಬಾವಿಯಿಂದ ಬೇರೆಡೆಗೆ ವರ್ಗವಾಗಿತ್ತು. ಅವರ ಸ್ಥಳಕ್ಕೆ ಹೊಸಬರೊಬ್ಬರು ಬಂದಿದ್ದರು.

ಕೆಲದಿನಗಳಲ್ಲಿಯೇ ನನಗೂ ಅಲ್ಲಿಂದ ವರ್ಗವಾಯಿತು. ಪರಿವಾರ ದವರನ್ನೆಲ್ಲ ಕರೆದುಕೊಂಡು ತೊಂಡೇಬಾವಿಯನ್ನು ತ್ಯಜಿಸಿ ಹುಂಬದೂರಿಗೆ ಹೊರಟೆ.

೨೪

## ಇನ್ಸ್‌ಪೆಕ್ಟರ್ - ಫೌಜದಾರರ ತಿಕ್ಕಾಟ

ಹುಂಬರೂರಿಗೆ ಬರಲು ನನಗೆ ಸ್ವಲ್ಪವೂ ಇಚ್ಛೆಯಿರಲಿಲ್ಲ. ತೊಂಡೇಬಾವಿಯಂತೆ ಅದು ಚಿಕ್ಕ ಊರಲ್ಲ. ಓರೆಕೋರೆ ಜಿಲ್ಲೆಯಲ್ಲಿನ ದೊಡ್ಡ ನಗರಗಳಲ್ಲಿ ಹುಂಬರೂರೂ ಒಂದು. ಅದರ ಹೆಸರಿಗೆ ತಕ್ಕ ಹಾಗೆ ಅಲ್ಲಿನ ಜನರೂ ಬಹಳ ಹುಂಬರು. ಸುಶಿಕ್ಷಿತರು ಮತ್ತು ಸುಸಂಸ್ಕೃತರು ಅಲ್ಲಿ ವಿರಳ. ಅಸಂಸ್ಕೃತರ ಸಂಖ್ಯೆಯೇ ವಿಪರೀತ. ಅಲ್ಲಿಯ ವ್ಯಾಪಾರವೆಂದರೆ ಮುಖ್ಯವಾಗಿ ಕಳ್ಳವ್ಯಾಪಾರ. ಅಂಥ ನಗರದಲ್ಲಿ, ಮೂವತ್ತು ರೂಪಾಯಿಗಳ ಸಂಬಳದಿಂದ ಜೀವ ಹಿಡಿದುಕೊಂಡಿರುವುದು ಬಹಳ ಕಷ್ಟ. ಆದರೇನು ಮಾಡುವುದು ವರ್ಗ ಮಾಡುವ ಅಧಿಕಾರಿಗಳು ಬಡ ಪೋಲೀಸರ ಕಷ್ಟ ದುಃಖಗಳನ್ನು ಕುರಿತು ಯೋಚಿಸುವುದುಂಟೇ ?

ಹುಂಬರೂರಿಗೆ ಬಂದು ಸೇರಿ, ಪೋಲೀಸ್ ವಠಾರದಲ್ಲಿನ ಮನೆಯೊಂದರಲ್ಲಿ ತಳವೂರಿದುದಾಯಿತು. ಪೋಲೀಸ್ ಕಚೇರಿಯಲ್ಲಿ ಅಪರಾಧಗಳ ದಪ್ತರಿನ ಗುಮಾಸ್ತೆಯೆಂದು ನನ್ನನ್ನು ನೇಮಿಸಲಾಯಿತು. ಕೆಲಸವಷ್ಟೇ ಗುಮಾಸ್ತೆಯದು, ದರ್ಜೆ ಮಾತ್ರ ಶಿಪಾಯಿಯದೇ. ಎರಡು ರೂಪಾಯಿ ಭತ್ತೆ ಸಿಕ್ಕುತ್ತಿದ್ದಿತಷ್ಟೆ. ಅಂಥ ಮಹಾನಗರದಲ್ಲಿ ಆ ಎರಡು ರೂಪಾಯಿ ಯಾವ ಖರ್ಚಿಗಾಗಬೇಕು ?

ಅಲ್ಲಿಯ ಫೌಜದಾರರು ಒಳ್ಳೆಯವರಾಗಿದ್ದುದೊಂದು ಸಮಾಧಾನದ ಸಂಗತಿಯಾಗಿತ್ತು. ಅವರೂ ಲಿಂಗವಂತ ಮತದವರು. ಅಪ್ಪಣ್ಣವರ್ ಎಂದು ಅವರ ಹೆಸರು.

ಕೆಲಸಕ್ಕೆ ಹಾಜರಾದ ದಿನವೇ ನಾನು ಅವರ ಮನೆಗೆ ಹೋಗಿ, ನಮಸ್ಕರಿಸಿ, ವರದಿಯೊಪ್ಪಿಸಿದೆ. ಅವರು ನನ್ನನ್ನು ಹಸನ್ಮುಖದಿಂದ ಬರಮಾಡಿಕೊಂಡು, ನನ್ನ ಯೋಗಕ್ಷೇಮ ವಿಚಾರಿಸಿದರು.

"ನಿನ್ನ ಬಗ್ಗೆ ಸಾಕಷ್ಟು ಕೇಳಿದ್ದೀನಿ. ನಿನ್ನಿಂದ ನಮ್ಮ ಕಚೇರಿಯ ಕೆಲಸ ಸರಿಯಾಗಿ ನಡೆಯಬಹುದೆಂಬ ನಂಬಿಗೆಯಿದೆ. ಹಿಂದಿನ ಕಾರಕೂನ ಲಂಚ ತಿನ್ನುವ ಆಸೆಗೆ ಬಿದ್ದು ಆಫೀಸಿನ ಕೆಲಸದ ಕಡೆಗೇ ಲಕ್ಷ್ಯಕೊಡದೆ ಬಹಳ ಕೆಲಸ ಬಾಕಿ ಇಟ್ಟಿದ್ದಾನೆ. ಅದನ್ನು ಸರಿಪಡಿಸಿಕೊಂಡು ನಿನ್ನ ಕೆಲಸ ಮಾಡು. ನನಗೂ ಸ್ವಲ್ಪ ವಿಶ್ರಾಂತಿ ಬೇಕಾಗಿದೆ."

"ಹಾಗೇ ಮಾಡುತ್ತೀನಿ ರಾವ್‌ಸಾಹೇಬರೆ," ಎಂದು ಹೇಳಿ ಅವರನು ಬೀಳ್ಕೊಂಡು ಹೊರಟೆ.

ಅನಂತರ ಒಂದು ವಾರ ಅವರನ್ನು ನಾನು ಕಾಣಲೇ ಇಲ್ಲ. ಕಚೇರಿ, ಮನೆ ಎರಡನ್ನು ಬಿಟ್ಟು ನಾನೆಲ್ಲಿಗೂ ಹೋಗುವಂತಿರಲಿಲ್ಲ. ಅಷ್ಟರೊಳಗಾಗಿ ನನ್ನ ಹತ್ತಿರವಿದ್ದ ಹಣವೆಲ್ಲ ಖರ್ಚಾಗಿ ಹೋಗಿತ್ತು. ಸಂಬಳ ಬರುವ ದಿನವೂ ಇನ್ನೂ ದೂರವಿತ್ತು. ಆ ನಗರದಲ್ಲಿ ಸಾಲ ಸಿಕ್ಕುವಂತೆಯೂ ಇರಲಿಲ್ಲ. ನಾನು ಆ ಊರಿಗೆ ಹೊಸಬ. ಯಾರ ಪರಿಚಯವೂ ಇರಲಿಲ್ಲ. ಸಾಲ ಕೇಳುವು ದಾದರೂ ಯಾರನ್ನು? ಅಂತೂ ಪೀಕಲಾಟದ ಪ್ರಸಂಗವೇ ಬಂದೊದಗಿತ್ತು.

ಮನೆಯಲ್ಲಿ ಒಂದು ಹೊತ್ತು ಉಪವಾಸವಾದರೂ ನಡೆಯಬಹುದಾಗಿತ್ತು. ಆದರೆ, ತಮ್ಮಂದಿರಿಬ್ಬರನ್ನೂ ಹೈಸ್ಕೂಲಿಗೆ ಸೇರಿಸಲು ಇಪ್ಪತ್ತು ರೂಪಾಯಿ ಗಳನ್ನು ಹೇಗಾದರೂ ಮಾಡಿ ಒದಗಿಸಿಕೊಳ್ಳಬೇಕಾಗಿತ್ತು. ಉಪಾಯಗಾಣದೆ ಎರಡು ದಿನ ಯೋಚಿಸಿದ್ದಾಯಿತು. ಕೊನೆಗೆ, ನನ್ನ ಹೆಂಡತಿಯ ನಡುವಿನ ಪಟ್ಟಿ, ಬೆಳ್ಳಿಯ ಚೈನು, ನನ್ನ ಕೈಯಲ್ಲಿಯ ಉಂಗುರ ಮಾರಿ ಹುಡುಗರನ್ನು ಶಾಲೆಗೆ ಸೇರಿಸಬೇಕಾಗಿ ಬಂದಿತು. ಅವರಿಬ್ಬರಿಗೂ ಫೀಜು ಮಾಫಿಯಾಗ ಬೇಕೆಂದು ಅರ್ಜಿ ಹಾಕಿದರೂ, ಅಲ್ಲಿಯ ನಗರಸಭೆಯ ಸದಸ್ಯರ ಹೊಲಸು ರಾಜಕೀಯ ಹೈಸ್ಕೂಲಿನಲ್ಲಿಯೂ ಪ್ರಭಾವ ಬೀರಿದ್ದುದರಿಂದ ಮಾಫಿಯಾಗುವ ಆಸೆಯೂ ವಿಫಲವಾಯಿತು. ಅವರಿಬ್ಬರ ಫೀಜು ತಿಂಗಳಿಗೆ ಎಂಟು ರೂಪಾಯಿ. ಆಗ ನನಗೆ ಸಿಗುತ್ತಿದ್ದ ಸಂಬಳ ಮೂವತ್ತಾರು ರೂಪಾಯಿ. ಫೀಜು ಕೊಟ್ಟು ಉಳಿದ ಇಪ್ಪತ್ತೆಂಟು ರೂಪಾಯಿಗಳಲ್ಲಿ ಕಟ್ಟಿಗೆಗಾಗಿ ಐದು ರೂಪಾಯಿ, ಹಾಲು

ಮೊಸರು ಬೆಣ್ಣೆಗಳಿಗಾಗಿ ಆರು ರೂಪಾಯಿ, ಆಹಾರ ಧಾನ್ಯಗಳಿಗಾಗಿ ಹದಿನಾರು ರೂಪಾಯಿ; ಎಣ್ಣೆ, ಉಪ್ಪು ಇತ್ಯಾದಿ ಚಿಲ್ಲರೆ ಸಾಮಾನುಗಳಿಗೆ ಹಣ ಸಾಲು ತ್ತಿರಲಿಲ್ಲ. ಇನ್ನು ಚಹದ ಪುಡಿ, ಸಕ್ಕರೆ, ಬಟ್ಟೆ ಬರೆ, ಕಾಯಿಲೆ ಕಸಾಲೆ ಬಂದಾಗ ಔಷಧಿ? ಅಂತೂ ಅಲ್ಲಿಗೆ ಬಂದ ಒಂದು ತಿಂಗಳಿನೊಳಗಾಗಿ ನನಗೆ ಆ ನಗರದ ಬಗೆಗೆ ಭಯವಾಗತೊಡಗಿತು. ಮನೆಯಲ್ಲಿದ್ದ ಬೆಳ್ಳಿ ಬಂಗಾರ ವೆಲ್ಲವೂ ಕೈಬಿಟ್ಟು ಹೋಗಿತ್ತು. ಮುಂದೆ ಹೇಗೆ? ಎಂಬ ಪ್ರಶ್ನೆ ನನ್ನನ್ನು ಯಾವಾಗಲೂ ಕಾಡತೊಡಗಿತು.

"ನೀನೇನೂ ಚಿಂತೆ ಮಾಡಬ್ಯಾಡಪ್ಪಾ. ದೇವರಿದ್ದಾನ. ಇಲ್ಲಿ ಹೊಟ್ಟೆ ತುಂಬದಿದ್ದರ ಊರಿಗೆ ಹೋಗಿ ಕೂಲೀಮಾಡಿ ತಿಂದರಾತು," ಎಂದು ತಾಯಿ ಧೈರ್ಯ ತುಂಬುತ್ತಿದ್ದಳು.

ಗೊಬ್ಬೂರಿನಲ್ಲಿ ಕೆಲವು ದಿನ ನನ್ನೊಡನೆ ಕೆಲಸಮಾಡಿದ್ದ ಸಂಗಪ್ಪನೂ ಆಗ ಹುಂಬರೂರಿನಲ್ಲಿದ್ದ. ಅವನು ನೋಡಿಕೊಳ್ಳುತ್ತಿದ್ದುದು ಬಸ್ಸುಗಳ ಮೇಲ್ವಿ ಚಾರಣೆ. ಸಂಗಪ್ಪನಿಗೆ ಸಾಕಷ್ಟು ದುಡ್ಡು ಸಿಗುತ್ತಿತ್ತು. ಅವನು ಗೊಬ್ಬೂರಿ ನಲ್ಲಿದ್ದಾಗ ನಾನು ಎಷ್ಟೋಬಾರಿ ಅವನಿಗೆ ಅನೇಕ ಸಂದರ್ಭಗಳಲ್ಲಿ ನೆರವಾಗಿದ್ದು ದನ್ನು ಅವನು ಮರೆತಿರಲಿಲ್ಲ. ನಾನು ಹುಂಬರೂರಿಗೆ ಬಂದ ಬಳಿಕ ನನ್ನ ಕಷ್ಟವನ್ನು ಕಂಡು ಆಗಾಗ ಅಲ್ಪಸ್ವಲ್ಪ ಸಹಾಯ ಮಾಡತೊಡಗಿದ. ಮನೆ ಯಲ್ಲಿನ ಕಾಳು ಮುಗಿದು ಹೋದಾಗ ಸಾಲ ಮಾಡುವ ಅನಿವಾರ್ಯ ಪ್ರಸಂಗ ಬರುತ್ತಿತ್ತು. ಅಂಥ ಸಂದರ್ಭಗಳಲ್ಲೆಲ್ಲ ಸಂಗಪ್ಪ ಹತ್ತಿಪ್ಪತ್ತು ರೂಪಾಯಿ ಕೊಡುತ್ತಿದ್ದ. ಅಂತೂ ಅವನದೊಂದು ಆಧಾರವೇ ಆದಂತಾಯಿತು ನನಗೆ.

ಹುಂಬರೂರಿನಲ್ಲಿ ಎದ್ದು ಕಾಣುತ್ತಿದ್ದುದು ಕೇವಲ ಎರಡು ವರ್ಗಗಳು. ವ್ಯಾಪಾರಸ್ಥರು, ಗಿರಣಿಯೊಡೆಯರು, ಮೋಟಾರು ಕಂಪನಿಗಳ ಒಡೆಯರೇ ಮೊದಲಾದ ಶ್ರೀಮಂತರದು ಒಂದು ವರ್ಗ; ಈ ಶ್ರೀಮಂತರನ್ನು ಶ್ರೀಮಂತ ರನ್ನಾಗಿ ಮಾಡಲು ಹಗಲಿರುಳೂ ದುಡಿಯುತ್ತಿದ್ದ ಕೂಲಿಕಾರರದು ಇನ್ನೊಂದು ವರ್ಗ. ಮಧ್ಯಮವರ್ಗವೇ ಅಲ್ಲಿ ಇರಲಿಲ್ಲವೆನ್ನಬಹುದು. ನಮ್ಮಂಥ ಸರಕಾರಿ ನೌಕರರೂ ಮಧ್ಯಮವರ್ಗದವರೇ ಎಂದು ಯಾರಾದರೂ ವಾದಿಸಿದರೆ ನಮ್ಮ ಆದಾಯ ವೆಚ್ಚಗಳ ಪಟ್ಟಿಯನ್ನು ಮುಂದಿಟ್ಟು ಅವರ ಬಾಯಿ ಮುಚ್ಚಿಸ

ಬಹುದು. ನಾವು ಸಂಪಾದಿಸಿದ ಹಣ ನಮ್ಮ ಹೊಟ್ಟೆಗೇ ಸಾಲುತ್ತಿರಲಿಲ್ಲ. ಹಾಗಿರುತ್ತ, ಕೂಲಿಕಾರರಿಗೂ ನಮಗೂ ಏನು ವ್ಯತ್ಯಾಸ?

ಶ್ರೀಮಂತರಿಗಾದರೋ ಹಗಲಿರುಳೂ ದುಡ್ಡಿಗೆ ದುಡ್ಡು ಕೂಡಿಸುವ ಹವ್ಯಾಸ. ಬಡವರಿಗಾದರೋ ಹೊಟ್ಟೆ ಹೊರೆಯುವ ಹವ್ಯಾಸ. ಅಂತೆಯೆ, ಆ ಊರಿನಲ್ಲಿ ಅಪರಾಧಗಳು ಸಂಭವಿಸುತ್ತಿದ್ದುದು ಬಹಳ ವಿರಳ. ನಾನು ಕಾರಕೂನನಾಗಿದ್ದುದು ಅಪರಾಧಗಳ ದಪ್ತರಿನಲ್ಲಿ. ಗೊಬ್ಬೂರಿನಂಥ ನಗರದಲ್ಲಾದರೆ ಅಪರಾಧಗಳ ದಪ್ತರಿನ ಕಾರಕೂನನಿಗೆ ಹಣದ ಕೊರತೆಯಾಗಲಾರದು. ಹುಂಬರೂರಿನಲ್ಲಿ ಅಪರಾಧಗಳೇ ಕಡಮೆಯಿರುವಾಗ ನನಗೆ ದುಡ್ಡು ಸಿಗುವುದಾದರೂ ಹೇಗೆ? ಎಂದಾದರೊಮ್ಮೆ ಚಿಕ್ಕಪುಟ್ಟ ಕಳ್ಳತನದ ಪ್ರಕರಣಗಳು ನಡೆಯುತ್ತಿದ್ದುವು. ಆ ಕಳ್ಳರೆಲ್ಲರೂ ಸಾಮಾನ್ಯವಾಗಿ ದಟ್ಟದರಿದ್ರರು. ಅಂಥವರಿಂದ ನಮಗೆ ಹಣ ಸಿಕ್ಕುವುದೂ ಸಾಧ್ಯವಿರಲಿಲ್ಲ.

ಸಂಗಪ್ಪನಿಗೆ ಮಾತ್ರ ಬಸ್ಸುಗಳ ಒಡೆಯರಿಂದ ಪ್ರತಿ ತಿಂಗಳೂ ಎರಡು ಮೂರು ನೂರು ರೂಪಾಯಿ ಸಿಗುತ್ತಿತ್ತು. ಅದರಲ್ಲಿ ಸ್ವಲ್ಪ ಹಣವನ್ನು ಫೌಜದಾರರಿಗೆ ಸಲ್ಲಿಸಿ, ಉಳಿದುದನ್ನು ಹತ್ತಿರ ಇಟ್ಟುಕೊಂಡು, ಇನ್ಸ್‌ಪೆಕ್ಶನ್ನಿಗಾಗಿ ಬಂದು ಹೋಗುವ ಮೇಲಾಧಿಕಾರಿಗಳ ಸರಬರಾಜು ನೋಡಿಕೊಳ್ಳುತ್ತಿದ್ದ ಸಂಗಪ್ಪ. ತಿಂಗಳಿಗೊಂದು ಹೊಸ ಚಿನ್ನದ ಉಂಗುರ ಮೆರೆಯುತ್ತಿತ್ತು ಅವನ ಕೈಯಲ್ಲಿ. ಅವನ ರೇಶಿಮೆಯ ಶರ್ಟು, ಉಲ್ಲನ್ ಕೋಟುಗಳಿಗಂತೂ ಲೆಕ್ಕವೇ ಇರಲಿಲ್ಲ. ನನಗೆ ಮಾತ್ರ ತೊಟ್ಟುಕೊಳ್ಳಲು ಮತ್ತೊಂದು ಕೋಟು ಕೂಡ ಇರಲಿಲ್ಲ.

ನನ್ನ ದಪ್ತರಿಗೂ ಹಿಂದಿನಿಂದ ನಡೆದುಕೊಂಡು ಬಂದ ಕೆಲವು 'ಮಾಮೂಲು' ಇದ್ದುವಂತೆ. ನನಗಿಂತ ಮೊದಲು ಆ ದಪ್ತರು ನೋಡಿಕೊಳ್ಳುತ್ತಿದ್ದ ಕಾರಕೂನ ಯಾವಾಗಲೂ ಈ 'ಮಾಮೂಲು' ವಸೂಲು ಮಾಡುತ್ತ ಅಲ್ಲಿ ಇಲ್ಲಿ ಅಲೆಯುತ್ತಿದ್ದು ಕಚೇರಿಯ ಕೆಲಸವನ್ನು ಕಡೆಗಣಿಸಿದ್ದುದರಿಂದ ಫೌಜದಾರರು ಅವನನ್ನು ತೆಗೆದುಹಾಕಿದ್ದರು. ಆ 'ಮಾಮೂಲು'ಗಳ ಮಾಹಿತಿಯನ್ನು ನನಗೆ ತಿಳಿಸಿರಲಿಲ್ಲ ಆ ಕಾರಕೂನ. ಬರಬರುತ್ತಾ ಸಂಗಪ್ಪ ಎಲ್ಲವನ್ನೂ ತಿಳಿಸತೊಡಗಿದ.

ಆ ಊರಿನಲ್ಲಿ ಜೂಜಾಟದ ನಾಲ್ಕು ಕೇಂದ್ರಗಳಿದ್ದುವು. ಅಲ್ಲಿ ಹಗ

ಲಿರುಳೂ ಇಸ್ಪೀಟೆನಾಟ ನಡೆಯುತ್ತಿತ್ತು. ಓ. ಸಿ. ಆಟದ (ಓಪನಿಂಗ್ - ಕ್ಲೋಸಿಂಗ್) ಕೆಲವರು ಏಜಂಟರೂ ಇದ್ದರು. ಇವರೆಲ್ಲರಿಂದ, ಅಪರಾಧಗಳ ದಪ್ತರಿನ ಕಾರಕೂನನಿಗೆ ಪ್ರತಿತಿಂಗಳೂ ನೂರು ರೂಪಾಯಿ 'ಮಾಮೂಲು' ಸಲ್ಲುವ ರೂಢಿಯಿದ್ದಿತಂತೆ. ಫೌಜದಾರರಿಗೆ ತಿಂಗಳಿಗೆ ಐದು ನೂರು, ಪೋಲೀಸ್ ಇನ್ಸ್‌ಪೆಕ್ಟರರಿಗೆ ಎರಡುನೂರು, 'ಬೀಟ್ ಅಮಲ್ದಾರರು' ಮತ್ತು ಸಿಪಾಯಿ ಗಳಿಗೂ ಹತ್ತಿಪ್ಪತ್ತು, ಕಚೇರಿಯ ಗುಮಾಸ್ತೆಗೆ ಇಪ್ಪತ್ತು, ಬಾರನಿಸಿಗೆ ಹತ್ತು - ಈ ಪ್ರಕಾರ 'ಮಾಮೂಲು' ಸಂದಾಯವಾಗುತ್ತಿತ್ತು. ಜೂಜಾಟವಾಡುವುದು, ಓ. ಸಿ. ಆಡುವುದು ಕಾಯದೆಯ ದೃಷ್ಟಿಯಲ್ಲಿ ಅಪರಾಧಗಳಷ್ಟೆ. ಕಾನೂನು ಬಾಹಿರ ಕೃತಿಗಳನ್ನು ತಡೆಗಟ್ಟಲೆಂದೇ ಪೋಲೀಸ್ ಶಾಖೆಯ ವ್ಯವಸ್ಥೆಯಿರು ವುದು. ಸಹಸ್ರಾರು ಜನ ಪೋಲೀಸು ಸಿಪಾಯಿಗಳು, ಅಧಿಕಾರಿಗಳು, ಸಾಹೇಬರುಗಳಿದ್ದರೂ ಈ ಕಾನೂನುಬಾಹಿರ ಕೃತಿಗಳು ನಿರಾತಂಕವಾಗಿ ನಡೆಯುತ್ತಲೇ ಇವೆಯಲ್ಲವೆ? ಪೋಲೀಸರು ಸುಮ್ಮನಿರುವುದೇಕೆ? ಎಂಬ ಪ್ರಶ್ನೆಯನ್ನು ಸಾರ್ವಜನಿಕರು ಆಗಾಗ ಕೇಳುವುದುಂಟು. ಪೋಲೀಸರು ಸುಮ್ಮ ನಿರಲು ಕಾರಣವೆಂದರೆ ಈ 'ಮಾಮೂಲು' ನಮಗೆ ಸಿಗುವ ಸಂಬಳ ನಮಗೆ ಸಾಲದು. ನಮಗೂ ಬಂಗಾರದ ಆಸೆ, ಹೊಲ ಮನೆಗಳ ಆಸೆ. ಲೋಕದ ಜನ ರೆಲ್ಲರೂ ಬಂಗಾರದ ಹಿಂದೆ ಹೊರಟಿರುವಾಗ ನಾವು ಪೋಲೀಸರು ಮಾತ್ರ ಸಾಧು ಸತ್ಪುರುಷರಂತೆ ಬಂಗಾರದ ಮೋಹದಿಂದ ದೂರವಾಗಿರುವುದು ಸಾಧ್ಯವೆ?

ಅಪರಾಧಗಳ ಕಾರಕೂನನಿಗೆ ನೂರು ರೂಪಾಯಿ 'ಮಾಮೂಲು' ದೊರೆಯುವ ರೂಢಿಯಿದ್ದಿತಾದರೂ ನನಗೆ ಆ ವಿಚಾರ ಗೊತ್ತಾದುದು ಎರಡು ತಿಂಗಳುಗಳ ತರುವಾಯ. ನನಗೆ ಸಲ್ಲಬೇಕಾಗಿದ್ದ ಆ ಹಣವನ್ನೂ ನನಗೆ ಗೊತ್ತಾಗದಂತೆ ಮೊದಲಿನ ಕಾರಕೂನನೇ ವಸೂಲು ಮಾಡಿಕೊಂಡು ತಿಂದು ಬಿಟ್ಟಿದ್ದ. ಆ ವಿಚಾರ ನನಗೆ ತಿಳಿದ ಬಳಿಕ ನಾನೇನೂ ಅವನ ಜತೆ ಜಗಳ ಮಾಡಲಿಲ್ಲ. ಹಾಳಾಗಿ ಹೋಗಲಿ - ಎಂದುಕೊಂಡು ಸುಮ್ಮನಿದ್ದು ಬಿಟ್ಟೆ.

ನಮ್ಮ ಅಪ್ಪಣ್ಣವರ್ ಫೌಜದಾರರು ಬಲು ವಿಲಕ್ಷಣ ಆಸಾಮಿ. ಬೆಳಿಗ್ಗೆ ಅವರು ಹಾಸಿಗೆ ಬಿಟ್ಟು ಏಳುವುದಕ್ಕೇ ಹತ್ತುಗಂಟೆಯಾಗುವುದು. ಎದ್ದು ಮುಖ ತೊಳೆದುಕೊಂಡು ಚಹ ಕುಡಿದು, ಸ್ನಾನ ಮುಗಿಸಿ, ಊಟಮಾಡಿ ಮನೆಯಿಂದ ಹೊರಡಬೇಕಾದರೆ ಹನ್ನೆರಡು ಗಂಟೆ. ದಾರಿಯಲ್ಲಿ ಇಸ್ಪೀಟ್ ಕ್ಲಬ್ಬು. ಶ್ರೀಮಂತರ

ಮಕ್ಕಳೆಲ್ಲರೂ, ತಮ್ಮ ಹಿರಿಯರು ಗಳಿಸುವ ಹಣದ ಸದುಪಯೋಗವಾಗಲೆಂದು ಅಲ್ಲಿ ಇಸ್ಪೀಟು ಆಡಲು ಕಲಿಯುತ್ತಿದ್ದರು. ನಮ್ಮ ಫೌಜದಾರರೂ ಆ ಕ್ಲಬ್ಬಿನ ಪ್ರಮುಖ ಸದಸ್ಯರಲ್ಲೊಬ್ಬರು. ಹನ್ನೆರಡು ಗಂಟೆಗೆ ಅಲ್ಲಿಗೆ ಬಂದು ಆಡಲು ಕುಳಿತರೆಂದರೆ ಜೇಬಿನಲ್ಲಿನ ಹಣವೆಲ್ಲ ಹೋಗುವವರೆಗೂ ಕಚೇರಿಯ ನೆನಪೇ ಇರುತ್ತಿರಲಿಲ್ಲ ಫೌಜದಾರರಿಗೆ. ಅವರು ಆಟದಲ್ಲಿ ಗೆಲವು ಪಡೆಯುವುದಂತೂ ಆ ಕ್ಲಬ್ಬಿನ ಇತಿಹಾಸದಲ್ಲಿಯೇ ಅಪರೂಪದ ಮಾತು.

ನಮ್ಮ ಕಚೇರಿಯ ಕೆಲಸದ ವೇಳೆಯದೂ ಒಂದು ವೈಚಿತ್ರ್ಯವೇ. ನಾವು ಕಾರಕೂನರು ಬೆಳಗಿನ ೯ ಗಂಟೆಗೆ ಬರುತ್ತಿದ್ದೆವು. ೧೨ ಕ್ಕೆ 'ಡ್ಯೂಟಿ'ಯ ಸಿಪಾಯಿಗಳು ಬರುತ್ತಿದ್ದರು. ಅವರ ವರದಿ, ಚಿಲ್ಲರೆ ಅಪರಾಧಗಳ ವಿವರ ಮೊದಲಾದುವುಗಳನ್ನು ಬರೆದುಕೊಂಡು ಕಾಗದ ಪತ್ರಗಳನ್ನು ಸಿದ್ಧಗೊಳಿಸಿ, ಫೌಜದಾರರ ಮೇಜಿನ ಮೇಲಿಟ್ಟು ಒಂದು ಗಂಟೆಯ ವೇಳೆಗೆ ನಾವು ಊಟಕ್ಕೆ ಹೋಗುತ್ತಿದ್ದೆವು. ಫೌಜದಾರರು ಕಚೇರಿಗೆ ಬರುತ್ತಿದ್ದುದೂ ಬಹಳ ಅಪರೂಪವಾಗಿ. ವಿಶೇಷ ಸಂದರ್ಭಗಳು ಬಂದಾಗ ಸಹಾಯಕ ಫೌಜದಾರರು (ಸೆಕಂಡ್ ಸಬ್ - ಇನ್‌ಸ್ಪೆಕ್ಟರ್) ಅವುಗಳನ್ನು ನೋಡಿಕೊಳ್ಳುತ್ತಿದ್ದರು. ಅಕ್ಷಪ್ಪಣ್ಣವರ್ ಸಾಹೇಬರನ್ನು ಹುಡುಕಿಕೊಂಡು ಕ್ಲಬ್ಬಿಗೆ ಯಾರೂ ಹೋಗುವಂತಿರಲಿಲ್ಲ. ಪೋಲೀಸರಾರೂ ಕ್ಲಬ್ಬಿಗೆ ಕಾಲಿಡಬಾರದೆಂದು ಅವರ ಕಟ್ಟಪ್ಪಣೆ!

ನಾವು ಊಟ ತೀರಿಸಿಕೊಂಡು, ಸ್ವಲ್ಪ ವಿಶ್ರಾಂತಿ ಪಡೆದು ಐದೂವರೆ ಗಂಟೆಗೆ ಪುನಃ ಕಚೇರಿಗೆ ಹೋಗುತ್ತಿದ್ದೆವು. ಆಗ ನಮ್ಮ ಫೌಜದಾರರು 'ಮಧ್ಯಾಹ್ನದ ಊಟ'ಕ್ಕೆಂದು ಮನೆಗೆ ಬಂದಿರುತ್ತಿದ್ದರು! ಊಟ ಮುಗಿಸಿಕೊಂಡು ಏಳು ಗಂಟೆಗೆ ಪುನಃ ಕ್ಲಬ್ಬು ಸೇರಿಕೊಂಡರೆಂದರೆ ರಾತ್ರಿ ಹನ್ನೊಂದು ಗಂಟೆಯ ಹೊತ್ತಿಗೆ ಆಟ ಮುಗಿಯುತ್ತಲೂ ಕಚೇರಿಗೆ ಪಾದ ಬೆಳೆಸುತ್ತಿದ್ದರು! ಅಷ್ಟರೊಳಗಾಗಿ ನಾವು ದಿನದ 'ಹಾಜರಿ' ಮುಗಿಸಿ ನಮ್ಮ ನಮ್ಮ ಮನೆ ಸೇರಿಕೊಂಡಿರುತ್ತಿದ್ದೆವು. ಕಾಗದಪತ್ರಗಳಿಗೆ ಸಹಿ ಹಾಕಿ ಫೌಜದಾರರು ಮನೆಗೆ ಬಂದು ಮುಟ್ಟಲು ಒಂದು ಗಂಟೆಯೋ ಎರಡು ಗಂಟೆಯೋ ಆಗುತ್ತಿತ್ತು. ಎಷ್ಟೋ ಬಾರಿ ಅವರು ಕಚೇರಿಗೂ ಹೋಗುತ್ತಿರಲಿಲ್ಲ, ಮನೆಗೂ ಬರುತ್ತಿರಲಿಲ್ಲ; ರಾತ್ರಿಯನ್ನೆಲ್ಲ ಕ್ಲಬ್ಬಿನಲ್ಲಿಯೇ ಆಟವಾಡುತ್ತ ಕಳೆಯುತ್ತಿದ್ದುದಿದೆ. ಇವರ ಈ

ವಿಲಕ್ಷಣ ದಿನಚರಿಯಿಂದಾಗಿ ಕಚೇರಿಯಲ್ಲಿ ಎಲ್ಲರಿಗೂ ತಲೆಬೇಸರು ಬಂದು ಬಿಟ್ಟಿತ್ತು.

ಆದರೆ, ಅಪ್ಪಣ್ಣವರ್ ಫೌಜದಾರರದು ಒಂದು ದೊಡ್ಡ ಗುಣ. ಅವರು ಯಾರಿಗೂ ಎಂದೂ ಅಹಿತ ಬಯಸಿದವರಲ್ಲ, ಕೆಡಕು ಮಾಡಿದವರಲ್ಲ, ಕೆಟ್ಟ ಮಾತು ಆಡಿದವರಲ್ಲ. ಅಂಥ ಸಾಧು ಸ್ವಭಾವ ಅವರದು. ಇಸ್ಪೀಟಿನ ದುರಭ್ಯಾಸವೊಂದು ಅವರಿಗಂಟಿಕೊಂಡಿರದಿದ್ದಲ್ಲಿ ಅವರು ಆದರ್ಶ ಅಧಿಕಾರಿಯೆಂದು ಖ್ಯಾತಿ ಪಡೆಯಬಹುದಾಗಿತ್ತು. ಆ ದುಶ್ಚಟಕ್ಕೆ ಬಲಿಬಿದ್ದು, ತಮ್ಮ ಸಂಬಳದ ಹಣ, 'ಮಾಮೂಲಿ'ನ ಹಣ ಎಲ್ಲವನ್ನೂ ಕಳೆದುಕೊಂಡು, ಸಂಗಪ್ಪನಿಂದ ಸಾಲ ಪಡೆದು ಅದನ್ನೂ ಸೋತು, ಮನೆಯ ಖರ್ಚಿಗಾಗಿ ತಮ್ಮ ಆಪ್ತರಿಂದ ಹಣ ತರಿಸಿಕೊಳ್ಳುವ ಪ್ರಸಂಗಗಳೂ ಅನೇಕಬಾರಿ ಬಂದಿದ್ದುವು ಫೌಜದಾರರಿಗೆ. ಅವರ ಈ ದುಂದುಗಾರಿಕೆಯನ್ನು ಚೆನ್ನಾಗಿ ಅರಿತುಕೊಂಡಿದ್ದ ಸಂಗಪ್ಪ 'ಮಾಮೂಲಿ'ನ ಹಣವನ್ನೆಲ್ಲ ಅವರ ಕೈಗೆ ಕೊಡದೆ, ವರ್ಷಕ್ಕೆರಡು ಬಾರಿ ಬರುವ 'ಇನ್‌ಸ್ಪೆಕ್ಷನ್'ಗಳಿಗಾಗಿ ಎರಡು ಸಾವಿರ ರೂಪಾಯಿಗಳನ್ನು ಪ್ರತ್ಯೇಕವಾಗಿ ತೆಗೆದಿರಿಸುತ್ತಿದ್ದ. ಸಂಗಪ್ಪ ಹಾಗೆ ಜಾಗರೂಕತೆ ವಹಿಸದಿದ್ದರೆ ಅಪ್ಪಣ್ಣವರ್ ಸಾಹೇಬರು ತಮ್ಮ ಹೊಲ ಮನೆ ಮಾರಾಟಮಾಡಿ "ಇನ್‌ಸ್ಪೆಕ್ಷನ್"ಗಳ ಖರ್ಚು ನೋಡಿಕೊಳ್ಳುವ ಪ್ರಸಂಗ ಬರುತ್ತಿತ್ತು; ಇಲ್ಲವಾದರೆ, ನೌಕರಿ ಕಳೆದುಕೊಂಡು ಮನೆಗೆ ಹೋಗಬೇಕಾಗುತ್ತಿತ್ತು. ಫೌಜದಾರರ ದುರಭ್ಯಾಸವನ್ನು ತಪ್ಪಿಸುವ ಸಾಹಸಕ್ಕೆ ಪಾತ್ರ ಯಾರೂ ಪ್ರವೃತ್ತರಾಗಿರಲಿಲ್ಲ. ಕೈಕೆಳಗಿನ ಪೋಲೀಸರ ಮೇಲೆ ಅಂಥ ಪರ್ಜಸ್ಸು ಅವರದು.

ಈ ಮಧ್ಯೆ, ಬ್ಯಾಂಕಿನ ದರೋಡೆಯ ಶೋಧದ ಕಾಲಕ್ಕೆ ನನ್ನೊಡನಿದ್ದ ಕಲ್ಲನಗೌಡರು ಜಮಾದಾರರಾಗಿ ಬಡ್ತಿ ಹೊಂದಿ ಹುಂಬರೂರಿಗೆ ವರ್ಗವಾಗಿ ಬಂದರು. ಸಂಗಪ್ಪ, ನಾನು, ಕಲ್ಲನಗೌಡ ಮೂವರದು ಒಂದು ಗುಂಪಾದಂತಾಯಿತು. ನನಗೂ ಸ್ವಲ್ಪ ಉತ್ಸಾಹವೇರಿತು.

ಎಲ್ಲ ನಗರಗಳಲ್ಲೂ ಆಗುವ ಹಾಗೆ ಹುಂಬರೂರಿನಲ್ಲಿಯೂ ಎಷ್ಟೋ ಚಿಕ್ಕಪುಟ್ಟ ಅಪರಾಧಗಳು ಜರಗಿದ್ದುವು. ಅವುಗಳನ್ನು ಶೋಧಿಸಿ ಅಪರಾಧಿಗಳನ್ನು ಬಂಧಿಸಿ ಶಿಕ್ಷೆ ಬಂಧಿಸಿ ಶಿಕ್ಷೆ

ಬಂದವರೇ ಮೊದಲು ಆ ಅಪರಾಧಗಳ ಶೋಧಕ್ಕೆ ನಿಂತುಕೊಂಡರು. ಹಿಂದೆ ಶಿಕ್ಷೆಗೊಳಗಾದ ಜನರ ಯಾದಿಯನ್ನು ತೆಗೆದು ನೋಡಿ, ಅವರ ನಡತೆ ನಡವಳಿಕೆಗಳನ್ನು ಅಭ್ಯಾಸಿಸಿ, ಅಪರಾಧೀ ಮನೋವೃತ್ತಿಯ ನಾಲ್ಕಾರು ಜನರನ್ನು ಹಿಡಿದು ತಂದು ವಿಚಾರಿಸಿ, ಸುದ್ದಿಗಾರರನ್ನು ನೇಮಿಸಿ, ಪೋಲೀಸು ಸಿಪಾಯಿಗಳನ್ನು ಹುರಿದುಂಬಿಸಿ, ನಿರ್ಜೀವವಾಗಿದ್ದ ಪೋಲೀಸ್ ಪಡೆಯಲ್ಲಿ ಹೊಸ ಜೀವ ಸಂಚರಿಸುವಂತೆ ಮಾಡಿದರು. ರಾತ್ರಿ 'ಗಸ್ತಿ' ತಿರುಗುವ ಪೋಲೀಸರಿಗೆ ಎಚ್ಚರಿಕೆ ಕೊಟ್ಟು, ಅವರು ತಮ್ಮ ಕರ್ತವ್ಯವನ್ನು ದಕ್ಷತೆಯಿಂದ ನೆರವೇರಿಸಬೇಕೆಂದೂ, ಎಲ್ಲಾದರೂ ಬಿದ್ದು ನಿದ್ದೆ ಹೋಗದೆ, ಅಪರಾಧಿಗಳನ್ನು ಪತ್ತೆ ಮಾಡಬೇಕೆಂದೂ, ಅವರವರ ಕ್ಷೇತ್ರದಲ್ಲಿ ಜರಗಿದ ಅಪರಾಧಗಳನ್ನು ಹದಿನೈದು ದಿನಗಳೊಳಗಾಗಿ ಶೋಧಿಸದಿದ್ದರೆ ಡಿ. ಎಸ್. ಪಿ. ಯವರಿಗೆ ವರದಿಮಾಡಿ ಅವರನ್ನು ವರ್ಗ ಮಾಡಿಸುವುದಾಗಿಯೂ ಬೆದರಿಸಿದರು. ಜೂಜಾಟದವರಿಂದಲೂ ಓ. ಸಿ. ಆಟದವರಿಂದಲೂ ಕಳ್ಳಸಂತೆಯ ವ್ಯಾಪಾರಿಗಳಿಂದಲೂ ದುಡ್ಡು ತಿನ್ನುವುದರಲ್ಲಿ ಪೋಲೀಸ್ ಕೆಲಸವನ್ನು ನಿರ್ಲಕ್ಷಿಸುತ್ತಿದ್ದ ಸಿಪಾಯಿಗಳನ್ನು ಗದರಿಸಿದರು. ಅದರಿಂದಾಗಿ ಸಹಜವಾಗಿಯೆ ಪೋಲೀಸರೆಲ್ಲರೂ ಚುರುಕಾಗಿ ಕೆಲಸ ಮಾಡತೊಡಗಿದರು. ಅವರ ಸಹಾಯದಿಂದ ನಾಲ್ಕಾರು ಮಂದಿ ಕಳ್ಳರನ್ನು ಬಂಧಿಸಿ ಸೆರೆಮನೆಗೆ ಸಾಗಿಸಿದುದಾಯಿತು. ಕಲ್ಲನಗೌಡರು ಅಷ್ಟಕ್ಕೇ ತೃಪ್ತರಾಗದೆ ಬಿರುಸಾಗಿ ಕೆಲಸ ಸಾಗಿಸಿ ಒಂದೇ ಒಂದು ತಿಂಗಳಿನ ಅವಧಿಯಲ್ಲಿ ಇಪ್ಪತ್ತು ಇಪ್ಪತ್ತೈದು ಕಳವಿನ ಪ್ರಕರಣಗಳನ್ನು ಬಯಲಿಗೆಳೆದು ಅಪರಾಧಿಗಳನ್ನು ಹಿಡಿದು ಮೊಕದ್ದಮೆ ಹೂಡಿದರು. ಅರ್ಥಾತ್ – ಅಪರಾಧಗಳ ಕಾರಕೂನನಾಗಿದ್ದ ನನಗೂ ಕೆಲಸ ಹೆಚ್ಚಿತು.

ಪಂಚನಾಮಾ, ಸಾಮಾನುಗಳ ಜಪ್ತಿ, ಸಾಕ್ಷಿದಾರರ ಹೇಳಿಕೆ ಬರೆದುಕೊಳ್ಳುವುದು, ಬೆರಳುಗಳ ಗುರುತು ತೆಗೆದುಕೊಳ್ಳುವುದು, 'ಚಾರ್ಜ್‌ಶೀಟ್' ತಯಾರಿಸುವುದು, ದಿನಚರಿ ಬರೆಯುವುದು – ಒಂದೇ ಎರಡೇ – ಅಸಂಖ್ಯ ಕೆಲಸಗಳು. ವಾಸ್ತವವಾಗಿ ಅವುಗಳನ್ನೆಲ್ಲ ಕಚೇರಿಯ ಹಿರಿಯ ಫೌಜದಾರರೇ ನೋಡಿಕೊಳ್ಳಬೇಕೆಂಬ ನಿಯಮವುಂಟು. ಆ ನಿಯಮದಂತೆ ನಡೆದುಕೊಳ್ಳುವವರು ಮಾತ್ರ ವಿರಳ. ಹುಂಬರೂರಿನಲ್ಲಿ ಮಾತ್ರವಲ್ಲ, ಸಾಮಾನ್ಯವಾಗಿ ಎಲ್ಲ

ಕಡೆಗೂ ಹಾಗೆಯೇ. ಕಾರಕೂನರೇ ಎಲ್ಲ ಕೆಲಸಗಳನ್ನು ಮಾಡುತ್ತಾರೆ, ಫೌಜದಾರರು ಸಹಿ ಹಾಕುತ್ತಾರೆ!

ಕಲ್ಲನಗೌಡರಿಂದಾಗಿ ಆ ಪ್ರಕಾರ ಕೆಲಸಗಳು ಹೆಚ್ಚುತ್ತಲೂ ನಮ್ಮ ಫೌಜದಾರರು ಕ್ಲಬ್ಬಿನ ವೇಳೆಯಲ್ಲಿ ಸ್ವಲ್ಪ ಕಡಿತಮಾಡಿ, ಕಚೇರಿಗೆ ಬಂದು ಹೋಗುವುದು ಅನಿವಾರ್ಯವಾಯಿತು. ಅವರು ಬರುವುದರೊಳಗಾಗಿ ನಾನು ಎಲ್ಲ ಕಾಗದ ಪತ್ರಗಳನ್ನೂ ಸಿದ್ಧಗೊಳಿಸುತ್ತಿದ್ದೆ. ಅವುಗಳನ್ನು ಓದುವ ಗೊಡವೆಗೂ ಹೋಗದೆ, ಸಹಿ ಹಾಕಬೇಕಾಗಿದ್ದ ಕಡೆ ಸಹಿ ಹಾಕಿ ಅವರು ಹೊರಟುಬಿಡುತ್ತಿದ್ದರು. ನನ್ನ ಬಗೆಗೆ ಅವರಲ್ಲಿ ಅಷ್ಟು ವಿಶ್ವಾಸವಿತ್ತು, ಕಾಗದ ಪತ್ರಗಳಲ್ಲಿ ನಾನು ಯಾವ ದೋಷಗಳನ್ನೂ ಉಳಿಯಗೊಡುವುದಿಲ್ಲವೆಂಬ ಭರವಸೆಯಿತ್ತು.

ಈ ಅಪರಾಧಗಳ ನಿಮಿತ್ತವಾಗಿ ನಗರದ ಅನೇಕ ಭಾಗಗಳಲ್ಲಿ ಸುತ್ತಿದುದರಿಂದ ನನಗೂ ಅನೇಕ ಜನರ ಪರಿಚಯು ಲಭಿಸಿತು. ಜೂಜುಕೋರರ ಪರಿಚಯವೂ ಆಯಿತು. ಅವರಿಂದ ಪೋಲೀಸಿನವರೆಲ್ಲರೂ ದುಡ್ಡು ತಿನ್ನುತ್ತಿದ್ದಂತೆ ನಾನೂ ತಿನ್ನಬಹುದಾಗಿತ್ತು. ಆದರೆ, ಜೂಜಾಟದವರಿಂದ ಲಂಚ ಸ್ವೀಕರಿಸಬಾರದೆಂದು ನಾನು ಬಲು ದಿನಗಳ ಹಿಂದೆಯೆ ನಿರ್ಧರಿಸಿದ್ದೆನಾದುದರಿಂದ ಆ ಹಣವನ್ನು ಮುಟ್ಟಲು ಮನಸ್ಸು ಬರಲಿಲ್ಲ. ಆದರೆ, ನನ್ನ ಅರ್ಥಿಕ ಸ್ಥಿತಿ ಕೆಡುತ್ತ ಬಂದ ಹಾಗೆ ನನ್ನ ಮೊದಲಿನ ನಿರ್ಧಾರವೂ ಹೊಯ್ದಾಡತೊಡಗಿತು.

ಜೂಜಾಟದವರಿಂದ ನಾವು ಹಣ ಸ್ವೀಕರಿಸದಿದ್ದುದನ್ನು ಕಂಡ ಕಲ್ಲನಗೌಡರು ನನ್ನ ಪಾಲಿನ ಹಣವನ್ನೂ ತಾವೇ ವಸೂಲುಮಾಡಿ ನಮ್ಮ ಮನೆಗೆ ಅವಶ್ಯವಿದ್ದ ವಸ್ತುಗಳನ್ನು ಕೊಂಡು ಕಳಿಸತೊಡಗಿದರು. ಸಂಗಪ್ಪನೂ ಹಾಗೇ ಮಾಡತೊಡಗಿದ. ಕೆಲವು ದಿನಗಳವರೆಗೆ ನನಗೆ ಅದಕ್ಕೂ ಮನಸ್ಸೊಪ್ಪಲಿಲ್ಲ. ಅಪ್ರತ್ಯಕ್ಷವಾಗಿ ನಾನು ಜೂಜಾಟದವರ ಹಣ ಸ್ವೀಕರಿಸಿದ ಹಾಗೇ ಆಯಿತಲ್ಲವೆ?

ಹಾಗೆ, ಪೋಲೀಸರೆಲ್ಲ ಲಂಚ ತಿನ್ನುವವರೇ ಆಗಿರುವಾಗ ಜೂಜಾಟ ನಿಲ್ಲುವುದಾದರೂ ಹೇಗೆ ಸಾಧ್ಯ? ಕಲ್ಲನಗೌಡರು ಮಾತ್ರ ಎಲ್ಲರಿಂದಲೂ ಲಂಚ ಸ್ವೀಕರಿಸದೆ, ಒಂದೆರಡು ಕೇಂದ್ರಗಳ ಜೂಜುಕೋರರನ್ನು ಹಿಡಿದು ತಂದರು.

ರಸ್ತೆಯ ಮೇಲೆ ಕುಳಿತುಕೊಂಡೇ ಓ. ಸಿ. ಆಟ ಆಡುವವರು ಅವರು. ಅವರ ಹತ್ತಿರ ಇದ್ದ ಓ. ಸಿ. ಚೀಟಿಗಳನ್ನೂ ಹಣವನ್ನೂ ಜಪ್ತುಮಾಡಿ ಅವರನ್ನು ಬಂಧಿಸಲಾಯಿತು. ಅವರನ್ನು ಜಾಮೀನಿನ ಮೇಲೆ ಬಿಡುವುದಕ್ಕಾಗಿ ನನಗೆ ಹತ್ತು ರೂಪಾಯಿ ಲಂಚ ಸಿಕ್ಕಿತು!

ಮನೆಗಳಲ್ಲಿ ಜೂಜಾಟವಾಡುತ್ತಿದ್ದ ಜನರನ್ನು ಬಂಧಿಸಲು 'ವಾರಂಟ್' ಬೇಕಾಗುತ್ತಿತ್ತು. ಅಂಥ ಒಂದೆರಡು ಮನೆಗಳನ್ನು ಮುತ್ತಲು ನಾವು 'ವಾರಂಟ್' ಪಡೆದುಕೊಂಡೆವು. ಫೌಜದಾರರು ಯಾವುದಕ್ಕೂ ಬೇಡವೆನ್ನು ತ್ತಿರಲಿಲ್ಲ. ನಮ್ಮ ಬಗೆಗೆ ಅಷ್ಟು ವಿಶ್ವಾಸ ಅವರಿಗೆ.

ಒಂದು ದಿನ, ಸಹಾಯಕ ಫೌಜದಾರರೂ ನಾನೂ ಜತೆಯಾಗಿ ಹೋಗಿ ಜೂಜಾಟದ ಮನೆಯೊಂದಕ್ಕೆ ಮುತ್ತಿಗೆ ಹಾಕಿದೆವು. ಅಪ್ಪಣ್ಣವರ್ ಫೌಜ ದಾರರೂ ಆ ದಿನ ಕ್ಲಬ್ಬಿನ ಕಾರ್ಯಕ್ರಮಕ್ಕೆ ಚಕ್ಕರ್ ಕೊಟ್ಟು, ಕಲ್ಲನಗೌಡರ ಜೊತೆಗೆ ಹೋಗಿ ಇನ್ನೊಂದು ಮನೆಯ ಮೇಲೆ ಧಾಳಿ ಮಾಡಿದರು. ಎರಡೂ ಕಡೆಗಳಲ್ಲಿ ಸೇರಿ ಮೂವತ್ತು ಮಂದಿ ಬಂಧಿತರಾದರು. ಸಾವಿರದವರೆಗೂ ಹಣ ಸಿಕ್ಕಿತು.

ಪಂಚನಾಮಾ, ಹೇಳಿಕೆ, ಇತ್ಯಾದಿ ಕಾರ್ಯಗಳು ಮುಗಿದು ಅವರನ್ನು ಜಾಮೀನಿನ ಮೇಲೆ ಬಿಡುವ ಸಂದರ್ಭದಲ್ಲಿ ಅವರಿಂದ ನೂರು ರೂಪಾಯಿ ಲಂಚ ಬಂತು. ಆ ಹಣವನ್ನು ನಾನು ಕಲ್ಲನಗೌಡರಿಗೆ ಕೊಡಮಾಡಿದೆ. ಅವರು ಸ್ವೀಕರಿಸಲಿಲ್ಲ.

"ಅದು ನಿಮಗೇ ಇರಲಿ. ನಮಗೇನು ಕಡಿಮೆಯಾಗಿಲ್ಲ," ಎಂದು ಅವರು ಹೇಳಿದರು. ನಾನು ಅಷ್ಟಕ್ಕೇ ಸುಮ್ಮನಾದೆ. ನನಗೂ ಆಗ ಹಣದ ಅಗತ್ಯವಿತ್ತು. ಕಿರಾಣಿ ಅಂಗಡಿ, ಬಟ್ಟೆಯಂಗಡಿ, ಚಹದಂಗಡಿಗಳಲ್ಲಿ ಮಾಡಿದ್ದ ಸಾಲವನ್ನು ತೀರಿಸಿದುದಾಯಿತು. ಹಿಂದೆ ಮಾರಾಟ ಮಾಡಿದ್ದ ಬೆಳ್ಳಿ ಬಂಗಾರದ ವಸ್ತುಗಳನ್ನು ಮತ್ತೆ ಕೊಳ್ಳಲು ಮಾತ್ರ ಹಣ ಸಾಲದೆ ಹೋಯಿತು.

ಆ ಮೂವತ್ತು ಜನರನ್ನು ನಾವು ಬಂಧಿಸಿದೊಡನೆಯೆ ಜೂಜುಕೋರರೆಲ್ಲ ಹೆದರಿ ಆಟ ನಿಲ್ಲಿಸಿಬಿಟ್ಟರು. ಅವರಿಂದ ತಿಂಗಳು ತಿಂಗಳಿಗೂ ತಪ್ಪದೆ ಸಿಗುತ್ತಿದ್ದ 'ಮಾಮೂಲೂ' ತಪ್ಪಿ ಹೋಯಿತು. ತಮ್ಮ ಎರಡು ನೂರು ರೂಪಾಯಿಗಳಿಗೆ

ಕಲ್ಲು ಬಿದ್ದಿತಲ್ಲಾ - ಎಂದು ಪೋಲೀಸ್ ಇನ್ಸ್‌ಪೆಕ್ಟರರಿಗೆ ಸಂತಾಪವಾಗದಿರಲಿಲ್ಲ.

"ಜೂಜಾಟದ ಕೇಂದ್ರಗಳ ಮೇಲೆ ಯಾಕೆ ರೇಡ್ ಮಾಡಿದಿರಿ?" ಎಂದು ಅವರು ನಮ್ಮ ಫೌಜದಾರರನ್ನು ಗದರಿಸಿಕೊಂಡರು.

"ರೇಡ್ ಮಾಡುವ ವಿಚಾರ ನನಗೇನೂ ಇರಲಿಲ್ಲ. ಕಲ್ಲನಗೌಡ, ಸಂಗಪ್ಪ, ಶಿವಣ್ಣರ ಮನಸ್ಸು ಮುರಿಯಲಾರದೆ ಮಾಡಬೇಕಾಯಿತು," ಎಂದರು ಫೌಜದಾರರು.

"ಅವರಿಗೇನು! ನಮ್ಮ ಹಣ ಹೋಯಿತಲ್ಲ! ನಿಮ್ಮದೂ ಐದುನೂರು ಹೋಗಲಿಲ್ಲವೆ?" ಎಂದರು ಇನ್ಸ್‌ಪೆಕ್ಟರು.

"ಹೋದರೆ ಹೋಯಿತು," ಎಂದು ನಿರ್ಲಕ್ಷ್ಯದಿಂದ ನುಡಿದರು ಫೌಜದಾರರು.

"ಸರಿ. ನೀವೂ ಜೂಜಾಟದವರೇ. ಮನೆ ಮಾರು ಎಲ್ಲಾ ಹೋದರೂ ನಿಮಗೇನು ದುಃಖವಾಗಲಿಕ್ಕಿಲ್ಲ," ಎಂದರು ಇನ್ಸ್‌ಪೆಕ್ಟರು.

"ನನ್ನ ಆಟದ ವಿಷಯ ನೀವು ಮಾತಾಡಬೇಡಿರಿ," ಎಂದು ಸ್ವಲ್ಪ ಬಿರುಸಾಗಿಯೇ ಉತ್ತರವಿತ್ತರು ಫೌಜದಾರರು.

"ನಿಮ್ಮಂಥವರು ಇಲ್ಲಿರುವಾಗ ನಮ್ಮಂಥವರು ಶಂಖ ಹೊಡೆಯಬೇಕು," ಎಂದರು ಇನ್ಸ್‌ಪೆಕ್ಟರು.

"ಹೊಡೆಯುವ ಪ್ರಸಂಗ ಬಂದರೆ ಹೊಡೆಯಬೇಕು," ಎಂದರು ಫೌಜದಾರರು.

"ನಿಮ್ಮಂಥವರ ಕೂಡ ವಾದಿಸಿ ಉಪಯೋಗವಿಲ್ಲ," ಎಂದರು ಇನ್ಸ್‌ಪೆಕ್ಟರು.

"ಇಲ್ಲವೇ ಇಲ್ಲ," ಎಂದರು ಫೌಜದಾರರು.

ಅಂದಿನಿಂದ ಅವರಿಬ್ಬರ ಮಧ್ಯೆ ದ್ವೇಷದ ಹೊಗೆಯಾಡತೊಡಗಿತು. ಏನನ್ನಾದರೂ ಮಾಡಿ ಫೌಜದಾರರ ಫಜೀತಿ ಮಾಡಬೇಕೆಂದು ಇನ್ಸ್‌ಪೆಕ್ಟರು ಹೊಂಚು ಹಾಕತೊಡಗಿದರು. ಫೌಜದಾರರ ಪ್ರತಿನಿತ್ಯದ ಕೆಲಸದಲ್ಲಿ ಕೈ ಹಾಕುವುದಕ್ಕೂ ಆರಂಭಿಸಿದರು. ಆ ಉಪದ್ವ್ಯಾಪವನ್ನು ಕಂಡು ಫೌಜದಾರರೂ ಕೆರಳಿ ಪ್ರತಿಭಟಿಸತೊಡಗಿದರು. ಅಪರಾಧಗಳ ದಪ್ತರನ್ನು ನೋಡಿಕೊಳ್ಳುತ್ತಿದ್ದ

ನಾನು ಫೌಜದಾರರ ಪ್ರತಿಯೊಂದು ಕೆಲಸವನ್ನೂ ಸಮರ್ಪಕವಾಗಿ ಮಾಡಿ ಕೊಡುತ್ತಿದ್ದುದರಿಂದ ತಪ್ಪುಗಳನ್ನು ಕಂಡುಹಿಡಿಯಲು ಇನ್ಸ್‌ಪೆಕ್ಟರಿಗೆ ಅವಕಾಶ ಲಭಿಸಲಿಲ್ಲ. ಅದರಿಂದಾಗಿ ಅವರ ಕೋಪ ನನ್ನ ಮೇಲೂ ಹರಿಯಿತು.

"ನೀನು ಫೌಜದಾರರ ಹಸ್ತಕ. ನೀವಿಬ್ಬರೂ ಕೂಡಿ ಕಾರಸ್ಥಾನ ಮಾಡುತ್ತೀರಿ," ಎಂದು ಒಂದು ದಿನ ಅವರು ನನ್ನನ್ನು ಗದರಿಸಿದರು.

ನನಗೆ ಭಯಂಕರ ಸಿಟ್ಟು ಬಂದಿದ್ದಿತಾದರೂ ಅದನ್ನು ಹತ್ತಿಕ್ಕಿಕೊಂಡು ಶಾಂತ ಸ್ವರದಲ್ಲಿಯೆ ಉತ್ತರವಿತ್ತೆ :

"ಕಾರಸ್ಥಾನವೇನೂ ಇಲ್ಲ ಸಾಹೇಬರೆ. ನನ್ನ ಡ್ಯೂಟಿ ನಾನು ಮಾಡು ತ್ತಿದೀನಿ."

"ಫೌಜದಾರರು ಲಿಂಗಾಯತರು, ನೀನೂ ಲಿಂಗಾಯತ. ನೀವಿಬ್ಬರೂ ಒಂದು!"

ನನ್ನ ತಲೆಯ ಮೇಲೆಯೆ ಬಾಂಬು ಸ್ಫೋಟವಾದಂತಾಯಿತು, ಅವರ ಆ ಮಾತಿನಿಂದ. ಸಾರ್ವಜನಿಕ ಕ್ಷೇತ್ರಗಳಲ್ಲಿ ಜಾತಿಗಳ ಜಗಳವಿದ್ದುದೇನೊ ನಿಜವೆ. ಸರಕಾರದ ಶಾಲೆಗಳಲ್ಲೂ ಅದರ ಪಡಿನೆಳಲು ಮೂಡುವುದು ಸಹಜವೇ ಆಗಿತ್ತು. ಆದರೆ, ಪೋಲೀಸ್ ಶಾಖೆಯಲ್ಲಿ ಮಾತ್ರ ಅದುವರೆಗೂ ಜಾತೀಯ ಭಾವನೆಯ ಪಿಡುಗು ಹರಡಿರಲಿಲ್ಲವೆಂದು ನಾನು ಭಾವಿಸಿಕೊಂಡಿದ್ದೆ. ಇನ್ಸ್‌ಪೆಕ್ಟರರ ಆ ಮಾತು ನನ್ನ ಆ ಬಲುದಿನಗಳ ಭಾವನೆಯನ್ನು ಬುಡಮೇಲು ಮಾಡಿತು. ಜಾತಿಯಿಂದ ಅವರು ಬ್ರಾಹ್ಮಣರೆಂಬ ವಿಚಾರ ನಮಗೆ ಗೊತ್ತಿದ್ದಿತಾದರೂ ಅದಕ್ಕಾಗಿ ನಾವು ಎಂದೂ ಅವರನ್ನು ಬೇರೆ ದೃಷ್ಟಿಯಿಂದ ನೋಡಿರಲಿಲ್ಲ. ಅವರು ಇನ್ಸ್‌ಪೆಕ್ಟರು, ನಮ್ಮ ಮೇಲಾಧಿಕಾರಿಗಳು ಎಂಬ ತಿಳಿವಳಿಕೆಯೊಂದೇ ನಮಗಿದ್ದುದು. ನಮ್ಮ ಫೌಜದಾರರ ವಿಷಯವಾಗಿ ನಮ್ಮಲ್ಲಿ ಅಭಿಮಾನವಿರಲು ಅವರು ಲಿಂಗವಂತರಾಗಿದ್ದ ಅಂಶವೇನೂ ಕಾರಣವಾಗಿರಲಿಲ್ಲ. ಅವರು ಸಾಧು ಸ್ವಭಾವದವರಾಗಿದ್ದುದೇ ಆ ಅಭಿಮಾನಕ್ಕೆ ಮುಖ್ಯ ಕಾರಣವಾಗಿತ್ತು. ನನ್ನ ನೌಕರಿಯ ಅವಧಿಯಲ್ಲಿ ಅನೇಕ ಜನ ಲಿಂಗವಂತ ಮತೀಯ ಫೌಜದಾರರ ಕೈಕೆಳಗೆ ನಾನು ಕೆಲಸ ಮಾಡಿದ್ದೆ. ಅವರೆಲ್ಲರ ಬಗೆಗೂ ನಾನು ಅಭಿಮಾನ ತಳೆಯಲು ಸಾಧ್ಯವಾಗಿರಲಿಲ್ಲ. ಅವರು ಲಿಂಗವಂತರೆಂಬ ಒಂದೇ ಒಂದು ಕಾರಣಕ್ಕಾಗಿ ನಾನು ಅವರ ದುರ್ಗುಣಗಳನ್ನು ಎಂದೂ ಸಹಿಸಿ

ಕೊಂಡಿರಲಿಲ್ಲ. ಎಷ್ಟೋಜನ ಲಿಂಗವಂತ ಮತೀಯ ಫೌಜದಾರರೊಡನೆ ನನಗೆ ಮನಸ್ತಾಪವುಂಟಾಗಿತ್ತು. ಈ ಇನ್ಸ್‌ಪೆಕ್ಟರರಿಗೆ ಈ ವಿಚಾರವೇನೂ ತಿಳಿಯದು.

"ಅವರು ಲಿಂಗಾಯತರೆಂಬ ಭಾವನೆ ನನ್ನಲ್ಲಿ ಎಂದೂ ಬಂದಿಲ್ಲ ಸಾಹೇಬರೆ. ಅವರು ಫೌಜದಾರರು. ಅವರು ಹೇಳಿದ ಕೆಲಸಗಳನ್ನು ತಪ್ಪಾಗದಂತೆ ಮಾಡುವದಷ್ಟೇ ನನ್ನ ಕರ್ತವ್ಯ."

"ಈ ಮಾತು ಎಲ್ಲಾ ನಾನೂ ಬಲ್ಲೆ. ನೀವೆಲ್ಲಾ ಲಫಂಗರು. ಆ ಕಲ್ಲನಗೌಡ, ಆ ಸಂಗ, ಮತ್ತು ನೀನು, ಫೌಜದಾರರು ಕೂಡಿಕೊಂಡು ಕಚೇರಿಯನ್ನೆಲ್ಲಾ ನಿಮ್ಮ ಕೈಯಲ್ಲಿಟ್ಟುಕೊಂಡು ನನ್ನ ಆಟ ನಡೆಯದಂತೆ ಮಾಡುತ್ತಿದ್ದೀರಿ," ಎಂದು ಒದರಿಕೊಂಡು ಅವರು ಕಚೇರಿಯನ್ನು ತ್ಯಜಿಸಿ ಹೊರಟುಹೋದರು.

ಕೋಪೋದ್ರೇಕದಿಂದ ಕಂಪಿಸುತ್ತಾ ನಾನು ಹುಚ್ಚನಂತೆ ನಿಂತುಕೊಂಡಿದ್ದೆ. 'ಲಫಂಗ' ಎಂಬ ಶಬ್ದ ಎಷ್ಟು ಸುಲಭವಾಗಿ ಬಂದಿತ್ತು ಅವರ ಬಾಯಿಯಿಂದ. ನನ್ನ ನೌಕರಿಯ ಅವಧಿಯಲ್ಲಾಗಲಿ, ಆ ಮೊದಲಾಗಲಿ ನಾನು ಯಾರಿಂದಲೂ ಹಾಗೆ ಬಯ್ಯಿಸಿಕೊಂಡವನಲ್ಲ. ನನ್ನಿಂದ ಯಾವುದೊಂದು ಅಪರಾಧ ನಡೆದಾಗ ಯಾರಾದರೂ ನನ್ನನ್ನು ಹಾಗೆ ಬಯ್ದಿದ್ದರೆ ಆ ಮಾತು ಬೇರೆಯಾಗುತ್ತಿತ್ತು. ಆದರೆ, ನನ್ನ ತಪ್ಪೇನೂ ಇಲ್ಲದಿದ್ದಾಗಲೂ ಇನ್ಸ್‌ಪೆಕ್ಟರರು ಹಾಗೆ ಬಯ್ಯುವುದೆಂದರೇನು! ನಾನು ಅವರ ಕೈಕೆಳಗಿನ ಕೆಲಸಗಾರ. ಅವರು ಮೇಲಾಧಿಕಾರಿ. ಅದೇನೋ ನಿಜವೆ. ಆದರೆ ಕೈಕೆಳಗಿನವರಿಗೆ ಹಾಗೆ ಬಯ್ಯುವುದೂ ನಿಯಮಗಳಿಗೆ ವಿರುದ್ಧವಾದುದು.

ಇನ್ಸ್‌ಪೆಕ್ಟರು ತಕ್ಷಣ ಹೊರಟುಹೋದರೆಂದು ಅಂದು ನನ್ನ ಕೋಪದ ಹೊಡೆತದಿಂದ ತಪ್ಪಿಸಿಕೊಂಡರು. ಅವರೇನಾದರೂ ಅಲ್ಲಿಯೇ ಕುಳಿತುಕೊಂಡಿದ್ದರೆ ನಾನು ಅವರನ್ನು ಬೂಟನಿಂದ ಹೊಡೆಯಲೂ ಹಿಂಜರಿಯುತ್ತಿರಲಿಲ್ಲ. ಆಗ ನನ್ನ ಮೈಯಲ್ಲಿ ಪ್ರಜ್ಞೆಯೇ ಇಲ್ಲದಂತಾಗಿತ್ತು.

ಸ್ವಲ್ಪ ಹೊತ್ತು ಕಚೇರಿಯಲ್ಲಿ ಕುಳಿತಿದ್ದು ಅನಂತರ ಫೌಜದಾರರನ್ನು ಹುಡುಕಿಕೊಂಡು ಹೊರಟೆ. ಒಂದು ತಾಸಿನವರೆಗೆ ಹುಡುಕಿದ ಬಳಿಕ ಅವರ ದರ್ಶನ ಲಭಿಸಿತು. ನಾನು ಹೇಳಿದುದೆಲ್ಲವನ್ನೂ ಶಾಂತವಾಗಿಯೆ ಕೇಳಿಕೊಂಡ ತರುವಾಯ ಅವರು ವಿಷಾದದಿಂದ ಕತ್ತು ಕೊಡವಿ ಹೇಳಿದರು :

"ಹೋಗಲಿ ಬಿಡು ಶಿವಣ್ಣಾ. ಅವರು ಅಂದದ್ದು ನೀನು ಮನಸಿಗೆ ಹಚ್ಚಿಕೊಳ್ಳಬೇಡ. ಅಂಥವರ ಜತೆಗೆ ತಂಟೆ ಮಾಡುವವರೇ ಹುಚ್ಚರು."

ನಾವು ಸುಮ್ಮನಾದರೂ ಇನ್ಸ್‌ಪೆಕ್ಟರು ಮಾತ್ರ ಸುಮ್ಮನಿರಲಿಲ್ಲ. ನಮ್ಮ ಕಚೇರಿಯಲ್ಲಿದ್ದ ಕಾರಕೂನ, ಬಾರನಿಸಿ ಇಬ್ಬರೂ ಬ್ರಾಹ್ಮಣ ಮತದವರಾಗಿದ್ದುದೊಂದು ಅನುಕೂಲವಾಗಿತ್ತು ಇನ್ಸ್‌ಪೆಕ್ಟರರಿಗೆ. ಅವರಲ್ಲಿ ಜನಿವಾರದ ಅಭಿಮಾನ ಹುಟ್ಟಿಸಿ ತಮ್ಮ ಪಕ್ಷಕ್ಕೆಳೆದುಕೊಂಡರು. ಸರಿ. ಜನಿವಾರ - ಶಿವದಾರಗಳ ಬಡೆದಾಟ ಪೋಲೀಸ್ ಪಡೆಯಲ್ಲೂ ಆರಂಭವಾಯಿತು.

ಡಿ. ಎಸ್. ಪಿ. ಸಾಹೇಬರು ಆಂಗ್ಲರು. ಅವರಿಗೆ ಈ ವಿಷಯವಾವುದೂ ಗೊತ್ತಿರಲಿಲ್ಲ. ಯಾರಾದರೂ ತಿಳಿಸಿದರೆ ತಾನೇ ಗೊತ್ತಾಗುವುದು ?

ಕಾರಕೂನ – ಬಾರನಿಸಿಗಳ ಮುಖಾಂತರವಾಗಿ ಕಚೇರಿಯ ಚಿಲ್ಲರೆ ದೋಷಗಳು ಇನ್ಸ್‌ಪೆಕ್ಟರರ ಗಮನಕ್ಕೆ ಬರತೊಡಗಿದುವು. ರಸ್ತೆಗಳಲ್ಲಿ, ಚೌಕಗಳಲ್ಲಿ 'ಟ್ರಾಫಿಕ್ ಡ್ಯೂಟಿಯ' ಮೇಲಿದ್ದ ಪೋಲೀಸರನ್ನು ಪರೀಕ್ಷಿಸುವುದು, ಅವರ ಸಮವಸ್ತ್ರ ಸರಿಯಾಗಿರಲಿಲ್ಲವೆಂದೋ, ಅವರು ಸರಿಯಾಗಿ ನಿಂತುಕೊಂಡಿರಲಿಲ್ಲವೆಂದೋ ತಪ್ಪು ಹೊರಿಸಿ ವರದಿ ಮಾಡುವುದಕ್ಕಾರಂಭಿಸಿದರು ಇನ್ಸ್‌ಪೆಕ್ಟರು. ಈ ಪೋಲೀಸರ ಮೇಲೆ ಫೌಜದಾರರ ಸಮರ್ಪಕ ಮೇಲ್ವಿಚಾರಣೆಯಿಲ್ಲದಿರುವುದೇ ಈ ಅವ್ಯವಸ್ಥೆಗೆ ಕಾರಣವೆಂದು ಆ ವರದಿಗಳಲ್ಲಿ ಕಾಣಿಸುತ್ತಿದ್ದರು.

ಇತ್ತ, ಕಚೇರಿಯಲ್ಲಿ, ಕಾರಕೂನ – ಬಾರನಿಸಿ ಇಬ್ಬರೂ ಇನ್ಸ್‌ಪೆಕ್ಟರರ ಪ್ರಭಾವಕ್ಕೊಳಗಾಗಿ ಬೇಕೆಂತಲೇ ತಮ್ಮ ಕೆಲಸಗಳಲ್ಲೂ ವಿಲಂಬನೀತಿ ವ್ಯಕ್ತಗೊಳಿಸತೊಡಗಿದರು. ಆ ದೋಷವನ್ನೂ ಫೌಜದಾರರ ಕೊರಳಿಗೇ ಕಟ್ಟಿ ಅವರನ್ನು ಗಾಸಿಗೊಳಿಸುವ ಹೊಂಚು ಇನ್ಸ್‌ಪೆಕ್ಟರರದು.

ಇನ್ನು ಫೌಜದಾರರು ಉಳಿಯುವುದು ಕಷ್ಟವೆಂಬುದು ಮನವರಿಕೆಯಾಗುತ್ತಲೂ, ಕಚೇರಿಯಿಂದ ಹೋಗಬೇಕಾದ್ದ ಕಾಗದಗಳನ್ನೆಲ್ಲ ನಾನೇ ಸಿದ್ಧಗೊಳಿಸತೊಡಗಿದೆ. ಕಾರಕೂನ – ಬಾರನಿಸಿಗಳು ಆರಂಭಿಸಿದ್ದ ವಿಲಂಬನೀತಿ ಮುಂದೆ ಸಾಗಲಿಲ್ಲ.

ಇನ್ಸ್‌ಪೆಕ್ಟರಿಗೆ ಆ ವಿಚಾರ ತಿಳಿಯುತ್ತಲೂ ಅವರು ನನ್ನ ಮೇಲೆ ಇನ್ನಷ್ಟು ವಿಷ ಕಾರತೊಡಗಿದರು. "ಈ ಶಿವಣ್ಣನೊಬ್ಬನಿರದಿದ್ದರೆ ಈ ಫೌಜ

ದಾರನನ್ನು ಇಷ್ಟರಲ್ಲೇ ಮನೆಗೆ ಕಳಿಸುತ್ತಿದ್ದೆ," ಎಂದೂ ಅವರು ಮನಸ್ಸಿನಲ್ಲೇ ಹೇಳಿಕೊಂಡಿರಲು ಸಾಕು.

ಒಂದು ದಿನ, ಫೌಜದಾರರು ಕಚೇರಿಯಲ್ಲಿಲ್ಲದ ಸಮಯ ಸಾಧಿಸಿ ಇನ್ಸ್‌ಪೆಕ್ಟರರು ಹಠಾತ್ತಾಗಿ ಬಂದು ನನ್ನ ಕಾಗದಪತ್ರಗಳನ್ನು ಪರೀಕ್ಷಿಸಿದರು. ನನ್ನ ವಶದಲ್ಲಿದ್ದ ರಜಿಸ್ಟರುಗಳಲ್ಲಿ ಯಾವ ದೋಷವನ್ನೂ ಕಂಡುಹಿಡಿಯುವಂತಿರಲಿಲ್ಲ. ಫೈಲುಗಳಲ್ಲೂ ಹಾಗೆಯೇ.

ತಪ್ಪು ಹುಡುಕಲೆಂದೇ ಬಂದ ಇನ್ಸ್‌ಪೆಕ್ಟರು ಅಷ್ಟಕ್ಕೆ ಸುಮ್ಮನಾಗುವುದುಂಟೇ? ಕಚೇರಿಯಲ್ಲಿ ಕೆಲಸ ಮಾಡುತ್ತಿದ್ದ ಕಾರಕೂನರಾದ ನಾವು ನಮ್ಮ ಖಾಸಗಿ ಉಡುಗೆ ತೊಡುಗೆ ಧರಿಸುವುದೇ ವಾಡಿಕೆಯಾಗಿತ್ತು. ಅಂಥ ಚಿಲ್ಲರೆ ವಿಷಯವೂ ಸಾಕಾಗಿತ್ತು ಇನ್ಸ್‌ಪೆಕ್ಟರಿಗೆ.

"ನೀನು ಖಾಸಗೀ ಡ್ರೆಸ್ಸಿನಲ್ಲಿರಲು ಕಾರಣವೇನು? ಸರಕಾರೀ ಡ್ರೆಸ್ ಯಾಕೆ ಹಾಕಿಲ್ಲ?"

"ಕಚೇರಿಗಳಲ್ಲಿ ಕೆಲಸ ಮಾಡುವವರು ಖಾಸಗೀ ಡ್ರೆಸ್ಸಿನಲ್ಲೇ ಇರುವ ರೂಢಿಯಿದೆ."

"ಯಾವ ಮೂರ್ಖ ಹೇಳಿದ್ದಾನೆ ಹಾಗೆ? ಇವತ್ತಿನಿಂದ ನೀನು ಸರಕಾರೀ ಡ್ರೆಸ್‌ನಲ್ಲೇ ಬರಬೇಕು. ಇದು ನನ್ನ ಹುಕುಂ," ಎಂದು ಹೇಳಿದುದಲ್ಲದೆ ಆ ಪ್ರಕಾರ ಬರೆಹದ ಮೂಲಕ ಆಜ್ಞೆಯನ್ನೂ ವಿಧಿಸಿದರು.

ಸಂಗಪ್ಪ ಕಲ್ಲನಗೌಡ ಇಬ್ಬರೂ ಅದನ್ನೋದಿ ಬಿದ್ದು ಬಿದ್ದು ನಕ್ಕರು. ಆ ಆಜ್ಞೆಯ ಪ್ರತಿಯೊಂದನ್ನು ಡಿ. ಎಸ್. ಪಿ. ಯವರಿಗೆ ಕಳಿಸಿ, ಅದರ ಬಗೆಗೆ ನಮ್ಮ ಸ್ಪಷ್ಟೀಕರಣವನ್ನು ತಿಳಿಸಿದೆವು. ಖಾಕೀ ಬಟ್ಟೆ ಸಿಗುವುದು ದುಸ್ತರವಾದ ಕಾಲ ಇದು, ಯಾವಾಗಲೂ ಖಾಕೀ ಬಟ್ಟೆಗಳನ್ನೇ ಹಾಕಿಕೊಂಡಿದ್ದರೆ ಅವು ಬೇಗ ಹರಿದು ಹೋಗಿ ಸರಕಾರಕ್ಕೆ ವೃಥಾ ತೊಂದರೆಯಾಗುವುದು, ಅದನ್ನು ತಪ್ಪಿಸುವ ಉದ್ದೇಶದಿಂದಲೇ ನಾವು ಕಚೇರಿಯ ಜನರು ನಮ್ಮ ಖಾಸಗೀ ಬಟ್ಟೆ ಹಾಕಿಗೊಂಡು ಬಂದು ಮಿತವ್ಯಯ ಸಾಧಿಸುತ್ತಿರುವೆವು, ಡಿ. ಎಸ್. ಪಿ. ಸಾಹೇಬರು ನಮ್ಮ ಸ್ಪಷ್ಟೀಕರಣವನ್ನು ಸಹಾನುಭೂತಿಯಿಂದ ವಿಚಾರಿಸಬೇಕು – ಎಂದು ಮೊದಲಾಗಿ ಅದರಲ್ಲಿ ಕಾಣಿಸಲಾಗಿತ್ತು.

ಆಂಗ್ಲರಾಗಿದ್ದ ಡಿ. ಎಸ್. ಪಿ. ಯವರಿಗೆ ನಮ್ಮ ಸ್ಪಷ್ಟೀಕರಣ ಸಮರ್ಪಕ

ವೆನ್ನಿಸಿತು. ತಕ್ಷಣವೇ ಅವರು ಇನ್ಸ್‌ಪೆಕ್ಟರರ ಆಜ್ಞೆಯನ್ನು ರದ್ದುಗೊಳಿಸಿ ನಾವು ಮೊದಲಿನಂತೆ ಖಾಸಗೀ ಬಟ್ಟೆಗಳಲ್ಲಿಯೆ ಕಚೇರಿಯಲ್ಲಿ ಕೆಲಸಮಾಡಬಹು ದೆಂದು ಅನುಮತಿಯಿತ್ತರು.

ನಮ್ಮನ್ನು ಪೀಡಿಸಲು ಯತ್ನಿಸಿದ ಇನ್ಸ್‌ಪೆಕ್ಟರರಿಗೆ ಹಾಗೆ ಮುಖಭಂಗ ವಾದ ಮೇಲೂ ಅವರು ತಮ್ಮ ನಡತೆಯನ್ನು ತಿದ್ದಿಕೊಳ್ಳದೆ ನಮಗೆ ತೊಂದರೆ ಕೊಡುತ್ತಲೇ ಇದ್ದರು. ಫೌಜದಾರರಿಗೂ ಅವರಿಗೂ ಆಗಾಗ ಘರ್ಷಣೆಯಾಗು ತ್ತಲೇ ಇತ್ತು.

ಒಂದೇ ನಗರದಲ್ಲಿದ್ದ ಈ ಇಬ್ಬರು ಪೋಲೀಸು ಅಧಿಕಾರಿಗಳು ತಾವು ತಾವೇ ಬಡಿದಾಡತೊಡಗಿದಾಗ ಅನಾಯಕತ್ವವುಂಟಾಗುವುದು ಸಹಜವೇ ಆಗಿತ್ತು. ಗಂಡ ಹೆಂಡಿರ ಜಗಳದಲ್ಲಿ ಕೂಸು ನುಗ್ಗಾಗುವಂತೆ ನಾವು ಪೋಲೀಸರು ವಿಧವಿಧದ ತೊಂದರೆಗಳನ್ನನುಭವಿಸಬೇಕಾಯಿತು. ಬೇಕೆಂತಲೇ ತಪ್ಪು ಹುಡುಕಲು ಹೊರಟರೆ ಪೋಲೀಸ್ ಶಾಖೆಯಲ್ಲಿ ಕಂಡುಬರುವ ತಪ್ಪುಗಳಿಗೇನು ಕೊರತೆ? ಒಬ್ಬ ಸಿಪಾಯಿ ಸೆಟೆದು ನಿಂತುಕೊಂಡಿಲ್ಲ; ಅದೊಂದು ತಪ್ಪು. ಅವನ ಸಮವಸ್ತ್ರ ಅಸ್ತವ್ಯಸ್ತವಾಗಿದೆ; ಅದೊಂದು ತಪ್ಪು. ಅವನು ಗಡ್ಡ ತೆಗೆಯಿಸಿಲ್ಲ; ಅದೊಂದು ತಪ್ಪು. ಐದು ನಿಮಿಷ ತಡವಾಗಿ ಕೆಲಸಕ್ಕೆ ಬಂದ; ಅದೊಂದು ತಪ್ಪು. ಐದು ನಿಮಿಷ ಮೊದಲೇ ಕೆಲಸ ಬಿಟ್ಟು ಹೋದ; ಅದೊಂದು ತಪ್ಪು. ಪೋಲೀಸ್ ಶಾಖೆಯಲ್ಲಿ ಇಂಥ ಚಿಲ್ಲರೆ ತಪ್ಪುಗಳಿಗೂ 'ಡಿಸ್‌ಮಿಸ್' ಮಾಡಲಾಗುವುದುಂಟು. ಇನ್ಸ್‌ಪೆಕ್ಟರರ ರೋಷಕ್ಕೊಳಗಾಗಿ ಹುಂಬರೂರಿನ ಪೋಲೀಸರ ನೌಕರು ನರಳತೊಡಗಿದರು.

ಈ ಇನ್ಸ್‌ಪೆಕ್ಟರರಾದರೂ ಇಲ್ಲಿಂದ ವರ್ಗವಾಗಿ ಹೋಗಬೇಕು, ಫೌಜ ದಾರರಾದರೂ ಹೋಗಬೇಕು; ಅದುವರೆಗೂ ತಾಪತ್ರಯ ತಪ್ಪಿದುದಲ್ಲವೆಂದು ನಮಗೆಲ್ಲ ಮನವರಿಕೆಯಾಯಿತು.

ಇನ್ಸ್‌ಪೆಕ್ಟರರ ಹಸ್ತಕರ ಸೂಚನೆಯಂತೆ ಜೂಜಾಟ ಮತ್ತೆ ಆರಂಭ ವಾಯಿತು. ಆದರೆ, ಈ ಬಾರಿ ಇನ್ಸ್‌ಪೆಕ್ಟರರಿಗಾಗಲಿ ಅವರ ಶಿಷ್ಯರಾದ ಕಾರ ಕೂನ - ಬಾರನಿಸಿಗಳಿಗಾಗಲಿ 'ಮಾಮೂಲು' ಇರಲಿಲ್ಲ. ಆ ಜೂಜುಕೋರ ರನ್ನು ಹಿಡಿದು ಖಡ್ಡೆ ಹಾಕಿ, ಫೌಜದಾರರು 'ಮಾಮೂಲು' ತಿನ್ನುತ್ತಿದ್ದುದನ್ನು ಬಯಲಿಗೆಳೆಯುವುದೇ ಇನ್ಸ್‌ಪೆಕ್ಟರರ ಉದ್ದೇಶವಾಗಿತ್ತು.

ರಸ್ತೆಯಲ್ಲಿ ಓ. ಸಿ. ಆಡುತ್ತಿದ್ದವನೊಬ್ಬನನ್ನು ಅವರು ಬಂಧಿಸಿ, ಅವನ ಕೈಗೆ ಬೇಡಿ ಹಾಕಿ, ತಮ್ಮ ಶೌರ್ಯ ಪ್ರದರ್ಶನ ಮಾಡಲೆಂದು ಅವನನ್ನು ನಗರದ ತುಂಬಾ ಮೆರೆಯಿಸಿದರು. ಅವನನ್ನು ಹಾಗೆ ಮೆರೆವಣಿಗೆ ಮಾಡುವ ಅಗತ್ಯವೇನೂ ಇರಲಿಲ್ಲ. ಅವಮಾನಿತನಾದ ಆ ಆಸಾಮಿ, ಇನ್ಸ್‌ಪೆಕ್ಟರರನ್ನು ಫಜೀತಿ ಮಾಡಬೇಕೆಂದು ನಿರ್ಧರಿಸಿ, ಜಾಮಿನಿನ ಮೇಲೆ ಬಿಡುಗಡೆ ಹೊಂದಿ ಹೋದೊಡನೆಯೆ, ಅವರ ವಿರುದ್ಧ ಖಟ್ಲೆ ಹೂಡಿ, ತಾನು ಓ. ಸಿ. ಆಟಗಾರನೇ ಅಲ್ಲವೆಂದೂ ಇನ್ಸ್‌ಪೆಕ್ಟರರೇ ಓ. ಸಿ. ಆಡುವಂತೆ ತನಗೆ ಸೂಚನೆಯಿತ್ತರೆಂದೂ, ತಾನು ಅದಕ್ಕೊಪ್ಪಲಿಲ್ಲವಾದುದರಿಂದ ಅವರು ರೇಗಿ, ತನ್ನ ಅಂಗಡಿಯಲ್ಲಿ ಓ. ಸಿ. ಆಟದ ಚೀಟಿಗಳನ್ನಿರಿಸಿ, ತಮ್ಮ ಹಸ್ತಕರಾದ ಪಂಚರಿಂದ ಅವುಗಳನ್ನು ಜಪ್ತು ಮಾಡಿಸಿ, ತನ್ನನ್ನು ಅನ್ಯಾಯವಾಗಿ ಬಂಧಿಸಿ, ಬೇಡಿಹಾಕಿ, ನಗರದಲ್ಲೆಲ್ಲ ಸುತ್ತಿಸಿ ಅವಮಾನಮಾಡಿದರೆಂದೂ ನ್ಯಾಯಾಧೀಶರಲ್ಲಿ ದೂರಿಕೊಂಡ. ಇನ್ಸ್‌ಪೆಕ್ಟರರಿಗೆ ಗಾಬರಿಯಾಗದಿರಲಿಲ್ಲ.

೨೫

# ಸತ್ತವನ ಮೇಲೂ ದ್ವೇಷ!

ಓ. ಸಿ. ಅಪರಾಧ ನಮ್ಮ ಕಚೇರಿಯಲ್ಲಿ ದಾಖಲೆಯಾಗಿತ್ತು. ಸ್ವಯಂ ಇನ್ಸ್‌ಪೆಕ್ಟರರೇ ಅಪರಾಧ ಪತ್ರಿಕೆ ಸಿದ್ಧಗೊಳಿಸಿ ಕಳಿಸಿದರು. ಆ ಮೊಕದ್ದಮೆ ನ್ಯಾಯಾಲಯದೆದುರಿಗೆ ಬರುತ್ತಲೂ ಆ ಆಪಾದಿತ ಹುಂಬರೂರಿನಲ್ಲಿ ಆ ಮೊಕದ್ದಮೆ ನಡೆಯಬಾರದೆಂದು ಅರ್ಜಿ ಹಾಕಿ ಅದನ್ನು ತಡೆ ಹಿಡಿದ. ಅದು ಇನ್ನೊಂದು ಊರಿನಲ್ಲಿ ನಡೆಯತೊಡಗಿತು. ಒಂದು ಮೊಕದ್ದಮೆಯಲ್ಲಿ ಆತ ಆಪಾದಿತ. ಇನ್ನೊಂದರಲ್ಲಿ ಇನ್ಸ್‌ಪೆಕ್ಟರು ಆಪಾದಿತರು. ಅಂತೂ ಅದೆಲ್ಲವೂ ಒಂದು ತಮಾಷೆಯಾಗಿ ಕಾಣಿಸದಿರಲಿಲ್ಲ ಸಾರ್ವಜನಿಕರಿಗೆ.

ಇನ್ಸ್‌ಪೆಕ್ಟರು ಬಿತ್ತಿದ ವಿಷಬೀಜ ಮೊಳಕೆಯೊಡೆದು ನಿಧಾನವಾಗಿ ಬೆಳೆದು ನಗರದ ಪೋಲೀಸ್ ಪಡೆಯಲ್ಲಿ ಬ್ರಾಹ್ಮಣ - ಬ್ರಾಹ್ಮಣೇತರ ಎಂಬ ಗುಂಪುಗಳಾದುವು. ಪೋಲೀಸರಲ್ಲಿ ಜಾತೀಯ ಭಾವನೆ ಬರಕೂಡದೆಂದು ನಾವು ಎಷ್ಟು ಯತ್ನಿಸಿದರೂ ಇನ್ಸ್‌ಪೆಕ್ಟರರ ಚಿತಾವಣೆಯ ಮುಂದೆ ನಮ್ಮ ಬುದ್ಧಿ ವಾದಕ್ಕೆ ಗೆಲವು ದೊರೆಯಲಿಲ್ಲ.

ಒಂದು ದಿನ ಇನ್ಸ್‌ಪೆಕ್ಟರು ತಮ್ಮ ಮನೆಯಲ್ಲಿ ಸತ್ಯನಾರಾಯಣ ಪೂಜೆಯನ್ನೇರ್ಪಡಿಸಿ ಬ್ರಾಹ್ಮಣ ಪೋಲೀಸರಿಗೆಲ್ಲ ಆಮಂತ್ರಣವಿತ್ತರು. ಅಂದು ಅವರೆಲ್ಲರಿಗೂ ಮೃಷ್ಟಾನ್ನ ಭೋಜನ. ಆ ಪೋಲೀಸರ ಹೆಂಡಿರು ಮಕ್ಕಳಾದಿಯಾಗಿ ಎಲ್ಲರೂ ಹೋಗಿದ್ದರು. ಬ್ರಾಹ್ಮಣೇತರರಾದ ನಮ್ಮನ್ನು ಮಾತ್ರ ಯಾರೂ ಮಾತನಾಡಿಸಲಿಲ್ಲ.

ಸತ್ಯನಾರಾಯಣ ಎಂದರೆ ದೇವರು. ಅವನು ಕೇವಲ ಬ್ರಾಹ್ಮಣರ

ದೇವರೇನೂ ಅಲ್ಲ. ಅವನ ಪೂಜೆ ನಡೆದರೆ ನಾವೂ ನಮ್ಮ ಭಕ್ತಿ ವ್ಯಕ್ತಗೊಳಿಸುವುದು ಅವಶ್ಯವೆಂದು ಬಗೆದು ನಮ್ಮ ಕಲ್ಲನಗೌಡರೂ ಫೌಜದಾರರೂ ಐದು ತೆಂಗಿನಕಾಯಿಗಳನ್ನು ಓಲೇಕಾರನೊಬ್ಬನ ಮುಖಾಂತರ ಕಳಿಸಿಕೊಟ್ಟರು. ತಮ್ಮನ್ನು ಲೇವಡಿ ಮಾಡುವ ಉದ್ದೇಶದಿಂದಲೇ ಫೌಜದಾರರು ತೆಂಗಿನಕಾಯಿ ಕಳಿಸಿರಬಹುದೆಂದು ಬಗೆದು ಇನ್ಸ್‌ಪೆಕ್ಟರು ಇನ್ನಷ್ಟು ರೇಗಿದರು. ತೆಂಗಿನಕಾಯಿ ಕಳಿಸಿದವರಿಗೆ ಪ್ರಸಾದವೂ ಲಭಿಸಲಿಲ್ಲ.

"ಏನ್ರೀ ಗೌಡರೇ, ನೀವು ಕಾಯಿ ಕಳಿಸಿದರೆ ನಿಮಗೆ ಒಂದಿಷ್ಟು ಪ್ರಸಾದವೂ ಬರಲಿಲ್ಲವಲ್ರೀ!" ಎಂದು ನಾವು ಚೇಷ್ಟೆ ಮಾಡಿದೆವು.

"ಪ್ರಸಾದದ ಆಸೆಗಾಗಿ ನಾವು ಕಾಯಿಕಪ್ಪುರ ಕಳಿಸಿರಲಿಲ್ಲ. ದೇವರಿಗೆ ಭಕ್ತಿ ಸೂಚಿಸುವುದಕ್ಕೆ ಕಳಿಸಿದ್ದೆವು," ಎಂದರು ಕಲ್ಲನಗೌಡರು.

ಅದು ಯಾವುದೋ ಅನಿಷ್ಟದ ಮುನ್ಸೂಚನೆಯೆಂದು ನನಗೆನಿಸದಿರಲಿಲ್ಲ.

ಕೆಲ ದಿನಗಳ ತರುವಾಯ 'ಪರೇಡ್ ಇನ್ಸ್‌ಪೆಕ್ಶನ್' ನಡೆಯಬೇಕೆಂದು ಗೊತ್ತಾಯಿತು. ಬೆಳಗಿನ ಏಳು ಗಂಟೆಗೆ ಪರೇಡು. ನಮ್ಮ ಫೌಜದಾರರು, ತಾಲ್ಲೂಕಿನ ಫೌಜದಾರರು ಇಬ್ಬರೂ ಬಂದಿದ್ದರು. ಕವಾಯತಿಗಾರಂಭವಾದ ಐದು ನಿಮಿಷಗಳ ತರುವಾಯ ಇನ್ಸ್‌ಪೆಕ್ಟರು ಆಗಮಿಸಿದರು. ಅವರನ್ನು ಕಂಡೊಡನೆಯೇ ಇಬ್ಬರು ಫೌಜದಾರರೂ ನಿಯಮಗಳನ್ವಯ ವಂದನಾರ್ಪಣೆ ಮಾಡಿದುದಾಯಿತು. ಮತ್ತೆ ಕವಾಯತಿಗಾರಂಭವಾಯಿತು. ಕವಾಯತು ತೆಗೆದುಕೊಳ್ಳಲು ಕಲ್ಲನಗೌಡರಿಗೆ ಆಜ್ಞೆಯಾಯಿತು. ನನಗೂ ಸಂಗಪ್ಪನಿಗೂ ಅದೇ ಪರೀಕ್ಷೆ ಎದುರಾಯಿತು. ನಮ್ಮಲ್ಲಿ ಯಾರಾದರೂ ತಪ್ಪಿದರೆ ವರದಿ ಮಾಡಬೇಕೆಂಬ ದುರುದ್ದೇಶವಿಟ್ಟುಕೊಂಡೇ ಇನ್ಸ್‌ಪೆಕ್ಟರು ಬಂದಿದ್ದರು. ಸುದೈವದಿಂದ ನಾವು ಯಾರೂ ತಪ್ಪು ಮಾಡಲಿಲ್ಲ.

ಅದೇ ದಿನ ಫೌಜದಾರರ ಚಿಕ್ಕ ಮಗುವಿಗೆ ಕಾಯಿಲೆಯಾಗಿತ್ತು. ಸಹಜವಾಗಿಯೇ ಫೌಜದಾರರಿಗೆ ಆ ಮಗುವಿನ ಬಗೆಗೆ ಚಿಂತೆ. ಕವಾಯತು ಮುಗಿಯಲು ಇನ್ನೂ ಹದಿನೈದು ನಿಮಿಷ ಸಮಯವಿದ್ದಾಗಲೇ ಅವರು ಮನೆಗೆ ಹೋಗಿಬಿಟ್ಟರು. ಇನ್ಸ್‌ಪೆಕ್ಟರು ತುಟಿಗಳ ಮೇಲೆ ಕ್ರೂರ ನಗು ಕಾಣಿಸಿಕೊಂಡಿತು.

ಕವಾಯತು ಕೊನೆಗಂಡ ತರುವಾಯ ನಾವೂ ಫೌಜದಾರರ ಮನೆಗೆ

ಹೋಗಿ ಮಗುವಿನ ಸ್ಥಿತಿಯನ್ನು ನಿರೀಕ್ಷಿಸಿ ಡಾಕ್ಟರನ್ನು ಕರೆಯಿಸಿದೆವು. ಮುಂದೆ ನಾಲ್ಕಾರು ದಿನಗಳವರೆಗೂ ಮಗುವಿನ ಸ್ಥಿತಿ ಚಿಂತಾಜನಕವಾಗಿತ್ತು. ಅವರು ಕ್ಲಬ್ಬಿಗೆ ಹೋಗುವುದನ್ನು ಮರೆತು ಮಗುವಿನ ಶುಶ್ರೂಷೆಯಲ್ಲಿ ನಿರತರಾಗಿದ್ದರು. ಅದೇ ಚಿಂತೆಯಲ್ಲಿ ಮುಳುಗಿದ ಫೌಜದಾರರು, ತಮ್ಮ ದಿನಚರಿ ಬರೆಯುವಾಗ, ಆ ದಿನದ ಕವಾಯತು ಮುಗಿಯುವುದಕ್ಕೆ ಮೊದಲೇ ತಾವು ಮನೆಗೆ ಹೋದ ಸಂಗತಿಯನ್ನು ಬರೆಯಲು ಮರೆತು ಬಿಟ್ಟಿದ್ದರು. ನಾವೂ ಆ ವಿಚಾರವನ್ನು ಮರೆತು ಬಿಟ್ಟಿದ್ದೆವು. ಫೌಜದಾರರ ದಿನಚರಿಯ ಪ್ರತಿಗಳನ್ನು ಮೇಲಧಿಕಾರಿಗಳಿಗೆ ಕಳಿಸಬೇಕೆಂಬ ನಿಯಮವುಂಟು ಪೋಲೀಸ್ ಇಲಾಖೆಯಲ್ಲಿ. ಅವುಗಳನ್ನು ಅಂಚೆಯ ಮೂಲಕ ಕಳಿಸುವ ಬಾರನಿಸಿ, ಆ ದಿನದ ದಿನಚರಿಯಲ್ಲಿನ ನ್ಯೂನತೆಯನ್ನು ಕಂಡುಹಿಡಿದ ತಕ್ಷಣ ಇನ್ಸ್‌ಪೆಕ್ಟರಿಗೆ ತಿಳಿಸಿದ. ಅವರು ಗೆಲವಿನ ನಗು ತುಳುಕಿಸುತ್ತಾ ಅದರ ಬಗೆಗೆ ವರದಿ ಕಳಿಸಿದರು. ಫೌಜದಾರರು ಸುಳ್ಳು ದಿನಚರಿ ಬರೆದುದಕ್ಕಾಗಿ ಅವರಿಗೆ ಶಿಕ್ಷೆಯಾಗುವ ಸಂಭವವಿತ್ತು.

ಈ ಮಧ್ಯೆ ಒಬ್ಬ ಹವಾಲ್ದಾರರು ಮೂರು ತಿಂಗಳುಗಳ ಮಟ್ಟಿಗೆ ರಜೆ ತೆಗೆದುಕೊಂಡಿದ್ದುದರಿಂದ ಅವರ ಸ್ಥಳದಲ್ಲಿ ನನಗೆ ತಾತ್ಪೂರ್ತಿಕ ಬಡ್ತಿ ದೊರೆಯಿತು.

....ಒಂದು ದಿನ ನಮ್ಮ ಪೋಲೀಸನೊಬ್ಬ ಕಾಯಿಲೆಗೆ ಬಲಿಯಾಗಿ ತೀರಿಕೊಂಡ. ಅವನದು ದೊಡ್ಡ ಕುಟುಂಬ. ಒಟ್ಟು ಆರು ಮಂದಿ ಮಕ್ಕಳು. ಹಿರಿಯ ಹುಡುಗನಿಗೆ ಹದಿನೇಳು ವರ್ಷ. ಕಿರಿಯ ಹುಡುಗಿಗೆ ಎರಡು ವರ್ಷ. ಆ ಪೋಲೀಸನಿಗೆ ಸ್ವಂತದ ಹೊಲ ಮನೆಯೇನೂ ಇರಲಿಲ್ಲ. ಅವನ ಸಂಬಳವೇ ಅವರೆಲ್ಲರ ಆಧಾರವಾಗಿತ್ತು. ಸರಕಾರೀ ಆಸ್ಪತ್ರೆಯ ಔಷಧಿಯಿಂದ ಯಾವ ಪ್ರಯೋಜನವೂ ಲಭಿಸದೆ ಅವನು ಸತ್ತುಹೋಗಿದ್ದ. ಸಾಯುವಾಗ, ಅವನ ಮನೆಯಲ್ಲಿ ಒಡಕು ಕಾಸೂ ಇರಲಿಲ್ಲ. ಸತ್ತುಹೋದವನ ಶವಸಂಸ್ಕಾರವಾಗಬೇಕಷ್ಟೆ. ನಾವೆಲ್ಲರೂ ಅವನ ಮನೆಯ ಮುಂದೆ ನೆರೆದೆವು. ಬ್ರಾಹ್ಮಣ ಪೋಲೀಸರಾರೂ ಬರಲಿಲ್ಲ. ಸತ್ತುಹೋಗಿದ್ದವನು ಲಿಂಗವಂತನಲ್ಲವೆ!

ಇನ್ಸ್‌ಪೆಕ್ಟರರು ಜಾತೀಯದ್ವೇಷ ಹುಟ್ಟಿಸುವುದಕ್ಕೆ ಮೊದಲು, ಯಾವ ಪೋಲೀಸ ತೀರಿಕೊಂಡರೂ ಎಲ್ಲ ಜಾತೀಯವರೂ ಸೇರಿ ಅಂತಿಮಸಂಸ್ಕಾರ ನೆರವೇರಿಸುವ ರೂಢಿಯಿತ್ತು. ಆದರೆ ಅಂದು, ಬ್ರಾಹ್ಮಣರಾರೂ ಅತ್ತ ಸುಳಿಯ

ಲಿಲ್ಲ. ಬ್ರಾಹ್ಮಣೇತರರಲ್ಲಿ ಅನೇಕರು 'ಡ್ಯೂಟಿ'ಯ ಮೇಲಿದ್ದರು. ಅದನ್ನು ಬಿಟ್ಟು ಬರುವ ಹಾಗಿರಲಿಲ್ಲ. ಕಲ್ಲನಗೌಡರು, ಸಂಗಪ್ಪ, ನಾನು ಮತ್ತು ಇನ್ನೂ ಕೆಲವರು ಸೇರಿ ಶವಕ್ಕೆ ಸ್ನಾನ ಮಾಡಿಸಿ, ಮುಂದಿನ ವ್ಯವಸ್ಥೆಗಾಗಿ ಮನೆಯವರನ್ನು ವಿಚಾರಿಸಿದೆವು.

"ಮನೆಯಾಗ ಒಂದು ದಮಡಿ ಕೂಡಾ ಇಲ್ಲ," ಎಂದು ಮನೆಯಾಕೆ ಅಳುತ್ತಳುತ್ತ ಹೇಳಿದಳು. ಆ ತಿಂಗಳು ಕಳೆಯುವುದೇ ಕಷ್ಟವಾಗಿತ್ತು ಅವರಿಗೆ. ಮುಂದಿನ ತಿಂಗಳ ಸಂಬಳಕ್ಕಾಗಿಯೆ ಅವರು ಕಾದು ಕುಳಿತಿದ್ದರು. ಈಗ ಅದೂ ತಪ್ಪಿಹೋಗಿತ್ತು. ಆ ಪೋಲೀಸನ ಆರು ಜನ ಮಕ್ಕಳ ಪೈಕಿ ಒಬ್ಬ ಹುಡುಗಿಗೆ ಹನ್ನೆರಡು ವರ್ಷ ವಯಸ್ಸು. ಅವಳ ಮದುವೆಯ ಚಿಂತೆ ಬೇರೆ. ಗಂಡನಂತೂ ತಮ್ಮನ್ನು ನಿರಾಶ್ರಿತರನ್ನಾಗಿ ಮಾಡಿ ಹೊರಟುಹೋದ, ಮುಂದಿನ ಗತಿಯೇನು? ಎಂದು ಚಿಂತಿಸುತ್ತಾ ಒಂದೇ ಸಮನೆ ಅಳುತ್ತಲಿದ್ದಳು ಅವನ ಹೆಂಡತಿ.

ಪೋಲೀಸರು ಹೀಗೆ ತೀರ ನಿಕೃಷ್ಟಸ್ಥಿತಿಯಲ್ಲಿ ತೀರಿಕೊಂಡಾಗ ನಾವೆಲ್ಲರೂ ತಲಾ ನಾಲ್ಕೆಂಟು ಆಣೆಗಳಂತೆ ಹಾಕಿ ಅಂತಿಮಕ್ರಿಯೆಗಾಗಿ ಹಣ ಹೊಂದಿಸುವ ಪರಿಪಾಠವಿತ್ತು. ಆಗಲೂ ಹಾಗೆ ಹಣ ಕೂಡಿಸಲಾಯಿತು. ಅರ್ಥಾತ್ – ಬ್ರಾಹ್ಮಣ ಪೋಲೀಸರು ಹಣ ಕೊಡಲಿಲ್ಲ. ಬ್ರಾಹ್ಮಣೇತರರಿಂದ ಕೂಡಿದ ಹಣ ಹತ್ತು ರೂಪಾಯಿಗಳಷ್ಟು ಆಯಿತು. ಅಷ್ಟರಿಂದೇನಾಗಬೇಕು? ನಗರಗಳಲ್ಲಿ ಅಂತಿಮಕ್ರಿಯೆಗೆ ಕನಿಷ್ಠ ಪಕ್ಷ ಐವತ್ತು ರೂಪಾಯಿಗಳಾದರೂ ಬೇಕು. ಸಾಯುವುದಿದ್ದರೆ ಹಳ್ಳಿಯಲ್ಲೇ ಸಾಯುವುದೊಳ್ಳೆಯದೆಂದು ನನಗೆನ್ನಿಸಿತು. ಅಲ್ಲಿ ಜನ ಕೂಡುವರು, ಗೋರಿ ಕಡಿಯುವವರು, ಎಲ್ಲಿಂದಲಾದರೂ ಬಿದಿರುಗಳು ತಂದು ಸಿದಿಗೆ ಕಟ್ಟುವರು, ಎಲ್ಲರೂ ಸೇರಿ ಶವವನ್ನು ಹೊತ್ತುಕೊಂಡೊಯ್ದು ಊರಿನ ಅಯ್ಯನಿಂದ ಪೂಜೆ ಮಾಡಿಸಿ ಅವನಿಗೆ ಐದು ದುಡ್ಡು ಕೊಟ್ಟು ಮುಗಿಸಿಬಿಡುವರು. ನಗರಗಳಲ್ಲಾದರೋ, ಗೋರಿಯ ಸ್ಥಳಕ್ಕೆಂದು ಶ್ಮಶಾನ ಭೂಮಿಯ ಒಡೆಯರಿಗೇ ಹತ್ತು ರೂಪಾಯಿ, ಗೋರಿ ಅಗೆಯುವವರಿಗೆ ಹತ್ತು ರೂಪಾಯಿ ಕೊಡಬೇಕು. ಇಲ್ಲಿಯ ಅಯ್ಯನವರ ದಕ್ಷಿಣೆಯೂ ಹೆಚ್ಚೆ.

ನಾವು ಮೂವರು ಐದೈದು ರೂಪಾಯಿ ಹಾಕಿದೆವು. ಫೌಜದಾರರು ಇಪ್ಪತ್ತೈದು ರೂಪಾಯಿ ಕೊಟ್ಟರು. ಅಂತೂ ಶ್ಮಶಾನಯಾತ್ರೆಯ ಸಿದ್ಧತೆಯಾಯಿತು. ಹೆಣವನ್ನು ಸಿದಿಗೆಗೆ ತರುವಾಗ ನಮ್ಮೆಲ್ಲರ ಕಣ್ಣಲ್ಲಿ ಕಂಬನಿ.

ಅನಾಥೆಯಾದ ಆ ಹೆಂಗಸೂ, ಅವಳ ಪುಟ್ಟ ಪುಟ್ಟ ಮಕ್ಕಳೂ ಅಳುತ್ತಿದ್ದುದನ್ನು ಕಂಡು ಕರುಳು ಕುದಿಯುತ್ತಿತ್ತು. ಬಂಧುಗಳೂ ಪ್ರಿಯಜನರೂ ಸತ್ತುಹೋದಾಗ ಎಲ್ಲರಿಗೂ ಅಳು ಬರುವುದೇನೊ ಸಹಜವೇ. ಆದರೆ, ಅವರು ಸತ್ತ ಮರುದಿನವೇ ಅವರ ಆತ್ಮಕ್ಕೆ ಶಾಂತಿ ದೊರೆಯುವ ನಿಮಿತ್ತದಿಂದ ಪಕ್ವಾನ್ನ ತಯಾರಿಸಿ ಊರಿಗೆಲ್ಲ ತಿನ್ನಿಸಿ, ತಾವೂ ತಿಂದು ತೇಗುವ ಸಿರಿವಂತರ ಅಳು ಬೇರೆ; 'ನಾಳೆ ಒಲೆಗೆ ಹಾಕಲು ಕಟ್ಟಿಗೆ ಕೂಡ ಇಲ್ಲದಂತೆ ಮಾಡಿ ಸತ್ತೆಯಲ್ಲ!' ಎಂದು ಗೋಳಿಡುವ ಈ ಬಡವರ ಅಳು ಬೇರೆ.

ಶವಕ್ಕೆ ಅಂಟಿಕೊಂಡಿದ್ದ ಆ ಏಳು ಜೀವಗಳನ್ನು ಬಿಡಿಸಿ ಶವವನ್ನು ಸಾಗಿಸಬೇಕಾದರೆ ಸಾಕು ಸಾಕಾಯಿತು. ಒಂದು ಮಗುವನ್ನು ಬಿಡಿಸುವುದರಲ್ಲಿ ಇನ್ನೊಂದು ಬಂದು ಶವವನ್ನು ತಬ್ಬಿಕೊಂಡು ರೋದಿಸುತ್ತಿತ್ತು. ಆ ಆಪಾರ ದುಃಖದ ಅರಿವು ಆ ಶವಕ್ಕೂ ಆಗಿದ್ದಿತೋ ಏನೋ ಎನ್ನಿಸುವಂತೆ ಅದರ ಮುಖದ ಮೇಲೆ ಮೂಕಸಂಕಟ ಎದ್ದು ಕಾಣುತ್ತಿತ್ತು. ಅವನು ಕೊನೆಯುಸಿರು ಹಾಕುವಾಗ ಹೆಂಡಿರು ಮಕ್ಕಳ ಚಿಂತೆಯೇ ಅವನ ಮನಸ್ಸನ್ನು ಕೊರೆಯುತ್ತಿದ್ದಿರಬೇಕು. ಹಾಗೆ ಚಿಂತಿಸುತ್ತಲೇ ಹಾರಿ ಹೋಗಿರಬೇಕು ಅವನ ಪ್ರಾಣಪಕ್ಷಿ.

ಅವನ ದೇಹವನ್ನು ಮಣ್ಣುಗೂಡಿಸಿ ಮನೆಗೆ ಬಂದೆವು. ಅವನ ಹಿರಿಯ ಮಗ ಮ್ಯಾಟ್ರಿಕ್‌ನಲ್ಲಿ ಓದುತ್ತಿದ್ದ. ಇನ್ನು ಆರು ತಿಂಗಳಿಗೆ ಅವನ ಪರೀಕ್ಷೆ. ತಂದೆ ತೀರಿಕೊಳ್ಳುತ್ತಲೂ ಕುಟುಂಬರಕ್ಷಣೆಯ ಭಾರ ಅವನ ಮೇಲೇ ಬಿದ್ದಿತ್ತು. ಅವನು ಮ್ಯಾಟ್ರಿಕ್ ಮುಗಿಸಿದರೊಳ್ಳೆಯದೆಂದು ನಮ್ಮ ವಿಚಾರ.

ಫೌಜದಾರರ ಮಕ್ಕಳಿಗೆ ಅವನು ಪಾಠ ಹೇಳುವುದೆಂದು ಗೊತ್ತುಮಾಡಿ ತಿಂಗಳಿಗೆ ಇಪ್ಪತ್ತೈದು ರೂಪಾಯಿ ಕೊಡುವ ವ್ಯವಸ್ಥೆ ಮಾಡಿದೆವು. ಆ ಬಡಪಾಯಿಗೆ ಅಷ್ಟೇ ಸಮಾಧಾನ. ಮ್ಯಾಟ್ರಿಕ್ ಮುಗಿಸಲೆಂದು ಅವನು ತುಂಬಾ ಕಷ್ಟಪಟ್ಟು ಅಭ್ಯಾಸ ನಡೆಸಿದ. ಆದರೆ, ಇನ್ನೊಂದು ಸಮಸ್ಯೆಯನ್ನು ಅವರು ಎದುರಿಸಬೇಕಾಯಿತು.

ಪೋಲೀಸನಾಗಿದ್ದ ಅವನ ತಂದೆ ತೀರಿಕೊಂಡ ತರುವಾಯ, ಪೋಲೀಸ್ ವಠಾರದಲ್ಲಿನ ಮನೆಯನ್ನು ಅವರು ಬಿಟ್ಟುಬಿಡಬೇಕಷ್ಟೆ. ಆದರೆ, ಅದನ್ನು ಬಿಟ್ಟು ನಗರದಲ್ಲಿ ಮನೆ ಮಾಡಬೇಕೆಂದರೆ ಹತ್ತು ಹದಿನೈದು ರೂಪಾಯಿ ಬಾಡಿಗೆ ತೆರ

ಬೇಕು. ಹೊಟ್ಟೆ ತುಂಬುವುದೇ ಪ್ರಯಾಸವಾಗಿರುವಾಗ ಅಷ್ಟು ಬಾಡಿಗೆಯನ್ನು ಅವರು ಹೇಗೆ ಕೊಡಬೇಕು?

ಆ ವಿಚಾರವಾಗಿ ಫೌಜದಾರರೊಡನೆ ಚರ್ಚಿಸಿ, ಆ ಹುಡುಗನ ಪರೀಕ್ಷೆ ಮುಗಿಯುವತನಕ ಅವರು ಅದೇ ಮನೆಯಲ್ಲಿರಬಹುದೆಂದು ತಿಳಿಸಿದ್ದೆವು.

ಅವನ ತಂದೆಯ ಸ್ಥಳಕ್ಕೆ ಬಂದು ಸೇರಿದ್ದ ಪೋಲೀಸನಿಗೂ ಒಂದು ಮನೆ ಬೇಕಾಗಿದ್ದಿತಲ್ಲವೆ? ನಗರದಲ್ಲಿ ಅವನಿಗೊಂದು ಮನೆ ಕೊಡಿಸಿ ಆ ಸಮಸ್ಯೆಯನ್ನು ಬಗೆಹರಿಸಲಾಗಿತ್ತು.

ನಾವು ಮಾಡಿದ ಏರ್ಪಾಡು, ಅರ್ಥಾತ್ – ಇನ್ಸ್‌ಪೆಕ್ಟರರಿಗೊಪ್ಪಿಗೆಯಾಗುವುದು ಸಾಧ್ಯವಿರಲಿಲ್ಲ. ಸತ್ತುಹೋದ ಪೋಲೀಸ ಲಿಂಗವಂತನಲ್ಲವೆ? ಫೌಜದಾರರು ಜಾತಿಯ ಅಭಿಮಾನ ಹಿಡಿದು ನಿಯಮಗಳಿಗೆ ವಿರುದ್ಧವಾಗಿ ವರ್ತಿಸುತ್ತಿರುವರೆಂದೇ ಇನ್ಸ್‌ಪೆಕ್ಟರು ಭಾವಿಸಿದರು.

ಒಂದು ದಿನ ಅವರು ಕವಾಯತಿಗೆ ಬಂದವರು ಪೋಲೀಸ್ ವಠಾರ ನೋಡಲು ಹೊರಟರು, ಸತ್ತುಹೋದ ಪೋಲೀಸನ ಮನೆಯ ಮುಂದೆ ಬಂದು ನಿಂತುಕೊಂಡರು. ಅವನ ಹೆಸರಿನ ಹಲಗೆ ಆ ಮನೆಯೆದುರಿಗೆ ಆಗಲೂ ನೇತಾಡುತ್ತಿತ್ತು.

"ಏ! ಇಲ್ಲಿ ಯಾರಿದ್ದಾರೆ?" ಎಂದು ಕೇಳಿದರು, ಇನ್ಸ್‌ಪೆಕ್ಟರು.

"ಆತನ ಕುಟುಂಬದವರಿದ್ದಾರೆ."

"ಇದೆಲ್ಲಾ ರೂಲ್ಸಿಗೆ ವಿರುದ್ಧ. ನಾನು ಇಂಥದನ್ನೆಲ್ಲ ನಡೆಯಗೊಡುವದಿಲ್ಲ. ಒಂದು ವಾರದೊಳಗಾಗಿ ಇವರು ಮನೆ ಖಾಲಿ ಮಾಡತಕ್ಕದ್ದು."

ನಾವು ಮಾತನಾಡದೆ ಸುಮ್ಮನೆ ನಿಂತುಕೊಂಡಿದ್ದೆವು. ಆ ನೊಂದ ಜೀವಗಳನ್ನು ಲೋಕದ ಸಂಕಟಗಳಲ್ಲಿ ನೂಕಲು ಇಷ್ಟವಿಲ್ಲದೆ ಅಲ್ಲಿಯೆ ಇರಿಸಿಕೊಂಡುದಾಗಿತ್ತು. ಆದರೆ, ಆ ಇನ್ಸ್‌ಪೆಕ್ಟರಿಗೆ ಮಾತ್ರ ದಯೆ, ಕಾರುಣ್ಯ ಯಾವುದೂ ಇರಲಿಲ್ಲ.

ಅವರ ಆಜ್ಞೆಯ ವಿಚಾರ ತಿಳಿದಾಗ ನಮ್ಮ ಫೌಜದಾರರಿಗೆ ಭಯಂಕರ ಸಿಟ್ಟು ಬಂದಿತು.

"ಬೇರೆ ಮನೆ ಮಾಡಲು ಅವರ ಹತ್ತಿರ ದುಡ್ಡಿಲ್ಲ. ಅವರೇನು ಮಾಡಿಯಾರು? ನಾಲ್ಕು ತಿಂಗಳು ಇಲ್ಲೇ ಇರಲಿ ಅಂತ ನಾವೇ ಇಟ್ಟುಕೊಂಡಿದ್ದೇವೆ.

ಇಲ್ಲಿ ಎಲ್ಲರೂ ಪರಿಚಯದವರಾದ್ದರಿಂದ ಅವರ ಕಷ್ಟ ದುಃಖ ವಿಚಾರಿಸಿಕೊಂಡು ಅವಶ್ಯವಿದ್ದಾಗ ಸಹಾಯ ಮಾಡಬಹುದು. ಒಂದೆರಡು ತಿಂಗಳಲ್ಲಿ ಆ ಪೋಲೀಸನ ಪ್ರಾವಿಡೆಂಟ್ ಫಂಡಿನ ಹಣ ಬರಬಹುದು. ಅಷ್ಟರಲ್ಲಿ ಆ ಹುಡುಗ ಮ್ಯಾಟ್ರಿಕ್ ದಾಟಬಹುದು. ಅವನಿಗೆ ಬೇರೆ ಕಡೆ ನೌಕರಿ ಸಿಗದಿದ್ದರೆ ಡಿ. ಎಸ್. ಪಿ. ಯವರಿಗೆ ಹೇಳಿ ಪೋಲೀಸ್ ಕೆಲಸವನ್ನೇ ಕೊಡಿಸಬಹುದು. ಅಲ್ಲಿಯತನಕ ಅವರೆಲ್ಲಾ ಇಲ್ಲೇ ಇರಲಿ," ಎಂದು ಅವರು ಇನ್ಸ್‌ಪೆಕ್ಟರರಿಗೆ ಹೇಳಿದರು.

"ನಿಮಗೆ ಇವರ ಬಗ್ಗೆ ಇಷ್ಟು ಸಹಾನುಭೂತಿಯಿದ್ದರೆ ನಿಮ್ಮ ಮನೆಯಲ್ಲಿಟ್ಟುಕೊಳ್ಳಬಹುದು. ಆದರೆ, ಕೆಲಸದ ಮೇಲಿರುವ ಪೋಲೀಸರಿಗಾಗೇ ಇರುವ ಮನೆಯಲ್ಲಿ ಇವರಿರುವದು ಕಾನೂನಿಗೆ ವಿರುದ್ಧವಾಗುವದು," ಎಂದರು ಇನ್ಸ್‌ಪೆಕ್ಟರು.

"ಆಗಲಿ. ನಮ್ಮ ಮನೆಯಲ್ಲೇ ಅವರಿಗೆ ಸ್ಥಳ ಕೊಡುತ್ತೇನೆ. ನಮ್ಮ ಕೈ ಕೆಳಗಿನ ಪೋಲೀಸರೆಂದರೆ ನಮ್ಮ ಮಕ್ಕಳಿದ್ದ ಹಾಗೆ. ಆ ಪೋಲೀಸನೂ ನನ್ನ ಮಗ. ಅವನ ವಿಧವೆ ನನ್ನ ಸೊಸೆ. ಅವಳ ಮಕ್ಕಳು ನನ್ನ ಮೊಮ್ಮಕ್ಕಳು," ಎಂದು ಹೇಳಿ ಫೌಜದಾರರು ಇನ್ಸ್‌ಪೆಕ್ಟರರನ್ನು ಅತ್ಯಂತ ಕ್ರೂರವಾಗಿ ದಿಟ್ಟಿಸಿದರು. ಅವರ ಮುಖದ ಮೇಲಿನ ರೌದ್ರ ಭಾವವನ್ನು ಕಂಡು ನಮಗೆ ಗಾಬರಿಯಾಗದಿರಲಿಲ್ಲ. ಇನ್ಸ್‌ಪೆಕ್ಟರು ಮತ್ತೊಂದು ಮಾತನ್ನಾಡಿದ್ದರೆ ಅವನನ್ನು ಖಂಡಿತವಾಗಿಯೂ ಹೊಡೆದು ಬಿಡುತ್ತಿದ್ದರು ಫೌಜದಾರರು. ಚಾಣಾಕ್ಷರಾದ ಇನ್ಸ್‌ಪೆಕ್ಟರು ಅದನ್ನು ಊಹಿಸಿಕೊಂಡು, ಆ ವಾದವನ್ನು ಅಲ್ಲಿಗೇ ನಿಲ್ಲಿಸಿ ಹೊರಟುಹೋದರು.

"ಅವನು ಏನು ಮಾಡುವನೋ ನೋಡೋಣ. ಮೇಲಧಿಕಾರಿಗಳೇಯಾಕೆ, ಸರಕಾರವೇ ಕೇಳಿದರೂ ನಾನು ಉತ್ತರ ಕೊಟ್ಟು ಅವರನ್ನು ಸಮಾಧಾನಪಡಿಸಬಲ್ಲೆ. ಅವರನ್ನು ಮನೆ ಬಿಡಿಸಬೇಡಿರಿ," ಎಂದು ನಮಗೆ ಹೇಳಿ ಫೌಜದಾರರು ಕ್ಲಬ್ಬಿಗೆ ಹೊರಟರು.

ಆ ಪೋಲೀಸನ ಮಗನಿಗೆ ಫೌಜದಾರರು ಮುಂಗಡವಾಗಿಯೇ ಇಪ್ಪತ್ತೈದು ರೂಪಾಯಿ ಕೊಟ್ಟಿದ್ದರು. ಅವರ ಹತ್ತಿರ ಅಷ್ಟು ಹಣವುಳಿದಿದ್ದ ವಿಚಾರವೇ ಆಶ್ಚರ್ಯಕಾರಕವಾಗಿತ್ತು. ಅವರ ಜೇಬಿನಲ್ಲಿ ಎಂದೂ, ಐದು ರೂಪಾಯಿಗಳಿಗಿಂತ

ಹೆಚ್ಚು ಹಣ ವುಳಿಯದಂತೆ ನೋಡಿಕೊಳ್ಳಲು ಸಮರ್ಥವಾಗಿದ್ದಿತಲ್ಲವೆ ಅವರ ಕ್ಲಬ್ಬು?

ಆದರೆ, ಫೌಜದಾರರ ಪತ್ನಿ ಶ್ರೀಮಂತರ ಮಗಳು. ಅವರ ತಂದೆ ರಾವ್ ಬಹಾದ್ದೂರರಾಗಿದ್ದವರು. ಅವರಿಂದ ಆಗಾಗ ದೊರೆಯುತ್ತಿದ್ದ ನೂರಾರು ರೂಪಾಯಿಗಳನ್ನು ಗಂಡನಿಗೆ ತಿಳಿಸುದಂತೆ ಇಟ್ಟುಕೊಂಡು ಮನೆಯಲ್ಲಿ ಯಾವುದಕ್ಕೂ ಕೊರತೆಯಾಗದಂತೆ ನೋಡಿಕೊಳ್ಳುತ್ತಿದ್ದರು ಆ ಸತಿ. ಅವರ ತಂದೆಯುವರಘೂ ಉದಾರ ಸ್ವಭಾವ. ಅಳಿಯ ಒಳ್ಳೆಯವರೆಂಬುದನ್ನು ಅವರು ಬಲ್ಲರು. ಕ್ಲಬ್ಬಿನ ಚಟವೊಂದೇ ಆಗಲಿ ಬೇರೆ ದುಶ್ಚಟ ಅವರಿಗಿಲ್ಲ. ರಾವ್ ಬಹಾದ್ದೂರರೂ ಕ್ಲಬ್ಬಿಗೆ ಹೋಗುತ್ತಿದ್ದ ಕಾಲವಿತ್ತು. ಆ ಕ್ಲಬ್ಬಿನಲ್ಲಿ ಸೇರುತ್ತಿದ್ದ ಬಿಳಿಯರ ಗೆಳೆತನದಿಂದಲೇ ಅವರು ರಾವ್ ಬಹಾದ್ದೂರ್ ಬಿರುದು ಗಳಿಸಿ, ತಮ್ಮ ನೌಕರಿಯಲ್ಲಿ ಉನ್ನತಸ್ಥಾನಕ್ಕೇರಿ, ನಿವೃತ್ತಿ ಪಡೆದಿದ್ದರು, ಗೌರವ ಘನತೆಗಳ ಜತೆಯಲ್ಲೇ ಹಣವನ್ನೂ ಗಳಿಸಿದ್ದರು. ಅವರಿಗಿದ್ದ ಮಕ್ಕಳೆಂದರೆ ಇಬ್ಬರೇ. ಒಬ್ಬ ಗಂಡುಮಗ. ಇನ್ನೊಬ್ಬಳು ಮಗಳು. ಮಗ ಬಿ.ಎ. ಪಾಸು ಮಾಡಿದ್ದರೂ ನೌಕರಿ ಮಾಡಬೇಕಾದ ಅಗತ್ಯವಿರಲಿಲ್ಲ. ಹೊಲ ಮನೆ ನೋಡಿಕೊಂಡರೆ ತಿಂಗಳಿಗೆ ಐದಾರು ನೂರು ರೂಪಾಯಿ ಬರುವ ಹಾಗಿತ್ತು. ರಾವ್ ಬಹಾದ್ದೂರರ ನಿವೃತ್ತಿವೇತನ ಬೇರೆಯೆ: ನಾಲ್ಕು ನೂರು ರೂಪಾಯಿ. ಅಷ್ಟು ಹಣವನ್ನೆಲ್ಲ ಅವರೇನು ಮಾಡಿಯಾರು? ಮಗಳ ಸಂಸಾರದ ಸ್ಥಿತಿಯನ್ನರಿತು ಕೊಂಡಿದ್ದ ಅವರು ಪ್ರತಿ ತಿಂಗಳೂ ಒಂದು ನೂರು ರೂಪಾಯಿಗಳನ್ನು ಅವಳಿಗೆ ತಪ್ಪದೆ ಒಪ್ಪಿಸುತ್ತಿದ್ದರು. ಮಗಳಿಗೂ ಮೊಮ್ಮಕ್ಕಳಿಗೂ ಸಾಕಷ್ಟು ಬಟ್ಟೆ ಬರೆ, ವಸ್ತ್ರ ಒಡವೆ ಕೊಡಿಸಿದ್ದರು. ಮಗಳನ್ನು ಮದುವೆ ಮಾಡಿಕೊಡುವಾಗ ಅವಳ ಮೈ ಮೇಲೆ ಐವತ್ತು ತೊಲಗಳಷ್ಟು ಚಿನ್ನದ ಆಭರಣ ಹಾಕಿದ್ದರು.

ಅಂತೆಯೆ, ಫೌಜದಾರರ ಪತ್ನಿಗೆ ಹಣದ ಕೊರತೆಯಿರಲಿಲ್ಲ. ಕಷ್ಟದಲ್ಲಿರುವ ಪೋಲೀಸರನ್ನು ಕಂಡರೆ ಆ ಹೆಣ್ಣುಮಗಳೂ ಕಣ್ಣೀರು ಹಾಕುತ್ತಿದ್ದರು. ಸತ್ತುಹೋದ ಪೋಲೀಸನ ಮಗನಿಗೆ ಇಪ್ಪತ್ತೈದು ರೂಪಾಯಿ ಕೊಟ್ಟವರೂ ಅವರೇ. ಒಂದು ವಾರದೊಳಗಾಗಿ ಆ ಹುಡುಗ ಇವರ ಮನೆಯವರಲ್ಲೊಬ್ಬನಾಗಿ

ಹೋಗಿದ್ದ. ಆತ ಫೌಜದಾರರನ್ನು 'ಅಪ್ಪ' ಎಂದೂ ಅವರ ಪತ್ನಿಯನ್ನು 'ಅವ್ವ' ಎಂದೂ ಸಂಬೋಧಿಸುತ್ತಿದ್ದ.

....ಫೌಜದಾರರು ಸುಳ್ಳು ದಿನಚರಿ ಬರೆದಿದ್ದರೆಂದು ಇನ್ಸ್‌ಪೆಕ್ಟರು ವರದಿ ಮಾಡಿದ್ದರಷ್ಟೆ; ಆ ಪ್ರಕರಣದ ವಿಚಾರಣೆಗಾರಂಭವಾಯಿತು. ಅಂದು ಕವಾಯತಿಗೆ ಬಂದ ಪೋಲೀಸರನ್ನೆಲ್ಲ ಕರೆಯಿಸಿ ಆ ಬಗೆಗೆ ಕೇಳಲಾಯಿತು. ಅಂದು ಫೌಜದಾರರು ಹದಿನೈದು ನಿಮಿಷ ಮುಂಚಿತವಾಗಿಯೇ ಮನೆಗೆ ಹೋಗಿದ್ದುದು ಯಾವ ಪೋಲೀಸನ ಲಕ್ಷ್ಯಕ್ಕೂ ಬಂದಿರಲಿಲ್ಲ. ಕವಾಯತಿಗೆ ಫೌಜದಾರರು ಬಂದಿದ್ದರೆಂಬುದೊಂದೇ ಅವರಿಗೆ ಗೊತ್ತು. ಎಲ್ಲ ಪೋಲೀಸರೂ ಅದೇ ರೀತಿಯಾಗಿ ಉತ್ತರವಿತ್ತರು. ಫೌಜದಾರರು ಆ ಪ್ರಕರಣದಲ್ಲಿ ಉಳಿದು ಕೊಳ್ಳುವುದೂ ಸಾಧ್ಯವಿತ್ತು. ಆದರೆ, ಅವರಿಗೆ ಸತ್ಯವನ್ನೇ ನುಡಿಯುವ ಲಹರಿ ಬಂತು. ತಾವು ಹದಿನೈದು ನಿಮಿಷ ಮುಂಚಿತವಾಗಿಯೆ ಹೋದದ್ದು ನಿಜವೆಂದೇ ಅವರು ಒಪ್ಪಿಕೊಂಡು, ಅದಕ್ಕೆ ಕಾರಣವಾಗಿದ್ದ ಅಂಶವನ್ನೂ ವಿವರಿಸಿ ಹೇಳಿದರು. ಪೋಲೀಸ್ ಖಾತೆಯಲ್ಲಿ ಇಂಥ ಕಾರಣಗಳನ್ನೆಲ್ಲ ಯಾರು ನೋಡು ತ್ತಾರೆ? ಮುಂಚಿತವಾಗಿಯೆ ಮನೆಗೆ ಹೋದರೂ ಆ ಸಂಗತಿಯನ್ನು ದಿನಚರಿ ಯಲ್ಲಿ ಬರೆಯದಿದ್ದುದು ಅವರ ಅಪರಾಧವೆಂದೇ ಸಾಹೇಬರು ತೀರ್ಮಾನಿಸಿ, ಆರು ತಿಂಗಳ ಮಟ್ಟಿಗೆ ಅವರ ಸಂಬಳದಲ್ಲಿ ಕಡಿತಮಾಡಿ ನಗರದ ಕಚೇರಿಯಿಂದ ಅವರನ್ನು ವರ್ಗಮಾಡಿದರು.

## ೨೬

# ಮತ್ತೆ ತಿಕ್ಕಾಟ!

ಅಪ್ಪಣ್ಣವರ್ ಫೌಜದಾರರ ಸ್ಥಳಕ್ಕೆ ಪಠಾಣ್ ಎಂಬುವರು ಬಂದರು. ಅವರು ಮಹಾರಾಷ್ಟ್ರದವರು. ಮರಾಠಿ ಮತ್ತು ಉರ್ದು ಈ ಎರಡು ಭಾಷೆಗಳನ್ನು ಬಿಟ್ಟರೆ ಬೇರಾವ ಭಾಷೆಯೂ ಅವರಿಗೆ ತಿಳಿಯುತ್ತಿರಲಿಲ್ಲ. ಕನ್ನಡದ ಗಂಧವಿಲ್ಲದ ಈ ಅಧಿಕಾರಿಯನ್ನು ಈ ಕನ್ನಡನಗರದ ಫೌಜದಾರನನ್ನಾಗಿ ನೇಮಿಸುವುದರಲ್ಲಿ ಸರಕಾರದ ಉದ್ದೇಶವೇನಿದ್ದಿತೋ ದೇವರಿಗೇ ಗೊತ್ತು!

ಪಠಾಣ ಸಾಹೇಬರು ಬಂದೊಡನೆಯೆ ಇನ್ಸ್‌ಪೆಕ್ಟರರಿಗೂ ಅವರಿಗೂ ಗೆಳೆತನ ಬೆಳೆಯಿತು. ಆಫೀಸಿನ 'ಚಾರ್ಜ್' ತೆಗೆದುಕೊಂಡ ದಿನವೇ ಅವರು ನನ್ನನ್ನೂ, ಕಲ್ಲನಗೌಡ ಸಂಗಪ್ಪರನ್ನೂ ಬೆದರಿಸಲು ಯತ್ನಿಸಿದರು. ಇಂಥ ಅನೇಕ ಜನರನ್ನು ನೋಡಿದ್ದವರಾದ ನಾವು ಬೆದರಿಕೊಳ್ಳಲಿಲ್ಲ. ಒಳಗೊಳಗೇ ನಕ್ಕು ಸುಮ್ಮನಿದ್ದುಬಿಟ್ಟೆವು.

ಈ ಫೌಜದಾರರೂ ಇನ್ಸ್‌ಪೆಕ್ಟರರೂ ಕೂಡಿ ಮಾತನಾಡಿಕೊಂಡು ಜೂಜುಕೋರರನ್ನು ಬರಮಾಡಿಕೊಂಡು ಆಟವನ್ನು ಪುನಃ ಆರಂಭಿಸಲು ಸೂಚನೆಯಿತ್ತರು. ಪ್ರತಿ ತಿಂಗಳಿಗೂ ಸಾವಿರ ರೂಪಾಯಿ 'ಮಾಮೂಲು' ಗೊತ್ತಾಯಿತು; ಅದನ್ನು ಇವರಿಬ್ಬರೂ ಸಮನಾಗಿ ಹಂಚಿಕೊಳ್ಳುವುದು.

ಪಠಾಣ್ ಫೌಜದಾರರಿಗೆ ಮದ್ಯದ ವ್ಯಸನ ವಿಪರೀತ. ನಿತ್ಯವೂ ಸಾಯಂಕಾಲ ಎರಡು ಬಾಟ್ಲಿಗಳಷ್ಟಾದರೂ ಮದ್ಯ ಬೇಕೇಬೇಕು. ಇನ್ಸ್‌ಪೆಕ್ಟರರೇನೂ ಅಂಥ ಕುಡುಕರಲ್ಲ. ಪಠಾಣರ ಸಹವಾಸದಲ್ಲಿ ಅವರೂ ಮೊದಲನೆಯ ನಂಬರಿನ ಕುಡುಕರಾದರು. ಫೌಜದಾರರ ಮನೆಯಲ್ಲಿ ಕೋಳಿಗಳಿಗೆ

ಚೂರಿ ಬಿದ್ದ ದಿನ-ಇನ್ಸ್‌ಪೆಕ್ಟರರಿಗೆ ಊಟಕ್ಕೆ ಆಹ್ವಾನವಿರುತ್ತಿತ್ತು. ಅವರಿಬ್ಬರ ಮೈತ್ರಿ ಗಾಢವಾದ ಹಾಗೆಲ್ಲ ನಮಗೆ ಕಿರುಕುಳಕ್ಕಾರಂಭವಾಯಿತು. ಕಾರಣ ವಿರಲಿ, ಇಲ್ಲದಿರಲಿ, ನಮ್ಮನ್ನು ಬಯ್ದು, ದೂಷಿಸಿ, ಅವಮಾನಗೊಳಿಸತೊಡಗಿದರು – ಫೌಜದಾರರು.

ಅವರಿಗೆ ಕನ್ನಡ ತಿಳಿಯುತ್ತಿರಲಿಲ್ಲವಾದ್ದರಿಂದ ಅವರ ಕೆಲಸವನ್ನೂ ನಾನೇ ಮಾಡಿಕೊಡಬೇಕಾಗುತ್ತಿತ್ತು. ಆದರೆ, ಎಷ್ಟು ಕೆಲಸ ಮಾಡಿದರೂ ಅವರಿಂದ ಬಯ್ಯಿಸಿಕೊಳ್ಳುವುದೇನೂ ತಪ್ಪಲಿಲ್ಲ. ಬರಬರುತ್ತಾ ನಾನು ತುಂಬಾ ಬೇಸರಪಟ್ಟುಕೊಂಡು ಕಾಯದೆಯ ಪ್ರಕಾರ ನಾನು ಮಾಡಬೇಕಾಗಿದ್ದ ಕೆಲಸ ವನ್ನಷ್ಟೇ ಮಾಡುತ್ತ ಹೋದೆ. ಸಹಾಯಕ ಫೌಜದಾರರ ಮೇಲೆ ಕೆಲಸದ ಭಾರ ಬೀಳತೊಡಗಿತು.

ಅಷ್ಟರಲ್ಲಿ ನನ್ನ ಬಡ್ತಿಯ ಅವಧಿ ಮುಗಿದು ನಾನು ಮತ್ತೆ 'ಸಿಪಾಯಿ' ಯಾದೆ. ಅಪ್ಪಣ್ಣವರ್ ಫೌಜದಾರರು ಆಗ ನಮ್ಮ ಕಚೇರಿಯ ಅಧಿಕಾರಿಯಾಗಿದ್ದಲ್ಲಿ ನನ್ನ ಬಗೆಗೆ ಶಿಫಾರಸುಮಾಡಿ ನನ್ನ ಬಡ್ತಿ ಕಾಯಂ ಆಗುವಂತೆ ಯತ್ನಿಸುತ್ತಿದ್ದರು. ಯಮದೂತನಂತೆ ಕಿರುಕುಳ ಕೊಡುತ್ತಿದ್ದ ಈ ಪಠಾಣ ಫೌಜದಾರರು ಹಾಗೆ ಶಿಫಾರಸು ಮಾಡುವ ಮಾತನ್ನೇ ಯೋಚಿಸುವಂತಿರಲಿಲ್ಲ.

ನನಗೆ ಬಡ್ತಿ ದೊರೆಯಲಿಲ್ಲವಾದರೂ ಕಲ್ಲನಗೌಡರಿಗೆ ಬಡ್ತಿ ದೊರೆತು ಅವರು ಫೌಜದಾರರಾಗಿ ನೇಮಕಹೊಂದಿದರು. ಅವರು ವರ್ಗಹೊಂದಿ ಹೊರಟು ನಿಂತಾಗ ಸಂಭ್ರಮದ ಸತ್ಕಾರಕೂಟ ಏರ್ಪಡಿಸಿದೆವು. ಅವರು ಹೊರಟುಹೋಗುತ್ತಲೂ ನಮ್ಮ ಆಧಾರ ಸಡಿಲಾಯಿತು. ಕೆಲ ದಿನಗಳಲ್ಲಿ ಸಂಗಪ್ಪನಿಗೂ ಅಲ್ಲಿಂದ ವರ್ಗವಾಯಿತು. ಫೌಜದಾರರು ಮತ್ತು ಇನ್ಸ್‌ಪೆಕ್ಟರರ ಕಿರುಕುಳಗಳನ್ನೆದುರಿಸಲು ನಾನೊಬ್ಬನೇ ಉಳಿದುಕೊಂಡೆ.

ಮಾನವನಿಗೆ ದುಡ್ಡಿನ ಆಸೆ ಗಂಟುಬಿದ್ದಾಗ ಅವನು ಏನನ್ನಾದರೂ ಮಾಡಲು ಸಿದ್ಧನಾಗುತ್ತಾನೆ. ಸ್ವಲ್ಪವೂ ತೊಂದರೆಯಿಲ್ಲದೆ ಹಣ ಸಿಕ್ಕುವಾಗಲಂತೂ ಅವನ ಆಸೆಗೆ ಮಿತಿಯೆಂಬುದು ಉಳಿಯುವುದಿಲ್ಲ. ಇನ್ಸ್‌ಪೆಕ್ಟರರಿಗೆ ಗೊತ್ತಾಗದಂತೆ ಪಠಾಣ ಫೌಜದಾರರು ನಾಲ್ಕು ಜೂಜಾಟದ ಕೇಂದ್ರಗಳಿಗೆ ಪ್ರೋತ್ಸಾಹವಿತ್ತು ಅವರಿಂದ ನಾಲ್ಕು ನೂರು ರೂಪಾಯಿ ಬರುವಂತೆ ವ್ಯವಸ್ಥೆ ಮಾಡಿದರು. ಇನ್ಸ್‌ಪೆಕ್ಟರರಿಗೆ ಈ ಸಮಾಚಾರ ತಿಳಿಯಲು ವಿಲಂಬವಾಗಲಿಲ್ಲ.

ಈ ಹಣದಲ್ಲಿ ತಮಗೂ ಅರ್ಧಪಾಲು ದೊರೆಯಬಹುದೆಂದು ಅವರು ಒಂದು ತಿಂಗಳು ಕಾದು ನೋಡಿದರು. ಫೌಜದಾರರು ಎಲ್ಲ ಹಣವನ್ನೂ ತಾವೇ ನುಂಗಿ ಸುಮ್ಮನಿದ್ದುಬಿಟ್ಟರು. ಇನ್ಸ್‌ಪೆಕ್ಟರು ಸುಮ್ಮನಿರುವರೇ?

"ನನಗೆ ಅರ್ಧ ಹಣ ಕೊಡುವದಿಲ್ಲವೆ?"

"ಎಲ್ಲಿಯದು ಹಣ? ನನಗೇನೂ ಗೊತ್ತಿಲ್ಲ," ಎಂದು ಸ್ಪಷ್ಟವಾಗಿ ಹೇಳಿದರು ಫೌಜದಾರರು.

ಆ ಗಾಢ ಮಿತ್ರರಲ್ಲಿ ಮನಸ್ತಾಪಕ್ಕಾರಂಭವಾಯಿತು.

ಪಠಾಣ ಫೌಜದಾರರು ಮಹಾರಾಷ್ಟ್ರದಲ್ಲಿದ್ದಾಗ ಇಷ್ಟು ಹಣವನ್ನೆಂದೂ ಕಂಡಿರಲಿಲ್ಲ. ಅವರು ಹುಂಬರೂರಿಗೆ ಬಂದಿಳಿದಾಗ ಅವರೊಡನಿದ್ದ ಸಾಮಾನುಗಳೆಂದರೆ ಎರಡು ಕುರ್ಚಿ, ಒಂದು ಮೇಜು, ಎರಡು ಹಾಸಿಗೆ. ಆಗ ಅವರ ಹತ್ತಿರವಿದ್ದ ಸೂಟುಗಳೂ ಎರಡೇ. ಅಂಥವರಿಗೆ ಪ್ರತಿ ತಿಂಗಳೂ ಸಾವಿರದ ಮೂರು ನೂರು ರೂಪಾಯಿ ಸಿಗುವಂತಾದಾಗ ಅದರಲ್ಲಿ ಪಾಲು ಕೊಡಲು ಮನಸ್ಸಾಗುವುದು ಹೇಗೆ? ಅದಲ್ಲದೆ, ಆ ನಗರದ ಅಧಿಕಾರಿಯೆಂದು ಜವಾಬ್ದಾರಿಯಿದ್ದುದು ಅವರ ಮೇಲೆಯೇ. ಡಿ. ಎಸ್. ಪಿ. ಯವರಾಗಲಿ ಇನ್ನಿತರ ಅಧಿಕಾರಿಗಳಾಗಲಿ ಅಲ್ಲಿಯ ಜೂಜಾಟದ ಕೇಂದ್ರಗಳನ್ನು ಕಂಡು ಹಿಡಿದರೆ ಹೆಸರು ಕೆಡುವುದು ಫೌಜದಾರರದು. ಆ ನಗರದೊಡನೆ ಇನ್ಸ್‌ಪೆಕ್ಟರರಿಗೇನೂ ಸಂಬಂಧವಿರಲಿಲ್ಲ. ನಾಲ್ಕು ತಾಲ್ಲೂಕುಗಳ ಮೇಲ್ವಿಚಾರಣೆಯ ಜವಾಬ್ದಾರಿ ಅವರದು. ನಗರಕ್ಕೆ ಸಂಬಂಧವಿಲ್ಲದ ಈ ಇನ್ಸ್‌ಪೆಕ್ಟರರಿಗೇಕೆ ಪಾಲು ಕೊಡಬೇಕು? ಅವರಿಗೆ ಕೊಡುವ ಐದುನೂರೇ ಬಹಳವಾಯಿತು. ಅದನ್ನು ಕಡಮೆಮಾಡಿ ಎರಡು ನೂರು ಮಾತ್ರ ಕೊಟ್ಟು ಉಳಿದುದನ್ನು ತಾವೇ ತೆಗೆದುಕೊಳ್ಳುವ ಯೋಚನೆ ಫೌಜದಾರರದು. ಆದರೆ, ಇನ್ಸ್‌ಪೆಕ್ಟರು ತನ್ನ ಮೇಲಾಧಿಕಾರಿ, ತನ್ನ ಬಗೆಗೆ ಕೋಪಿಸಿಕೊಂಡಲ್ಲಿ ಯಾವುದಾದರೊಂದು ಪ್ರಸಂಗದಲ್ಲಿ ತನ್ನನ್ನು ಸಿಲುಕಿಸಿ ಸಂಕಟಕ್ಕೆ ಗುರಿಮಾಡಬಹುದೆಂಬ ಅಂಜಿಕೆಯಿಂದ ಅವರು ಆ ಐದುನೂರು ರೂಪಾಯಿಗಳ ಬಗೆಗೆ ಹೆಚ್ಚು ಚಿಂತಿಸಿರಲಿಲ್ಲ. ಆದರೆ, ಇನ್ನೂ ಹೆಚ್ಚು ಹಣ ಕೊಡಲು ಮಾತ್ರ ಅವರು ಸಿದ್ಧರಿರಲಿಲ್ಲ.

ಗಾಢ ಮಿತ್ರರಿಬ್ಬರಿಗೂ ಹಣಾಹಣಿಗಾರಂಭವಾಯಿತು. ಬ್ರಾಹ್ಮಣರ ಮೇಲೆಲ್ಲ ಕೆಂಡ ಕಾರತೊಡಗಿದರು ಫೌಜದಾರರು. ಬ್ರಾಹ್ಮಣ ಪೋಲೀಸರಿಗೆ

ಸಿಕ್ಕುತ್ತಿದ್ದ ‘ಮಾಮೂಲ’ನ್ನೂ ನಿಲ್ಲಿಸಿಬಿಟ್ಟರು. ಮುಸಲ್ಮಾನ ಪೋಲೀಸರನ್ನೆಲ್ಲ ತಮ್ಮ ಪಕ್ಷಕ್ಕೆಳೆದುಕೊಂಡು ಬ್ರಾಹ್ಮಣರನ್ನು ಪೀಡಿಸುವ ಕಾರ್ಯಕಕ್ಕಾರಂಭಿಸಿದರು. ನಗರದಲ್ಲಿಯ ಪ್ರತಿಷ್ಠಿತ ಮುಸಲ್ಮಾನರೂ ಈ ಸಂಬಂಧದಲ್ಲಿ ಫೌಜದಾರರ ನೆರವಿಗೆ ನಿಂತರು.

ಆ ಹೊಲಸನ್ನೆಲ್ಲ ಕಂಡು ನನಗೆ ಹೇಸಿಕೆಯಾಗಿತ್ತು. ಅಲ್ಲಿಂದ ವರ್ಗ ಮಾಡಿಸಿಕೊಂಡು ಹೋಗಬೇಕೆಂಬ ಮನಸ್ಸಿದ್ದಿತಾದರೂ ಅಷ್ಟು ಬೇಗ ವರ್ಗವಾಗುವ ಸಂಭವವಿರಲಿಲ್ಲವಾದುದರಿಂದ ತೆಪ್ಪಗಿರಬೇಕಾಗಿ ಬಂದಿತ್ತು. ಕೆಲ ದಿನಗಳಿಂದ ನನ್ನ ದೇಹಸ್ಥಿತಿಯೂ ಸರಿಯಾಗಿರಲಿಲ್ಲ. ವಿಪರೀತ ತಲೆನೋವು. ಸಾಯಂಕಾಲ ಆರಂಭವಾದ ನೋವು ಬೆಳಗಾಗುವವರೆಗೂ ಇರುತ್ತಿತ್ತು. ರಾತ್ರಿಯಿಡೀ ನಿದ್ರೆಯಿರುತ್ತಿರಲಿಲ್ಲ. ಮತ್ತೆ ಕಚೇರಿಗೆ ಹೋಗುವುದು, ಸಾಯಂಕಾಲದವರೆಗೆ ದುಡಿಯುವುದು. ಮತ್ತೆ ರಾತ್ರಿ ತಲೆನೋವು. ಆಗಾಗ ಜ್ವರವೂ ಬರುತ್ತಿತ್ತು. ನಗರಸಭೆಯ ಆಸ್ಪತ್ರೆಯ ಔಷಧಿಯಿಂದ ಏನೂ ಉಪಯೋಗವಿರಲಿಲ್ಲ.

....ಜೂಜಾಟದ ಕೇಂದ್ರಗಳಿಗೆ ಮುತ್ತಿಗೆ ಹಾಕುವ ವಿಚಾರದಲ್ಲಿದ್ದರು ಇನ್ಸ್‌ಪೆಕ್ಟರರು. ಫೌಜದಾರರಿಗೆ ಗೊತ್ತಾಗದಂತೆ ಅದರ ಸಿದ್ಧತೆಮಾಡಿ ಏಕಾಏಕಿಯಾಗಿ ಮುತ್ತಿಗೆ ಹಾಕಿ ಫೌಜದಾರರಿಗೆ ಬುದ್ಧಿ ಕಲಿಸುವ ಹೊಂಚು ಅವರದಾಗಿತ್ತು.

ಒಂದು ದಿನ ಸಾಯಂಕಾಲ ಅವರು, ಬೇರೊಂದು ಊರಿನಿಂದ ಪೋಲಿಸರನ್ನು ಕರೆಯಿಸಿ, ನಮ್ಮ ಕಚೇರಿಯ ಸಮೀಪದಲ್ಲಿಯೇ ಇದ್ದ ಜೂಜಾಟದ ಕೇಂದ್ರವೊಂದರ ಮೇಲೆ ದಾಳಿಮಾಡಿ, ಆಟವಾಡುತ್ತಿದ್ದ ಮೂವತ್ತು ಜನರನ್ನು ಬಂಧಿಸಿ ಅಲ್ಲಿದ್ದ ಹಣವನ್ನು ಜಪ್ತು ಮಾಡಿದರು.

ನಾನು ನನ್ನ ಕೆಲಸ ಮುಗಿಸಿ, ಮನೆಗೆ ಹೋಗಿ ಮಲಗಿಕೊಂಡಿದ್ದೆ. ರಾತ್ರಿಯ ಒಂಭತ್ತು ಗಂಟೆಯ ಸಮಯಕ್ಕೆ ಫೌಜದಾರರು ನಮ್ಮ ಮನೆಗೆ ಬಂದು ನನ್ನನ್ನು ಕೂಗಿದರು. ನಾನು ತಲೆನೋವಿನಿಂದ ಮಲಗಿಕೊಂಡಿರುವುದು ಗೊತ್ತಾಗುತ್ತಲೂ ನೇರವಾಗಿ ಒಳಗೆ ಬಂದು ನನ್ನ ಹತ್ತಿರ ಕುಳಿತುಕೊಂಡರು, ನನ್ನ ಹಣೆ ಮುಟ್ಟಿ ನೋಡಿದರು. ಅದು ಕಾಯ್ದ ಕಬ್ಬಿಣದಂತಾಗಿತ್ತು.

ಫೌಜದಾರರ ಮುಖದ ಮೇಲೆ ಭೀತಿ ಸ್ಪಷ್ಟವಾಗಿ ಎದ್ದು ಕಾಣುತ್ತಿತ್ತು.

"ಇನ್ಸ್‌ಪೆಕ್ಟರು ನನ್ನ ಬಗ್ಗೆ ರಿಪೋರ್ಟ್ ಮಾಡುತ್ತಾರೆ. ಈ ಪ್ರಸಂಗದಿಂದ ಹ್ಯಾಗೆ ಪಾರಾಗುವದು ಶಿವಣ್ಣಾ?"

ಆ ಸಮಯದಲ್ಲಿ ಅವರ ವಿಚಾರವಾಗಿ ನನಗೆ ಕನಿಕರ ಬರದಿರಲಿಲ್ಲ. ಹಿಂದೆ ಅವರಿಂದಾದ ಕಿರುಕುಳವನ್ನೆಲ್ಲ ಮರೆತು ಈ ಸಂದರ್ಭದಲ್ಲಿ ಅವರನ್ನು ಉಳಿಸುವ ದಾರಿ ಹುಡುಕತೊಡಗಿದೆ.

"ಏನಾದರೂ ಉಪಾಯ ಮಾಡಪ್ಪಾ!" ಅವರು ಅಂಗಲಾಚಿ ಬೇಡಿಕೊಂಡರು.

ಛಟಛಟನೆ ಸಿಡಿಯುತ್ತಿದ್ದ ತಲೆಯನ್ನೂ ಅಂಕೆಯಲ್ಲಿರಿಸಿಕೊಂಡು ನಾನು ಯೋಚಿಸತೊಡಗಿದೆ. ಜೂಜಾಟದ ಕೇಂದ್ರಗಳ ಮೇಲೆ ದಾಳಿ ಮಾಡುವುದರ ಮುನ್ನ ಮೊದಲನೆಯ ವರ್ಗದ ಮ್ಯಾಜಿಸ್ಟ್ರೇಟರ 'ವಾರಂಟ್' ದೊರಕಿಸಬೇಕೆಂಬ ನಿಯಮವಿತ್ತು. ಹುಂಬರೂರಿನಲ್ಲಿದ್ದ ಮೊದಲನೆಯ ವರ್ಗದ ಮ್ಯಾಜಿಸ್ಟ್ರೇಟರು ಮೂರು ಜನರು. ಒಬ್ಬರು ಬ್ರಾಹ್ಮಣರು, ಒಬ್ಬರು ಲಿಂಗವಂತರು, ಇನ್ನೊಬ್ಬರು ಮುಸಲ್ಮಾನರು. ಬ್ರಾಹ್ಮಣ ಮ್ಯಾಜಿಸ್ಟ್ರೇಟರಿಂದಲೇ ಇನ್ಸ್‌ಪೆಕ್ಟರರು 'ವಾರಂಟ್' ದೊರಕಿಸಿರಬಹುದೆಂದು ನಾನು ತರ್ಕಿಸಿದೆ. ಫೌಜದಾರರನ್ನು ಆ ಪ್ರಸಂಗದಿಂದ ಪಾರುಮಾಡಲೆಂದು, ಆ ಜೂಜಾಟದ ಕೇಂದ್ರಕ್ಕೆ ಮುತ್ತಿಗೆ ಹಾಕುವುದಕ್ಕಾಗಿ ಅವರೂ 'ವಾರಂಟ್' ದೊರಕಿಸಿದ್ದರೆಂದು ಸಾಧಿಸುವುದು ಅವಶ್ಯವಾಗಿತ್ತು.

ಹಿಂದಿನ ದಿನವೊಂದರ ತಾರೀಕು ಹಾಕಿ ತಕ್ಷಣವೆ 'ವಾರಂಟ್' ಕೊಡುವಂಥ ಮ್ಯಾಜಿಸ್ಟ್ರೇಟರೊಬ್ಬರನ್ನು ನಾವು ಮೊರೆಹೋಗಬೇಕಾಗಿತ್ತು. ಬ್ರಾಹ್ಮಣ ಮ್ಯಾಜಿಸ್ಟ್ರೇಟರಾಗಲಿ, ಲಿಂಗವಂತ ಮ್ಯಾಜಿಸ್ಟ್ರೇಟರಾಗಲಿ ನಮ್ಮ ಫೌಜದಾರರಿಗೆ ಕಾನೂನುಬಾಹಿರವಾದ ರೀತಿಯಲ್ಲಿ ಅಂಥ 'ವಾರಂಟ್' ಕೊಡುವ ಸಂಭವವಿರಲಿಲ್ಲ. ಮುಸಲ್ಮಾನ್ ಮ್ಯಾಜಿಸ್ಟ್ರೇಟರು ಜಾತಿಯ ಅಭಿಮಾನ ಹಿಡಿದು, ಫೌಜದಾರರನ್ನುಳಿಸಲು ಆ ಕೆಲಸಕ್ಕೆ ಸಿದ್ಧರಾಗಬಹುದೆಂಬ ಆಸೆ ನನಗಿತ್ತು.

ಹಾಗೆ 'ವಾರಂಟ್' ದೊರಕಿಸುವ ಮುನ್ನ ನಾವು ಮುತ್ತಿಗೆ ಹಾಕುವ ಮನೆಯ 'ಚಕಬಂದಿ' (ಸುತ್ತಮುತ್ತಲಿನ ಮನೆ ಮತ್ತು ಇತರ ಸ್ಥಳಗಳ ನಿರ್ದೇಶ) ಒಪ್ಪಿಸಬೇಕಾಗುವುದು. ನಮ್ಮಲ್ಲಿನ ಒಬ್ಬ ನಂಬಿಗಸ್ಥ ಪೋಲೀಸನನ್ನು 'ಚಕಬಂದಿ' ತರಲು ಕಳಿಸಿದೆವು. ಆದರೆ, ಆ ವೇಳೆಗಾಗಲೇ ಇನ್ಸ್

ಪೆಕ್ಟರರು ಆ ಮನೆಯ ಸುತ್ತಲೂ ಬಲವಾದ ಕಾವಲು ಇರಿಸಿದ್ದರು. ಆದರೂ ನಮ್ಮ ಪೋಲೀಸ ಅಲ್ಲಿಗೆ ಹೋಗಿ ಜಾಣತನದಿಂದ ಅದರ 'ಚಕಬಂದಿ' ಸಂಪಾದಿಸಿ ತಂದ.

ಆಗ ರಾತ್ರಿ ಹನ್ನೆರಡು ಗಂಟೆ. ನಾನು ಫೌಜದಾರರ ಮನೆಗೆ ಹೋಗಿ ಅವರ ಟೈಪ್‌ರೈಟರಿನ ಮೇಲೆ 'ವಾರಂಟ್' ಕಾಗದ ತಯಾರಿಸಿದೆ. ಅವರು ಅದನ್ನು ತೆಗೆದುಕೊಂಡು ಮ್ಯಾಜಿಸ್ಟ್ರೇಟರ ಮನೆಗೆ ಹೊರಟರು.

ಅಂಥ ನಟ್ಟಿರುಳಿನಲ್ಲಿ ತಮ್ಮನ್ನು ನಿದ್ರೆಯಿಂದೆಬ್ಬಿಸಿದುದಕ್ಕಾಗಿ ಕೋಪಿಸಿಕೊಂಡಿದ್ದ ಮ್ಯಾಜಿಸ್ಟ್ರೇಟರು ಫೌಜದಾರರು ಹೇಳುವುದನ್ನು ಪೂರ್ತಿಯಾಗಿ ಕೇಳಿಕೊಳ್ಳದೆ, ಅಂಥ ಕೆಲಸವನ್ನೆಲ್ಲ ತಾವು ಮಾಡುವುದಿಲ್ಲವೆಂದು ಹೇಳಿ ಅವರನ್ನು ಕಳಿಸಿಬಿಟ್ಟರು.

ಇನ್ನೇನು ಮಾಡಬೇಕು? 'ವಾರಂಟ'ನ ಮೇಲೆ ಮ್ಯಾಜಿಸ್ಟ್ರೇಟರ ಸಹಿಯನ್ನು ದೊರಕಿಸುವುದಂತೂ ಅತ್ಯಾವಶ್ಯಕವಾಗಿತ್ತು. ಅವರನ್ನು ಕಾಡಿ ಬೇಡಿ, ಕೊನೆಗೆ ಬೆದರಿಸಿಯಾದರೂ ಅವರ ಸಹಿ ಪಡೆಯಬೇಕು. ಥಟ್ಟನೆ ಹಿಂದಿನ ಸಂಗತಿಯೊಂದು ನನಗೆ ನೆನಪಾಯಿತು. ಆ ಮ್ಯಾಜಿಸ್ಟ್ರೇಟರ ಮನೆಯಲ್ಲಿ ಒಂದು ಮದುವೆ ನಡೆದಾಗ ಅವರಿಗೆ ಅಕ್ಕಿ ಸಾಲದೆ ಹೋಗಿತ್ತು. ಅವರು ನಮ್ಮನ್ನು ಕೇಳಿಕೊಂಡಿದ್ದರು. ಸಂಗಪ್ಪನೂ ನಾನೂ ಪ್ರಯತ್ನಪಟ್ಟು ಬೇರೊಂದು ತಾಲ್ಲೂಕಿನಿಂದ ಒಂದು ಚೀಲ ಸಣ್ಣಕ್ಕಿಯನ್ನು ಕಾನೂನುಬಾಹಿರವಾದ ರೀತಿಯಲ್ಲಿ ಗುಪ್ತವಾಗಿ ತರಿಸಿ ಅವರಿಗೆ ನೆರವಾಗಿದ್ದೆವು. "ಅವರು ಹೇಗೆ ಸಹಿ ಮಾಡುವುದಿಲ್ಲವೋ ನೋಡುವಾ," ಎಂದುಕೊಂಡು ನಾನೇ ಎದ್ದು ಹೊರಟೆ.

ನನ್ನನ್ನು ನೋಡುತ್ತಲೂ ಅವರಿಗೆ ಆ ಸಣ್ಣಕ್ಕಿಯ ಸಂಗತಿ ನೆನಪಾಗಿರಲು ಸಾಕು. ಮತ್ತೊಂದು ಮಾತನಾಡದೆ 'ವಾರಂಟ'ನ ಮೇಲೆ ಸಹಿ ಹಾಕಿದರು. ತಾರೀಖನ್ನು ನಾನೇ ಹಾಕುವುದಾಗಿ ನಾನು ಹೇಳಿದೆ. ಅವರು ಬೇಡವೆನ್ನಲಿಲ್ಲ. ಆದರೆ, ಅದರ ಮೇಲೆ ಅವರ ಕೋರ್ಟಿನ 'ಸೀಲ್' ಬೀಳಬೇಕಲ್ಲವೆ? ಅವರ ಕೋರ್ಟು ಇದ್ದುದು ತಾಲ್ಲೂಕು ಕಚೇರಿಯಲ್ಲಿ. ಅಲ್ಲಿಯೇ ಸಬ್‌ಜೈಲು, ಮತ್ತು ಟ್ರೆಝುರಿ. ಅವುಗಳ ಕಾವಲಿಗಾಗಿ ಪೋಲೀಸ್ ಪಡೆ. ರಾತ್ರಿಯ ಹೊತ್ತಿನಲ್ಲಿ ನಾವು ಅಲ್ಲಿಗೆ ಹೋದ ಸುದ್ದಿಯನ್ನು ಆ ಪೋಲೀಸರು ಇನ್ಸ್‌ಪೆಕ್ಟರರಿಗೆ ತಿಳಿಸುವ ಸಂಭವವಿತ್ತು.

"ಆ ಬಗ್ಗೆ ನಾನೇನೂ ಮಾಡಲಾರೆ," ಎಂದು ಕೈಕೊಡವಿದರು ಮ್ಯಾಜಿಸ್ಟ್ರೇಟರು.

ಅವರನ್ನು ಬೀಳ್ಕೊಂಡು, ಅವರ ಸಿಪಾಯಿಯ ಮನೆಗೆ ಹೋಗಿ ಅವನನ್ನು ಎಬ್ಬಿಸಿದೆವು. ಅವನು ಹೆಂಡಗುಡುಕ. ಸ್ವಲ್ಪ ಮದ್ಯವನ್ನು ಅವನಿಗೆ ಕೊಟ್ಟು ನಮ್ಮ ಯೋಜನೆಯೆಲ್ಲವನ್ನೂ ವಿವರಿಸಿ ಹೇಳಿದೆವು. ಮದ್ಯದ ಮತ್ತಿನಲ್ಲಿ ಎಂಥ ಸಾಹಸಕ್ಕೂ ಅವನು ಸಿದ್ಧನಾಗಿದ್ದ.

ಅವನನ್ನು ಕರೆದುಕೊಂಡು ತಾಲ್ಲೂಕು ಕಚೇರಿಯ ಹಿಂಭಾಗಕ್ಕೆ ಬಂದು, ಗೋಡೆಯನ್ನೇರಿ ಇಳಿದು, ಮ್ಯಾಜಿಸ್ಟ್ರೇಟರ ಕಚೇರಿ ಕೊಠಡಿಯ ಹಿಂದೆ ಬಂದೆವು. ಗಾಜು ಒಡೆದಿದ್ದ ಕಿಟಕಿಯೊಂದನ್ನು ತೆರೆಯುವುದು ಕಷ್ಟಕರವಾದ ಕೆಲಸವೇನೂ ಆಗಿರಲಿಲ್ಲ. ಆ ಕಿಟಕಿಗೆ ಕಬ್ಬಿಣದ ಗಜಗಳೂ ಇರಲಿಲ್ಲವಾದುದರಿಂದ ಸಿಪಾಯಿಯನ್ನು ಕೊಠಡಿಯೊಳಕ್ಕೆ ಸೇರಿಸುವುದೂ ಸುಲಭವಾಗಿತ್ತು. ಅವನು ಕತ್ತಲಲ್ಲೇ ಒಳಹೊಕ್ಕು, ಪೆಟ್ಟಿಗೆ ತೆಗೆದು ನಮಗೆ ಬೇಕಾಗಿದ್ದ 'ಸೀಲ್' ತೆಗೆದುಕೊಂಡು ಬಂದ. ಆದರೆ ಕಿಟಕಿಯಿಂದ ಹೊರಗಡೆ ಬರುವಾಗ ಮದ್ಯದ ಅಮಲಿನಲ್ಲಿ ಜೋಲಿ ತಪ್ಪಿ ನೆಲಕ್ಕೆ ಬಿದ್ದುಬಿಟ್ಟ. ಸದ್ದಾಗುತ್ತಲೂ ಸಬ್-ಜೈಲಿನ ಪಹರೆಯ ಸಿಪಾಯಿ "ಹುಕುಮ್‌ಸಿಡರ್!" (Who comes there) ಎಂದು ಕೂಗಿದ. ಅಷ್ಟರಲ್ಲಿ ಮ್ಯಾಜಿಸ್ಟ್ರೇಟರ ಸಿಪಾಯಿಯನ್ನು ಗೋಡೆಯಿಂದ ದಾಟಿಸಿ ನಾವೂ ಪಾರಾಗಿದ್ದೆವು.

'ವಾರಂಟಿ'ನ ಮೇಲೆ 'ಸೀಲ್' ಒತ್ತಿ, ಸಿಪಾಯಿಗೆ ಐದು ರೂಪಾಯಿ ಬಕ್ಷೀಸು ಕೊಟ್ಟು ಮತ್ತೆ ಫೌಜದಾರರ ಮನೆ ಸೇರಿದುದಾಯಿತು. ಮೂರು ದಿವಸಗಳ ಹಿಂದಿನ ತಾರೀಖು ಹಾಕಿ ಕೊನೆಗೊಮ್ಮೆ ಕಾನೂನುಬದ್ಧ 'ವಾರಂಟ್' ಸಿದ್ಧಗೊಳಿಸಿದುದಾಯಿತು.

ಅಂದು ರಾತ್ರೆ ನಾವು ಮಾಡಿದ ಸಾಹಸ ಕೃತ್ಯಗಳನ್ನು ಜ್ಞಾಪಿಸಿಕೊಂಡರೆ ಈಗಲೂ ನನ್ನ ಮೈಮೇಲೆ ಮುಳ್ಳು ಬರುತ್ತವೆ. ತಾಲ್ಲೂಕು ಕಚೇರಿಯಲ್ಲಿ ನಾವು ಸಿಕ್ಕಿಬಿದ್ದಿದ್ದರೆ ನಮ್ಮ ನೌಕರಿ ಕಳೆದುಕೊಳ್ಳುವುದಲ್ಲದೆ ಶಿಕ್ಷೆ ಹೊಂದಿ ಸೆರೆಮನೆ ಸೇರುವ ಪ್ರಸಂಗ ಬರುತ್ತಿತ್ತು. ಅಂಥ ಗಂಡಾಂತರಕಾರಿ ಕೃತ್ಯಕ್ಕೆ ನಾನು ತೊಡಗಲು ಮುಖ್ಯ ಕಾರಣವೇನೆಂಬುದು ಈಗ ನನಗೆ ಹೊಳೆಯುತ್ತದೆ. ಜಾತೀಯ ವಿದ್ವೇಷ ಹುಟ್ಟಿಸಿ ಪೋಲೀಸ್ ಪಡೆಯನ್ನೆಲ್ಲ ಕೆಡಿಸುತ್ತಿದ್ದ ಆ ಇನ್ಸ್

ಪೆಕ್ಟರರ ಮುಖಭಂಗವಾಗಬೇಕೆಂಬುದೇ ನನ್ನ ಬಯಕೆಯಾಗಿತ್ತು. ಅಂಥ ಸಾಹಸಕ್ಕೆ ನನ್ನನ್ನು ಪ್ರೇರೇಪಿಸಿದ್ದು ಆ ಬಯಕೆಯೇ.

....'ವಾರಂಟು' ಸಿದ್ಧವಾಗುವುದೊಂದೇ ತಡ, ಡಿ. ಎಸ್. ಪಿ. ಯವರಿಗೆ ವರದಿಯೂ ಸಿದ್ಧವಾಯಿತು. "ಇನ್ಸ್‌ಪೆಕ್ಟರರು ಅಂದು ಮುತ್ತಿದ ಆ ಜೂಜಾಟದ ಕೇಂದ್ರಕ್ಕೆ ಮುತ್ತಿಗೆ ಹಾಕಲು ನಾವೂ 'ವಾರಂಟ್' ಪಡೆದುಕೊಂಡಿದ್ದೆವು. ನಗರದ ಸಂತೆಯ ದಿನ ಅಲ್ಲಿ ಹೆಚ್ಚು ಜನ ಸೇರಿದಾಗ ದಾಳಿ ನಡೆಸಿದರೆ ಅವರೆಲ್ಲರೂ ಸಿಕ್ಕಿಬೀಳುವರೆಂಬ ಯೋಚನೆಯಿಂದ ನಾವು ಸಂತೆಯ ದಿನಕ್ಕಾಗಿ ಕಾದು ಕುಳಿತಿದ್ದೆವು. ಆದರೆ, ಇನ್ಸ್‌ಪೆಕ್ಟರರು ನಮಗೊಂದು ಸೂಚನೆಯನ್ನೂ ಕೊಡದೆ ತಾವೇ ದಾಳಿ ನಡಿಸಿ ನೂರಾರು ಜನರನ್ನು ಬಂಧಿಸಬಹುದಾಗಿದ್ದ ಸಂಧಿಯನ್ನು ವ್ಯರ್ಥಗೊಳಿಸಿದ್ದರು. ದಾಳಿ ನಡಸುವ ಮುನ್ನ ಅವರು ನಮ್ಮನ್ನು ವಿಚಾರಿಸಿದ್ದಲ್ಲಿ ನಾವು ಅವರನ್ನು ತಡೆಯಬಹುದಾಗಿತ್ತು. ಸಂತೆಯ ದಿನ, ಅವರ ನೇತೃತ್ವದಲ್ಲಿಯೇ ದಾಳಿ ಮಾಡಬಹುದಾಗಿತ್ತು. ನಮಗೆ ಒಂದು ಸುದ್ದಿಯನ್ನೂ ತಿಳಿಸದೆ ಇನ್ಸ್‌ಪೆಕ್ಟರರು ಹೀಗೆ ದಾಳಿ ಮಾಡಲು ಅವರ ದೃಷ್ಟಿಯಲ್ಲಿ ಕಾರಣಗಳೂ ಇರಬಹುದು. ಹಣದಾಸೆಗಾಗಿ ನಾವೇ ಆ ಕೇಂದ್ರಗಳನ್ನು ನಡೆಯಗೊಟ್ಟಿರುವುದಾಗಿ ಮೇಲಾಧಿಕಾರಿಗಳಿಗೆ ತಿಳಿಸಿ ನಮ್ಮ ಹೆಸರು ಕೆಡಿಸುವ ಯೋಚನೆಯೂ ಅವರಿಗಿರಬಹುದು. ನಮ್ಮ ಹಿಂದಿನ ಫೌಜದಾರರೊಡನೆಯೂ ಇವರು ಹೀಗೇ ವರ್ತಿಸುತ್ತಿದ್ದರು. ದುಡ್ಡಿನಾಸೆಗಾಗಿ ಇವರೇ ಜೂಜಾಟದ ಕೇಂದ್ರಗಳನ್ನಾರಂಭಿಸಲು ಹೇಳುತ್ತಿದ್ದರಾದರೂ ನಾವು ಅವರ ಮಾತು ಕೇಳಿರಲಿಲ್ಲವಾದುದರಿಂದ ಮನಸ್ತಾಪವುಂಟಾಗಿತ್ತು. ಈಗ ಅವರು ನಮ್ಮನ್ನು ಫಜೀತಿ ಮಾಡುವ ಉದ್ದೇಶದಿಂದಲೇ ಈ ಕೇಂದ್ರವಾರಂಭವಾಗುವಂತೆ ಮಾಡಿ ಅದರ ಮೇಲೆ ದಾಳಿ ನಡೆಸಿದ್ದಾರೆ," ಎಂದು ಆ ವರದಿಯಲ್ಲಿ ಉಲ್ಲೇಖಿಸಿತ್ತು. ಅದನ್ನು ತೆಗೆದುಕೊಂಡ ಫೌಜದಾರರು ಬೆಳಗಿನ ರೈಲಿಗೆ ಓರೆಕೋರೆ ನಗರಕ್ಕೆ ಹೊರಟರು. ಡಿ. ಎಸ್. ಪಿ. ಯವರನ್ನು ಸಮಕ್ಷಮ ಕಂಡು ವರದಿಯನ್ನೊಪ್ಪಿಸಲು.

ಇನ್ಸ್‌ಪೆಕ್ಟರರು ತಾವು ಬಂಧಿಸಿದ ಆಪಾದಿತರನ್ನು ಜಾಮೀನಿನ ಮೇಲೆ ಬಿಟ್ಟು ಜಪ್ತ್ ಮಾಡಿದ ಹಣವನ್ನೂ ಇನ್ನಿತರ ಸಾಮಗ್ರಿಗಳನ್ನೂ ತಮ್ಮ ವರದಿಯೊಂದಿಗೆ ನಮ್ಮ ಕಚೇರಿಗೆ ಕಳಿಸಿದರು. ನಾವು ಅದನ್ನು ದಾಖಲು ಮಾಡಿಕೊಂಡೆವು. ಇನ್ಸ್‌ಪೆಕ್ಟರರು ತಮ್ಮ ವರದಿಯನ್ನು ಕೊಟ್ಟು ಒಬ್ಬ ಸಿಪಾಯಿ

ಯನ್ನು ಓರೆಕೋರೆಗೆ ಕಳಿಸಿದರು. ಫೌಜದಾರರು ಹೊರಟಿದ್ದ ರೈಲಿನಲ್ಲಿಯೇ ಅವನೂ ಹೊರಟ.

ಫೌಜದಾರರು ನೇರವಾಗಿ ಸಾಹೇಬರ ಬಂಗಲೆಗೇ ಹೋಗಿ ಅವರನ್ನು ಕಂಡು, ವರದಿಯನ್ನು ಕೊಟ್ಟು, ಇನ್ಸ್‌ಪೆಕ್ಟರರು ತಮಗೂ ತಮ್ಮ ಕೈಕೆಳಗಿನ ಪೋಲೀಸರಿಗೂ ಕೊಡುತ್ತಿದ್ದ ಕಿರುಕುಳಗಳ ಬಗೆಗೆ ದೂರಿಕೊಂಡರು. ಅಂಥ ಚಿಲ್ಲರೆ ವರ್ತನೆಯನ್ನು ಸಾಹೇಬರು ಸಹಿಸುತ್ತಿರಲಿಲ್ಲ. ನಮ್ಮ ಫೌಜದಾರರು ಅಲ್ಲಿಂದ ಹೊರಟು ಬರುತ್ತಲೂ ಇನ್ಸ್‌ಪೆಕ್ಟರರು ಕಳಿಸಿದ್ದ ವರದಿ ಸಾಹೇಬರ ಕೈ ಸೇರಿತು. ಇನ್ಸ್‌ಪೆಕ್ಟರರ ಬಗೆಗೆ ಮುನಿದುಕೊಂಡಿದ್ದ ಸಾಹೇಬರು ಆ ವರದಿ ಯಲ್ಲಿನ ಒಂದು ಮಾತನ್ನೂ ನಂಬಲಿಲ್ಲ. ಫೌಜದಾರರ ಬಗೆಗೆ ದ್ವೇಷವಿಟ್ಟು ಕೊಂಡು ಇನ್ಸ್‌ಪೆಕ್ಟರರು ಬೇಕೆಂತಲೇ ದಾಳಿ ನಡಸಿ ಕೆಲಸ ಕೆಡಿಸಿದರೆಂದೇ ಸಾಹೇಬರು ಭಾವಿಸಿದರು.

ಆ ರಾತ್ರಿ ನಾವು ಮಾಡಿದ ಸಹಸಾದಿಗಳ ವಿಚಾರ ಇನ್ಸ್‌ಪೆಕ್ಟರರಿಗೇನು ಗೊತ್ತು! "ಅಪ್ಪಣ್ಣವರನ್ನು ಹಿಂಬಡತಿ ಮಾಡಿಸಿದೆ, ಪಠಾಣನನ್ನು ಮನೆಗೆ ಕಳಿಸುತ್ತೇನೆ," ಎಂದು ಅವರು ಜಂಬ ಕೊಚ್ಚಿಕೊಳ್ಳುತ್ತಾ ನಾಲ್ಕು ದಿನ ಸಂತೋಷದಿಂದ ಮೆರೆಯುತ್ತಿದ್ದರು.

ಐದನೆಯ ದಿನ ಡಿ. ಎಸ್. ಪಿ. ಯವರ ಕಾಗದ ಬಂತು: "ಫೌಜ ದಾರರಿಗೆ ತಮ್ಮ ಕರ್ತವ್ಯದ ಅರಿವು ಚೆನ್ನಾಗಿಯೇ ಇದೆ. ಅವರೇ ಆ ಕೇಂದ್ರದ ಮೇಲೆ ಮುತ್ತಿಗೆ ಹಾಕುವುದರಲ್ಲಿದ್ದಾಗ ಅವರ ಕೆಲಸಕ್ಕೆ ಅಡ್ಡಿ ಮಾಡಿದ್ದೀರಿ. ಈ ಬಗ್ಗೆ ಕೂಡಲೇ ನಿಮ್ಮ ಜವಾಬು ಕಳಿಸಿರಿ," ಎಂದು ವಿಧಿಸಿದ್ದರು ಸಾಹೇ ಬರು. ಇನ್ಸ್‌ಪೆಕ್ಟರರು ಭೂಮಿಗಿಳಿದುಹೋದರು. ನಾವು ಹೂಡಿದ ತಂತ್ರ ವೇನೆಂಬುದೇ ಅವರಿಗೆ ಗೊತ್ತಾಗಲಿಲ್ಲ.

ಆ ಪ್ರಕರಣದಲ್ಲಿ ಮುಖಭಂಗಿತರಾದ ಮೇಲೂ ಇನ್ಸ್‌ಪೆಕ್ಟರು ಸುಮ್ಮ ನಾಗಲಿಲ್ಲ. ಫೌಜದಾರರನ್ನು ಫಜೀತಿಮಾಡಲು ಹೊಸ ಹೊಸ ಉಪಾಯ ಗಳನ್ನು ಹುಡುಕತೊಡಗಿದರು.

# ೨೭

## ಇನ್ಸ್‌ಪೆಕ್ಟರರಿಗೆ ಹಿಂಬಡತಿಯಾಯಿತು

ಒಂದು ದಿನ ಮಧ್ಯಾಹ್ನ ನಾನು ಕಚೇರಿಯಲ್ಲಿ ಕುಳಿತು ಬರೆಯುತ್ತಿದ್ದಾಗ ಪೋಲೀಸನೊಬ್ಬ ಬಂದು ಒಂದು ಅಪರಾಧದ ಸಮಾಚಾರ ತಿಳಿಸಿದ. ಮುನ್ನಾ ದಿನ ಸಾಯಂಕಾಲ, ಆ ನಗರದ ಗಣ್ಯ ವರ್ತಕರೊಬ್ಬರ ಮಗನೊಬ್ಬ, ಪಕ್ಕದ ಮನೆಯ, ೧೦ - ೧೨ ವರ್ಷ ವಯಸ್ಸಿನ ಬಾಲಿಕೆಯರನ್ನು ತನ್ನ ಕೊಠಡಿಗೆ ಕರೆದೊಯ್ದು ಅವರಿಗೆ ಸಿಹಿತಿಂಡಿ ಕೊಟ್ಟು ಅವರಿಬ್ಬರ ಮೇಲೂ ಬಲಾತ್ಕಾರ ಮಾಡಿದ್ದ. ಹುಡುಗಿಯರಿಗೆ ಗಾಯವಾಗಿ ರಕ್ತಸ್ರಾವವಾಗಿತ್ತು. ಅವರ ಪಾಲಕರು ಆ ಹುಡುಗಿಯರನ್ನು ಆಸ್ಪತ್ರೆಗೆ ಸೇರಿಸಿದ್ದರು. ಆಸ್ಪತ್ರೆಯ ನರ್ಸಿನ ಮೂಲಕ ಆ ಪೋಲೀಸನಿಗೆ ಸುದ್ದಿ ತಿಳಿದಿತ್ತು.

"ಅವರು ನಮುಗ್ಯಾಕೆ ಫಿರ್ಯಾದು ಕೊಡಲಿಲ್ಲವೊ!"

"ಫಿರ್ಯಾದು ಕೊಡುವ ಮನಸ್ಸಿದ್ದ ಹಾಗೆ ಕಾಣುವದಿಲ್ಲ. ಹುಡುಗಿಯರ ತಂದೆಗೆ ಸಾವಿರ ರೂಪಾಯಿ ಕೊಟ್ಟು ಕೈಕಾಲು ಬಿದ್ದು ಬೇಡಿಕೊಂಡಿದ್ದಾನಂತೆ," ಎಂದ ಪೋಲೀಸ.

ಫೌಜದಾರರು ಆ ಹುಡುಗಿಯರ ತಂದೆಯನ್ನು ಕರೆಯಿಸಿಕೊಂಡು ಫಿರ್ಯಾದು ಕೊಡಲು ಹೇಳಿದರು. ಮರುದಿನ ಕೊಡುವದಾಗಿ ಹೇಳಿ ಅವನು ಹೊರಟುಹೋದ.

ಈ ವಿಷಯ ಕಚೇರಿಯ ಕಾರಕೂನನಿಗೆ ತಿಳಿಯುತ್ತಲೂ, ಮಧ್ಯಾಹ್ನದ ಊಟಕ್ಕೆಂದು ಮನೆಗೆ ಹೋಗಿದ್ದಾಗ ಆತ ಇನ್ಸ್‌ಪೆಕ್ಟರರ ಹತ್ತಿರ ಹೋಗಿ ಆ ಸಮಾಚಾರವನ್ನು ಅವರ ಕಿವಿಗೆ ಹಾಕಿದ.

"ಆರೋಪಿಯಿಂದ ಸಾಕಷ್ಟು ರೊಕ್ಕ ತಿಂದು ಫಿರ್ಯಾದು ತೆಗೆದುಕೊಳ್ಳುವದನ್ನು ಬಿಟ್ಟಿರಬೇಕು, ಅಲ್ಲವೆ?" ಎಂದರು ಇನ್ಸ್‌ಪೆಕ್ಟರು.

ವಾಸ್ತವವಾಗಿ ಆಪಾದಿತ ನಮ್ಮ ಕಚೇರಿಗೆ ಬಂದೇ ಇರಲಿಲ್ಲ. ನಾವೂ ಅವನ ಮನೆಗೆ ಹೋಗಿರಲಿಲ್ಲ. ಫಿರ್ಯಾದುದಾರರು ಫಿರ್ಯಾದು ಕೊಟ್ಟಿರಲಿಲ್ಲವೆಂದು ಅದು ದಾಖಲಾಗಿರಲಿಲ್ಲ, ಅಷ್ಟೆ.

ನಾವೆಲ್ಲರೂ ಕಚೇರಿಯಿಂದ ಮನೆಗೆ ಹೋದ ವೇಳೆಯಲ್ಲಿ ಇನ್ಸ್‌ಪೆಕ್ಟರರು ಕಚೇರಿಗೆ ಬಂದು, ಅಪರಾಧಗಳ ರಜಿಸ್ಟರ್ ತರಿಸಿ ಅದರ ಮೇಲೆ ಎರಡು ಕಾಲಂಗಳ ತುಂಬಾ ದೊಡ್ಡದಾಗಿ ಸಹಿಹಾಕಿ ಹೋದರು. ಎರಡು ಕಾಲಂ ಎಂದರೆ ಅರ್ಧ ಪುಟದಷ್ಟು ಸ್ಥಳ ಹಾಳಾಯಿತು. ಮಾರನೆಯ ದಿನ ನಾವು ಕಚೇರಿಗೆ ಹೋಗುತ್ತಲೂ ರಾತ್ರೆ ನಡೆದಿದ್ದುದೆಲ್ಲವೂ ಗೊತ್ತಾಯಿತು. ಕಂಠದವರೆಗೂ ಕುಡಿದು ಬಂದಿದ್ದ ಇನ್ಸ್‌ಪೆಕ್ಟರರು ಅಮಲಿನಲ್ಲಿ ಮೈಮರೆತು ಹಾಗೆ ಸಹಿ ಮಾಡಿದ್ದರು. ಕುರ್ಚಿಯ ಮೇಲೆ ಕುಳಿತುಕೊಳ್ಳುವಾಗ ಜೋಲಿ ತಪ್ಪಿ ಕೆಳಗುರುಳಿದ್ದರು. ಅವರನ್ನೆಬ್ಬಿಸಲು ಮುಂದುವರಿದಿದ್ದ ಠಾಣಾ ಅಮಲ್ದಾರರನ್ನು ಅವಾಚ್ಯವಾಗಿ ಬಯ್ದು ತಮ್ಮ ಕೈಯಲ್ಲಿದ್ದ ಬೆತ್ತದಿಂದ ಹೊಡೆದಿದ್ದರು. ಡಿ. ಎಸ್. ಪಿ. ಯವರಿಗೆ ಫೋನ್ ಮಾಡುವುದಾಗಿ ಹೇಳಿ ರಿಸೀವರನ್ನು ಕೈಗೆತ್ತಿಕೊಂಡು ಅದನ್ನು ತಿರುವಿ ಹಿಡಿದು ಏನೇನನ್ನೋ ಬಡಬಡಿಸಿದ್ದರು. ಅರ್ಥಾತ್ – ಡಿ. ಎಸ್. ಪಿ. ಯವರಿಗೆ ಆ ಕರೆ ಮುಟ್ಟಿರಲಿಲ್ಲ. "ಫೌಜದಾರನನ್ನು ಡಿಸ್‌ಮಿಸ್ ಮಾಡಿಸುತ್ತೇನೆ" ಎಂದು ಕೂಗುತ್ತಾ ಇನ್ಸ್‌ಪೆಕ್ಟರರು ಹೊರಟುಹೋಗಿದ್ದರು.

ನಾವು ಬೆಳಿಗ್ಗೆ ಕಚೇರಿಗೆ ಬಂದೊಡನೆಯೆ ಆ ಹುಡುಗಿಯರ ತಂದೆಯನ್ನು ಕರೆಯಲು ಒಬ್ಬ ಪೋಲೀಸನನ್ನು ಕಳಿಸಿದೆವು. ಅಷ್ಟರೊಳಗಾಗಿ ಇನ್ಸ್‌ಪೆಕ್ಟರರು ಅವನನ್ನು ಬರಮಾಡಿಕೊಂಡು ಅವನ ಹೇಳಿಕೆ ಬರೆದುಕೊಂಡು, ಅಪರಾಧವನ್ನು ನಿನ್ನೆಯೇ ದಾಖಲುಮಾಡಿಕೊಳ್ಳದಿರಲು ಕಾರಣವೇನೆಂದು ಕೇಳಿ ನಮಗೆ ಪತ್ರ ಬರೆದರು. ನಡೆದ ವಿಷಯವನ್ನು ಸರಿಯಾಗಿ ತಿಳಿದುಕೊಳ್ಳದೆ ಅಪರಾಧವನ್ನು ದಾಖಲು ಮಾಡಿಕೊಳ್ಳುವುದು ಉಚಿತವಲ್ಲವೆಂದು ಬಗೆದು ಒಂದು ದಿನ ತಡೆಯಲಾಯಿತೆಂದು ನಾವು ಉತ್ತರ ಕೊಟ್ಟೆವು.

ಇನ್ಸ್‌ಪೆಕ್ಟರರು ಅಷ್ಟಕ್ಕೇ ಸುಮ್ಮನಿರಲಿಲ್ಲ. ಫೌಜದಾರರು ತಮ್ಮನ್ನು

ಬೆದರಿಸಿ, ತಮ್ಮ ಫಿರ್ಯಾದು ತೆಗೆದುಕೊಳ್ಳಲು ನಿರಾಕರಿಸಿದರೆಂಬುದಾಗಿ ಆ ಹುಡುಗಿಯರ ತಾಯಿಯಿಂದ ಹೇಳಿಕೆ ಬರೆಯಿಸಿಕೊಂಡು ಆ ಪ್ರಕರಣದ ವಿಚಾರಣೆಯನ್ನು ತಾವೇ ನಡೆಸಿದರು; ಫೌಜದಾರರು ತಮ್ಮ ಕರ್ತವ್ಯದಲ್ಲಿ ತಪ್ಪಿರುವರೆಂದೂ, ಅವರು ಫಿರ್ಯಾದನ್ನು ನಿರಾಕರಿಸಲು ಆಪಾದಿತನಿಂದ ದೊರೆಯಬಹುದಾದ ಲಂಚದಾಸೆಯೇ ಕಾರಣವೆಂದೂ ಮೇಲಾಧಿಕಾರಿಗಳಿಗೆ ವರದಿ ಮಾಡಿದರು.

ಅವರು ಇಂಥ ಕುತಂತ್ರ ಹೂಡಬಹುದೆಂದು ಮೊದಲೇ ಭಾವಿಸಿದ್ದ ನಾವೂ ಅದನ್ನು ಮುರಿಬಡಿಯಲು ಅವಶ್ಯವಿದ್ದ ಸನ್ನಾಹವನ್ನೆಲ್ಲ ಮಾಡಿದೆವು. ಇನ್ಸ್ಪೆಕ್ಟರರು ರಾತ್ರಿ ಸೆರೆ ಕುಡಿದು ಕಚೇರಿಗೆ ಬಂದದ್ದು, ಅಮಲಿನಲ್ಲಿ ಕುರ್ಚಿಯಿಂದುರುಳಿಬಿದ್ದದ್ದು, ಫೋನ್ ತಿರುವಿ ಹಿಡಿದದ್ದು, ಠಾಣಾ ಅಮಲ್ದಾರರಿಗೆ ಅವಾಚ್ಯ ಶಬ್ದಗಳನ್ನಾಡಿ ಬೆತ್ತದಿಂದ ಹೊಡೆದದ್ದು, ರಜಿಸ್ಟರಿನಲ್ಲಿ ಅನಾವಶ್ಯಕವಾಗಿ ಅರ್ಧ ಪುಟದಷ್ಟು ದೊಡ್ಡದಾಗಿ ಸಹಿ ಹಾಕಿದ್ದು, ಅವರ ಸ್ಥಾನ ಗೌರವಕ್ಕೆ ತಕ್ಕ ರೀತಿಯಲ್ಲಿ ವರ್ತಿಸದೆ ಪೋಲೀಸ್ ಇಲಾಖೆಯನ್ನು ಹಾಸ್ಯಕ್ಕೆ ಗುರಿಮಾಡಿದ್ದು, ಇವೇ ಮೊದಲಾದ ಸಂಗತಿಗಳನ್ನೆಲ್ಲ ಉಲ್ಲೇಖಿಸಿ ವರದಿಯೊಂದನ್ನು ಸಿದ್ಧಗೊಳಿಸಿ, ಠಾಣಾ ಅಮಲ್ದಾರರ ವರದಿ ಮತ್ತು ರಾತ್ರಿ ಪಹರೆಯ ಪೋಲೀಸನ ಸಾಕ್ಷಿಗಳ ಸಮೇತ ಡಿ. ಎಸ್. ಪಿ. ಯವರಿಗೆ ಕಳಿಸಿದೆವು.

ಕೆಲದಿನಗಳ ತರುವಾಯ ಅದರ ಬಗೆಗೆ ಕೂಲಂಕಷ ವಿಚಾರಣೆ ನಡೆದು ಇನ್ಸ್ಪೆಕ್ಟರ್ ಮಹಾಶಯರಿಗೆ ಹಿಂಬಡತಿಯಾಗಿ ದೂರದೂರಿಗೆ ವರ್ಗವಾಯಿತು. ಶನಿ ತೊಲಗಿತೆಂದುಕೊಂಡು ನಾವು ಸಮಾಧಾನ ತಂದುಕೊಂಡೆವು.

ಆದರೆ ಆ ಸಮಾಧಾನ ಬಹುಕಾಲ ಬಾಳಲಿಲ್ಲ. ಅವರ ಸ್ಥಳಕ್ಕೆ ಬಂದ ಇನ್ಸ್ಪೆಕ್ಟರರಿಗೂ ಪಠಾಣ ಫೌಜದಾರರಿಗೂ ಹೊಂದಾಣಿಕೆಯಾಗುವಂತೆ ಕಾಣಲಿಲ್ಲ. ಮತ್ತೆ ತಿಕ್ಕಾಟಕ್ಕಾರಂಭವಾಯಿತು. ಹೊಸದಾಗಿ ಬಂದ ಇನ್ಸ್ಪೆಕ್ಟರು ಲಿಂಗವಂತ ಮತೀಯರು. ಅವರಿಗೂ ಫೌಜದಾರರಿಗೂ ನಡೆದ ವ್ಯಾಜ್ಯದಲ್ಲಿ ಲಿಂಗವಂತನಾದ ನಾನು ಅವರ ಪಕ್ಷವನ್ನೇ ವಹಿಸಬೇಕೆಂದು ಇನ್ಸ್ಪೆಕ್ಟರು ಅಪೇಕ್ಷಿಸಿದ್ದರು. ನಾನು ಮಾತ್ರ ಯಾರ ಪಕ್ಷವನ್ನೂ ವಹಿಸದೆ ನನ್ನ ಕೆಲಸ ನಾನು ಮಾಡಿಕೊಂಡು ಹೋಗುತ್ತಿದ್ದೆ.

ಪಠಾಣ ಫೌಜದಾರರ ಬಗೆಗೆ ಅನೇಕ ದೂರುಗಳು ಹೋಗಿ, ವಿಚಾರಣೆ ನಡೆದು ಅವರನ್ನೂ ಹುಂಬರೂರಿನಿಂದ ವರ್ಗ ಮಾಡಲಾಯಿತು.

ಅವರ ಸ್ಥಳಕ್ಕೆ ನನ್ನ ಹಳೆಯ ಪರಿಚಯದವರಾದ ಗುಗ್ಗಳಿಯವರು ಬಂದರು. ಅವರೂ ಲಿಂಗವಂತ ಮತೀಯರೇ. ಆದರೆ, ಇತರ ಮತಗಳವರನ್ನು ಅಸಹನೆಯಿಂದ ಕಾಣುವವರಲ್ಲ. ಜಾತಿಗಳಿಗೆ ಮಹತ್ವವೀಯದೆ ಕರ್ತೃತ್ವಶಕ್ತಿ, ಕರ್ತವ್ಯದಕ್ಷತೆಗಳನ್ನು ಮಾತ್ರ ನೋಡುತ್ತಿದ್ದವರು ಅವರು. ಇದುವರೆಗೆ ಅಲ್ಲಿ ನಡೆದಿದ್ದ ಜಾತಿಗಳ ಜಗಳವನ್ನೆಲ್ಲ ನಾನು ವಿವರಿಸಿ ಹೇಳಿದಾಗ ಅವರಿಗೆ ಬಹಳ ವ್ಯಸನವಾಯಿತು.

“ಹಿಂದುಸ್ತಾನದ ಸ್ವಾತಂತ್ರ್ಯ ತಡವಾಗುವದಕ್ಕೂ ಈ ಜಾತೀಯತೆಯೇ ಕಾರಣ. ಪೋಲೀಸ್ ಖಾತೆಯಲ್ಲೂ ಈ ವಿಷ ಪ್ರವೇಶಿಸಿದರೆ ಮುಗಿದೇ ಹೋಯಿತು. ಮುಂದೆ ಉಳಿಗಾಲವಿಲ್ಲ,” ಎಂದರು ಗುಗ್ಗಳಿಯವರು.

ಅವರು ಬರುತ್ತಲೂ ನನಗೆ ಮತ್ತೆ ಬಡತಿಯ ಯೋಜನೆ ಬಂದು ಅವರ ಶಿಫಾರಸಿನೊಂದಿಗೆ ಡಿ. ಎಸ್. ಪಿ. ಯವರಿಗೊಂದು ಅರ್ಜಿ ಹಾಕಿಕೊಂಡೆ. ಡಿ. ಎಸ್. ಪಿ. ಯವರೂ ನನ್ನ ಕೆಲಸವನ್ನು ಕಂಡವರು, ಮೆಚ್ಚಿಕೊಂಡವರು. ಅಮಲ್ದಾರರ ಸ್ಥಳಗಳು ತೆರವಾಗಿವೆಯೋ ಹೇಗೆ, ಎಂದು ಕಾರಕೂನನನ್ನು ವಿಚಾರಿಸಿದರು. ಪದ್ಧತಿಯಂತೆ ಅವನು ‘ಇಲ್ಲ’ವೆಂದು ಹೇಳಿದ. ಸರಿ. ನನ್ನ “ವಿನಂತಿಯನ್ನು ಸಹಾನುಭೂತಿಯಿಂದ ವಿಚಾರಿಸುವುದಾಗಿ” ಉತ್ತರ ಬಂದಿತು. ಅವರ ಕಾರಕೂನನಿಗೆ ಲಂಚ ಕೊಟ್ಟಾಗಲೇ ಕೆಲಸವಾಗುವುದು ಸಾಧ್ಯವೆಂಬುದು ನನಗೆ ತಿಳಿಯದ ಸಂಗತಿಯೇನೂ ಆಗಿರಲಿಲ್ಲ. ಬಟ್ಟೆ ಹೊಲಿಸಿಕೊಳ್ಳಲೂ ಹಣವಿಲ್ಲದಿದ್ದಾಗ ನಾನು ಲಂಚ ಕೊಡುವುದಾದರೂ ಹೇಗೆ ಸಾಧ್ಯ?

ಕೆಲದಿನಗಳ ತರುವಾಯ ಒಂದು ದಿನ ಡಿ. ಎಸ್. ಪಿ. ಯವರು ಅಕಸ್ಮಾತ್ತಾಗಿ ತುಂಬರೂರಿಗೆ ಬಂದಿಳಿದರು. ಮಾರನೆಯ ದಿನವೇ ಅವರು ಹತ್ತಿರದಲ್ಲಿದ್ದ ಇನ್ನೊಂದು ಊರಿಗೆ ಹೋಗುವವರಿದ್ದರು. ಅವರನ್ನು ಸಮಕ್ಷಮ ಕಂಡು ಬಡತಿಗಾಗಿ ಕೇಳುವ ಆ ಸುಸಂದರ್ಭವನ್ನು ಕಳೆದುಕೊಳ್ಳಬಾರದೆಂದು ಬಗೆದು ನಾನು ಆ ರಾತ್ರಿ ಕಚೇರಿಯಲ್ಲಿಯೆ ಮಲಗಿಕೊಂಡೆ. ಬೆಳಗಾಗುತ್ತಲೂ ಡಿ. ಎಸ್. ಪಿ. ಯವರು ಕಚೇರಿಗೆ ಬಂದರು. ನಾನು ಹೋಗಿ ಸಲಾಂ ಹೊಡೆದು ನಿಂತುಕೊಂಡೆ. ಅವರು ತಕ್ಷಣ ನನ್ನನ್ನು ಗುರುತಿಸಿ.

"ಏನಪ್ಪಾ, ಹೇಗಿದ್ದೀ? ಎಲ್ಲಾ ಸೌಖ್ಯವೆ?" ಎಂದು ವಿಚಾರಿಸಿದರು.

"ತಮ್ಮ ಕೃಪೆಯಿಂದ ಚೆನ್ನಾಗಿದ್ದೇನೆ ಸಾಹೇಬರೆ."

"ನಿನ್ನ ಅರ್ಜಿ ಬಂದಿದೆ. ವಿಚಾರ ಮಾಡುತ್ತಿದ್ದೇನೆ."

ಸಾಹೇಬರು ಹೊರಡುವುದರಲ್ಲಿದ್ದರು. ಅಷ್ಟರಲ್ಲಿ ನಾನು ಅವರಿಗಾಗಿ ಚಹಕ್ಕೆ ಹೇಳಿ ಕಳಿಸಿದ್ದೆ.

"ಚಹಾ ತೆಗೆದುಕೊಂಡು ಹೋಗಬೇಕು ಸಾಹೇಬರೆ."

"ನಿನಗೇಕಪ್ಪಾ ತೊಂದರೆ?"

"ನಮ್ಮ ಡಿ. ಎಸ್. ಪಿ. ಯವರು ಕಚೇರಿಗೆ ಬಂದರೆ ನಾವು ಚಹಾ ಕೊಡದೆ ಹಾಗೇ ಕಳಿಸುವದು ಹ್ಯಾಗೆ ಸಾಹೇಬರೆ?"

"ಖರ್ಚು ಮಾಡಲು ನಿನ್ನ ಸಂಬಳ ಸಾಲಬೇಕಲ್ಲಾ?"

ಸಾಹೇಬರ ಹೆಂಡತಿ ಮತ್ತು ಮಗು ಕಾರಿನಲ್ಲಿದ್ದರು.

"ಅವರಿಗೂ ಚಹಾ ಕೊಡಬಹುದೇ?" ಎಂದು ನಾನು ಕೇಳಿದೆ.

"ಅವರು ಒಪ್ಪಿದರೆ ಕೊಡು." ಎಂದರು ಸಾಹೇಬರು.

ನಾನು ಅವರ ಹತ್ತಿರ ಹೋಗಿ ವಿನಯದಿಂದ ಕರೆಯುತ್ತಲೂ ಅವರೂ ಬಂದರು. ಚಹಾ ಮುಗಿಯಿತು. ಸಾಹೇಬರು ಹೊರಡುತ್ತಿದ್ದ ಹಾಗೇ ನಮ್ಮ ಫೌಜದಾರರು ಬಂದರು.

"ನೀವೇಕೆ ಇಷ್ಟು ಅವಸರದಿಂದ ಬಂದಿರಿ? ನಿಮ್ಮ ಈ ಅಸಿಸ್ಟೆಂಟ್ ನಮ್ಮ ಸತ್ಕಾರವನ್ನೆಲ್ಲ ಚೆನ್ನಾಗಿ ನೋಡಿಕೊಂಡಿದ್ದಾನೆ," ಎಂದರು ಸಾಹೇಬರು.

ನನ್ನ ಬಡತಿಯ ಬಗೆಗೆ ಸಾಹೇಬರಿಗೆ ಒಂದು ಮಾತು ಕೇಳಿಬಿಡಬೇಕೆಂದು ಮನಸ್ಸು ಹಾತೊರೆಯುತ್ತಿದ್ದಿತಾದರೂ ಹಾಗೆ ಹಾದಿಯಲ್ಲಿ ಅಂಥ ಮಾತು ತೆಗೆಯುವುದು ನಮ್ಮ ಖಾತೆಯ ಪದ್ಧತಿಯ ವಿರುದ್ಧವಾಗಿದ್ದುದರಿಂದ ನನ್ನ ಬಾಯಿಂದ ಮಾತೇ ಹೊರಬರದಾಗಿತ್ತು. ಚಾಣಾಕ್ಷರಾದ ಸಾಹೇಬರು ನನ್ನ ಮುಖದ ಮೇಲಿನ ಗೊಂದಲವನ್ನು ಗುರುತಿಸಿ,

"ಏನಾದರೂ ಹೇಳುವದಿತ್ತೇನು?" ಎಂದು ಕೇಳಿದರು.

"ಹೌದು ಸಾಹೇಬರೆ. ನಾನು ಬ್ಯಾಂಕಿನ ದರೋಡೆಯ ಶೋಧದಲ್ಲಿ ಕೆಲಸ ಮಾಡಿದ್ದಕ್ಕೇ ನನಗೆ ಬಡತಿ ಸಿಗಬೇಕಾಗಿತ್ತು. ಸಿಗಲಿಲ್ಲ. ಈಗಲಾದರೂ ತಮ್ಮಿಂದ ನನ್ನ ಕಲ್ಯಾಣವಾಗಬಹುದೆಂದು ತಿಳಿದಿದ್ದೇನೆ."

ಹತ್ತಿರದಲ್ಲಿಯೇ ಇದ್ದ ಫೌಜದಾರರು ನನ್ನ ಕರ್ತವ್ಯದಕ್ಷತೆಯ ಬಗೆಗೆ ಶಿಫಾರಸು ಮಾಡುವುದಕ್ಕಾರಂಭಿಸಿದರು. ಸಾಹೇಬರು ಅವರ ಮಾತನ್ನು ನಡುವೆಯೇ ತಡೆದು ಹೇಳಿದರು :

"ನನಗೆ ಗೊತ್ತಿದೆ. ಅವನ ಬಗ್ಗೆ ಯಾರೂ ವರ್ಣಿಸಬೇಕಾಗಿಲ್ಲ. ನೋಡೋಣ."

ಸಾಹೇಬರು ಬಿಡಾರದ ಊರಿಗೆ ಹೋದ ಬಳಿಕ, ಅಮಲ್ದಾರರ ಸ್ಥಳಗಳು ತೆರವಾಗಿವೆಯೋ ಹೇಗೆಂಬ ಬಗ್ಗೆ ಕಾರಕೂನನನ್ನು ಪುನಃ ವಿಚಾರಿಸಿದರು. ಅವನೂ ಪುನಃ ಇಲ್ಲವೆಂದೇ ಹೇಳಿದ. ಸಾಹೇಬರಿಗೆ ಸಂಶಯ ಬಂದು, ಜಿಲ್ಲೆಯ ಪೋಲೀಸ್ ಪಡೆಯ ಯಾದಿಯನ್ನು ತರಿಸಿ ನೋಡಿದಾಗ ಅಮಲ್ದಾರರ ಮೂರು ಸ್ಥಳಗಳು ತೆರವಾಗಿದ್ದುದು ಕಂಡುಬಂದಿತು. ಸುಳ್ಳು ಹೇಳಿದುದಕ್ಕಾಗಿ ಕಾರಕೂನನನ್ನು ಬಯ್ದು ನನಗೆ ಬಡತಿ ಕೊಡಮಾಡಿದರು.

೨೮

# ಅಲ್ಲಿಯೂ ಅದೇ ಹೊಲಸು !

ಕೊನೆಗೊಮ್ಮೆ ನಾನು 'ನಾಯಕ,' ಅಂದರೆ ಅಮಲ್ದಾರನಾದಂತಾಯಿತು. ಸಹಜವಾಗಿಯೆ ನನಗೂ ನನ್ನ ಕುಟುಂಬದವರಿಗೂ ಆನಂದವಾಯಿತು. ಕೆಲ ದಿನಗಳಲ್ಲಿಯೆ ಫೌಜದಾರಿಕೆಯ ತರಬೇತಿಗಾಗಿಯೂ ನನ್ನನ್ನು ಆರಿಸಬಹುದೆಂದು ನಾನು ಆಶಿಸುತ್ತಿದ್ದೆ.

ಅಷ್ಟರಲ್ಲಿಯೆ ನನಗೆ ಹುಂಬರೂರಿನಿಂದ ಉಗ್ರಪುರಕ್ಕೆ ವರ್ಗವಾಯಿತು.

ಉಗ್ರಪುರದಲ್ಲಿ ಜಾತಿಯ ಜಗಳವಿರದಿರಲಿಲ್ಲ. ಬ್ರಾಹ್ಮಣ – ಲಿಂಗವಂತ, ಮುಸಲ್ಮಾನ – ಬ್ರಾಹ್ಮಣ, ಮುಸಲ್ಮಾನ – ಲಿಂಗವಂತ – ಹೀಗೇ ಹಲವಾರು ವಿರೋಧಿ ಗುಂಪುಗಳು. ಇನ್ಸ್‌ಪೆಕ್ಟರರನ್ನು ಕಂಡರೆ ಫೌಜದಾರರಿಗಾಗದು. ಫೌಜದಾರರನ್ನು ಕಂಡರೆ ಇನ್ಸ್‌ಪೆಕ್ಟರರಿಗಾಗದು.

ಅದೇ ಸಂದರ್ಭದಲ್ಲಿ ಭಾರತಕ್ಕೆ ಸ್ವಾತಂತ್ರ್ಯ ದೊರೆಯಿತು. ಆಂಗ್ಲ ಡಿ. ಎಸ್. ಪಿ. ಯವರ ಸ್ಥಾನಕ್ಕೆ ಭಾರತೀಯರೊಬ್ಬರು ಬಂದರು. ಪೋಲೀಸ್ ಇಲಾಖೆಯಲ್ಲಿ ಯಾವ ಸುಧಾರಣೆಯೂ ಆಗಲಿಲ್ಲ. ಜಾತೀಯ ದ್ವೇಷ ಒಳಗೊಳಗೇ ಬೆಳೆಯುತ್ತಿತ್ತು.

ಉಗ್ರಪುರ ವಿಭಾಗದ ಇನ್ಸ್‌ಪೆಕ್ಟರರೂ ಹದಿನಾರಾಣೆ ಜಾತ್ಯಂಧರಾಗಿದ್ದರು. ಬ್ರಾಹ್ಮಣೇತರ ಪೋಲೀಸರನ್ನು ಕಂಡೊಡನೆ ಉರಿದುಬೀಳುವುದು ಅವರ ಸ್ವಭಾವವಾಗಿತ್ತು. ಅವರ ಕಿರುಕುಳವನ್ನು ತಡೆದುಕೊಳ್ಳಲಾರದೆ ಅನೇಕ ಜನ ಲಿಂಗವಂತ ಫೌಜದಾರರು ತಾವಾಗಿಯೇ ವರ್ಗಮಾಡಿಸಿಕೊಂಡು ಹೊರಟು ಹೋಗಿದ್ದರು. ನಾನು ಅಲ್ಲಿಗೆ ವರ್ಗವಾಗಿ ಹೋದ ಸಮಯದಲ್ಲಿ ಫೌಜದಾರ

ರಾಗಿದ್ದ ರಾಚಪ್ಪನವರಿಗೂ ಬಲು ಬೇಸರವಾಗಿತ್ತು. ಇನ್ಸ್‌ಪೆಕ್ಟರರಿಗೂ ಅವರಿಗೂ ಪ್ರತಿನಿತ್ಯವೂ ತಿಕ್ಕಾಟ ತಪ್ಪುತ್ತಿರಲಿಲ್ಲ. ಇನ್ಸ್‌ಪೆಕ್ಟರರ ಪಕ್ಷದ ಪೋಲೀಸರೇ ಬೇರೆ. ಫೌಜದಾರರ ಪಕ್ಷದ ಪೋಲೀಸರೇ ಬೇರೆ. ಕಚೇರಿಯಲ್ಲಿ ಕಾರಕೂನನಾಗಿ ನೇಮಕ ಹೊಂದಿದ್ದ ನಾನು ಯಾವ ಪಕ್ಷಕ್ಕೂ ಸೇರಿಕೊಳ್ಳದೆ ನನ್ನ ಕೆಲಸ ನೋಡಿಕೊಳ್ಳುತ್ತಿದ್ದೆ. ಅದು ದೊಡ್ಡ ತಾಲ್ಲೂಕಿನ ಸ್ಥಳ. ದಿನವೂ ಒಂದಿಲ್ಲೊಂದು ಅಪರಾಧವಿದ್ದೇ ಇರುತ್ತಿತ್ತು. ರೇಶನ್ ಮೊಕದ್ದಮೆಗಳಿಗಂತೂ ಲೆಕ್ಕವೇ ಇರಲಿಲ್ಲ. ನಾವು ಎಷ್ಟು ತಾಸು ದುಡಿದರೂ ಕೆಲಸ ಮುಗಿಯುತ್ತಿರಲಿಲ್ಲ. ಇನ್ಸ್‌ಪೆಕ್ಟರರು ಏಕಾಏಕಿಯಾಗಿ ಬಂದು ತಪ್ಪು ತೆಗೆಯಬಹುದೆಂಬ ಭಯದಿಂದಾಗಿ ನಾವು ಹಗಲೂ ರಾತ್ರಿ ದುಡಿಯುತ್ತಿದ್ದೆವು.

ನಾನು ಹೆಡ್‌ಕ್ವಾರ್ಟರ್ಸ್‌ನಲ್ಲಿದ್ದಾಗ ನನ್ನ ಜೊತೆಗಿದ್ದ ಮನಗೋಳಿಯೂ ಆಗ ಉಗ್ರಪುರದಲ್ಲಿದ್ದ. ಫೌಜದಾರರು ಹೊರಗೆ ಸುತ್ತಿಕೊಂಡು ಬರಲು ಹೊರಟಾಗ ಅವನು ಅವರ ಸಹಾಯಕ್ಕೆ ಹೋಗುತ್ತಿದ್ದ. ಅವನಿಗೆ ನನ್ನ ಬಗೆಗೆ ಒಳಗೊಳಗೇ ಮತ್ಸರ. ನಾನು ಕೇವಲ ಮ್ಯಾಟ್ರಿಕ್ ಪಾಸು ಮಾಡಿದವನು. ಅವನು ಇಂಟರ್ ದಾಟಿದ್ದ. ನನಗಿಂತಲೂ ಆರು ತಿಂಗಳಿಗೆ ಮೊದಲೇ ನೌಕರಿಗೆ ಸೇರಿಕೊಂಡಿದ್ದ ಅವನಿನ್ನೂ ಸಿಪಾಯಿಯಾಗಿಯೇ ಉಳಿದಿದ್ದ. ನಾನಾಗಲೇ ಅವುಲ್ದಾರನಾಗಿದ್ದೆ. ಅವನಿಗೆ ಅಸೂಯೆಯುಂಟಾಗುವುದೂ ಸಹಜವೇ ಅಗಿತ್ತು.

ಫೌಜದಾರರ ಜೊತೆಗೆ ತಿರುಗುವ ಪೋಲೀಸನಿಗೆ "ದಪ್ತರ್ ಆರ್ಡರ್ಲಿ" ಎನ್ನುವ ರೂಢಿಯುಂಟು. ದಪ್ತರ್ ಆರ್ಡರ್ಲಿಯಾಗಿದ್ದ ಮನಗೋಳಿ, ಫೌಜದಾರರು ಹೊರಗಡೆ ಮಾಡಿದ ಕೆಲಸಗಳ ಮಾಹಿತಿ ಕೊಟ್ಟಾಗ ನಾನು ರಜಿಸ್ಟರುಗಳಲ್ಲಿ ಆ ವಿಷಯ ಬರೆಯಲು ಸಾಧ್ಯ. ಅವನು ಬೇಕೆಂತಲೇ ಮಾಹಿತಿ ಕೊಡುತ್ತಿರಲಿಲ್ಲ. ಅದರಿಂದಾಗಿ ನನ್ನ ಕೆಲಸ ಕೆಡತೊಡಗಿತು. ಆ ಸಂಗತಿಯನ್ನು ನಾನು ಫೌಜದಾರರಿಗೆ ತಿಳಿಸುತ್ತಲೂ ಅವರು ರೇಗಿ ಅವನಿಗೆ ಬುದ್ಧಿ ಹೇಳಿದರು. ಮನಗೋಳಿಗೂ ನನಗೂ ಮಾತು ನಿಂತುಹೋಗುವ ಪ್ರಸಂಗ ಬಂತು.

"ನಾನೂ ನೀವೂ ಸಹಕಾರದಿಂದ ಕೆಲಸ ಮಾಡಿದರೆ ಮಾತ್ರ ಕಚೇರಿಯ ಕೆಲಸ ನಡೆಯುವದು. ನೀವು ಮಾಹಿತಿ ಕೊಡದಿದ್ದರೆ ನಾನು ಬರೆಯುವದಾದರೂ ಹ್ಯಾಗೆ?" ಎಂದು ಒಳ್ಳೆಯ ಮಾತಿನಲ್ಲೇ ನಾನು ಅವನನ್ನು ಹಾದಿಗೆ ತರಲು ಯತ್ನಿಸಿದೆ. ಅವನ ನಡತೆಯಲ್ಲಿ ಬದಲಾವಣೆಯಾಗಲಿಲ್ಲ. ನನ್ನ ಕೆಲಸದಲ್ಲಿ

ತಪ್ಪು ಹೊರಡಬೇಕು, ನನಗೆ ಹಿಂಬಡತಿಯಾಗಬೇಕು, ಫೌಜದಾರರ ಸಹಾಯ ದಿಂದ ತಾನು ಅಮಲ್ದಾರನಾಗಬೇಕು – ಎಂಬ ಮಹದಾಸೆ ಅವನದು.

ಇನ್ಸ್‌ಪೆಕ್ಟರ್ ಮತ್ತು ಫೌಜದಾರರ ಜಗಳ ಉಗ್ರಪುರದಲ್ಲಿ ಜನಜನಿತ ವಾಗಿತ್ತು. ಅಲ್ಲಿಯ ಬ್ರಾಹ್ಮಣರೂ ಇನ್ಸ್‌ಪೆಕ್ಟರರ ಪಕ್ಷ ವಹಿಸಿ, ಫೌಜದಾರರು ತಿಂದ ಲಂಚದ ಬಗೆಗೆ ಮಾಹಿತಿಯೊದಗಿಸುತ್ತಿದ್ದರು. ಲಿಂಗವಂತರೆಲ್ಲರೂ, ಅರ್ಥಾತ್ – ಫೌಜದಾರರ ಪಕ್ಷ ವಹಿಸಿದ್ದರು. ಅದನ್ನೆಲ್ಲ ಕಂಡು ನನಗೆ ಜುಗುಪ್ಸೆಯಾಗದಿರಲಿಲ್ಲ.

ಈ ದ್ವೇಷದ ಕಿಡಿ ಪ್ರಖರವಾಗಿ ಬೆಂಕಿಯಾಗಿ ಸಿಡಿದೇಳುವ ಪ್ರಸಂಗ ವೊಂದು ಬಂತು.

ಒಂದು ದಿನ ಉಗ್ರಪುರದ ಯುವಕನೊಬ್ಬ ಉರುಳು ಬಿಗಿದು ಆತ್ಮಹತ್ಯೆ ಮಾಡಿಕೊಂಡ. ಅವನು ತಾನಾಗಿಯೇ ಸ್ವೇಚ್ಛೆಯಿಂದ ಆತ್ಮಹತ್ಯೆ ಮಾಡಿಕೊಂಡ ನೆಂದು ಅವನ ಮನೆಯವರು ಹೇಳಿದರು. ನಮಗೂ ಹಾಗೇ ಅನ್ನಿಸಿತ್ತು. ಆದರೆ ಅದು ಕೊಲೆಯ ಪ್ರಕರಣವೆಂದು ಇನ್ಸ್‌ಪೆಕ್ಟರು ವಾದಿಸಿ, ವಿಚಾರಣೆ ಗಾರಂಭಿಸಿದರು. ಪರೀಕ್ಷಣೆಗೆಂದು ಶವವನ್ನು ಆಸ್ಪತ್ರೆಗೆ ಕಳಿಸಿದುದಾಯಿತು. ಉರುಳು ಬಿಗಿದುಕೊಂಡುದರಿಂದ ಉಸಿರುಗಟ್ಟಿ ಮರಣವಾಯಿತೆಂದು ಡಾಕ್ಟರು ಸರ್ಟಿಫಿಕೇಟು ಕೊಟ್ಟರು. ನಮ್ಮ ಇನ್ಸ್‌ಪೆಕ್ಟರರಿಗೆ ಮಾತ್ರ ಆಗಲೂ ಸಮಾಧಾನವಾಗಲಿಲ್ಲ.

ಆ ಯುವಕ ಆತ್ಮಹತ್ಯೆ ಮಾಡಿಕೊಳ್ಳಲು ಕಾರಣವೇನೆಂಬುದು ಎಲ್ಲರಿಗೂ ಗೊತ್ತಿದ್ದಿತು. ಅವನಿಗೊಬ್ಬ ಅಣ್ಣ, ಒಬ್ಬಳು ಅಕ್ಕ. ಅಣ್ಣನಿಗೆ ಮೂವತ್ತು ವರ್ಷ. ಅಕ್ಕನಿಗೆ ಇಪ್ಪತ್ತೆರಡು. ಅವಳು ತನ್ನ ಗಂಡನ ಜತೆಗೆ ಬಾಳುವೆ ಮಾಡಲಾರದೆ ಅವನನ್ನು ಬಿಟ್ಟು ಬಂದು ತವರುಮನೆಯಲ್ಲಿಯೇ ಇದ್ದಳು. ಅವಳು ಚೆಲುವೆ. ಚಂಚಲಸ್ವಭಾವದ ಹೆಣ್ಣು. ಅವಳನ್ನು ಬಯಸುತ್ತಿದ್ದ ಯುವಕರಿಗೇನೂ ಕೊರತೆಯಿರಲಿಲ್ಲ. ಅವಳು ವ್ಯಭಿಚಾರಿಣಿಯಾಗಿ ತಮ್ಮ ಮನೆತನದ ಗೌರವವನ್ನು ಕಳೆದುಬಿಡುವಳಲ್ಲಾ ಎಂದು ಹಿರಿಯಣ್ಣನಿಗೆ ಕೋಪ. ಅವನು ಎಷ್ಟೋ ಸಲ ಬುದ್ಧಿ ಹೇಳಿದರೂ ಅವಳು ತನ್ನ ನಡತೆಯಲ್ಲಿ ತಿದ್ದುಪಡಿ ಮಾಡಿಕೊಂಡಿರಲಿಲ್ಲ. ಕೊನೆಗೊಮ್ಮೆ ಅವನೇ ಅವಳ ಮೇಲೆ ಬಲಾತ್ಕಾರ ಮಾಡಿಬಿಟ್ಟಿದ್ದ. ಅಂದಿನಿಂದ ಅವರಿಬ್ಬರ ಗುಪ್ತಸಂಬಂಧ ಹಾಗೇ ಸಾಗಿಬಂದಿತ್ತು.

ಅವಳೂ ಬೇರೆಯವರ ಕಡೆ ಕಣ್ಣು ಹಾಕಿರಲಿಲ್ಲ. ಅಣ್ಣ ತಂಗಿಯರ ಆ ಹೇಯ ಸಂಬಂಧದ ಬಗೆಗೆ ಊರಲ್ಲೆಲ್ಲ ಬೊಬ್ಬಾಟವೆದ್ದಿತ್ತು. ಅದನ್ನು ನೋಡಿ ಸಹಿಸಲಾರದ ತಮ್ಮ, ಜೀವನದ ಬಗೆಗೇ ಜುಗುಪ್ಸೆಪಟ್ಟುಕೊಂಡು ಆತ್ಮಹತ್ಯೆ ಮಾಡಿಕೊಂಡಿದ್ದ. ಆದರೆ, ಆ ವಿಚಾರವನ್ನು ಹೇಳಲು ಯಾರೂ ಸಿದ್ಧರಿರಲಿಲ್ಲ. ಅವನಿಗೆ ಹೊಟ್ಟೆ ಶೂಲೆಯಿದ್ದುದರಿಂದ ಉರುಳು ಬಿಗಿದುಕೊಂಡನೆಂದು ಹೇಳಿದರು. ನಾವು ಆ ಪ್ರಕಾರ ಬರೆದುಕೊಂಡೆವು.

ಇನ್ಸ್‌ಪೆಕ್ಟರರು ಆ ಯುವತಿಯನ್ನು ತಮ್ಮ ಮನೆಗೆ ಬರಮಾಡಿಕೊಂಡು, ಫೌಜದಾರರು ಅವಳ ಮೇಲೆ ಬಲಾತ್ಕಾರ ಮಾಡಲು ಯತ್ನಿಸಿದ್ದರೆಂದು ದೂರು ಕೊಡಬೇಕೆಂದು ಅವಳಿಗೆ ಹೇಳಿದರು. ವಿನಾಕಾರಣವಾಗಿ ಫೌಜದಾರರ ಮೇಲೆ ದೂರು ಕೊಡಲು ಅವಳು ಒಪ್ಪಲಿಲ್ಲ. ಇನ್ಸ್‌ಪೆಕ್ಟರರು ಅವಳನ್ನು ಗದರಿಸಿ, ಆ ಪ್ರಕಾರ ಅವಳು ದೂರು ಕೊಡದಿದ್ದಲ್ಲಿ ಅವಳ ತಮ್ಮನನ್ನು, ಅವಳೂ ಅವಳ ಅಣ್ಣನೂ ಕೂಡಿ ಉರುಳುಬಿಗಿದು ಕೊಂದರೆಂದು ವರದಿಮಾಡುವುದಾಗಿ ಬೆದರಿಕೆ ಹಾಕಿದರು. ತನ್ನ ಪ್ರಾಣಕ್ಕೆ ಸಂಚಕಾರ ಬರುವುದೆಂಬ ಭೀತಿಯುತ್ಪನ್ನವಾಗುತ್ತಲೂ ಅವಳು ಇನ್ಸ್‌ಪೆಕ್ಟರು ಹೇಳಿದ ಹಾಗೆ ಫಿರ್ಯಾದುಕೊಡುವ ಪ್ರಸಂಗ ಅನಿವಾರ್ಯವಾಯಿತು. ಆ ಫಿರ್ಯಾದನ್ನು ದುರುಪಯೋಗಪಡಿಸಿ ರಾಚಪ್ಪನವರನ್ನು ಮನೆಗೆ ಕಳಿಸುವ ಹೊಂಚು ಹಾಕಿದ್ದರು ಇನ್ಸ್‌ಪೆಕ್ಟರರು.

ಆದರೆ, ರಾಚಪ್ಪನವರೇನೂ ಹಾಗೆ ಸುಲಭವಾಗಿ ಸೋತುಹೋಗುವ ಆಸಾಮಿಯಲ್ಲ. ಇನ್ಸ್‌ಪೆಕ್ಟರು ಅವಳನ್ನು ತಮ್ಮ ಮನೆಗೆ ಕರೆಯಿಸಿಕೊಂಡ ವಾರ್ತೆ ತಿಳಿಯುತ್ತಲೂ ಫೌಜದಾರರೂ ಅವಳ ಮನೆಗೆ ಹೋದರು. ಇನ್ಸ್‌ಪೆಕ್ಟರ ಮನೆಯಲ್ಲಿ ನಡೆದುದೆಲ್ಲವನ್ನೂ ಅವಳು ವಿವರಿಸಿ ಹೇಳಿದಳು. ಫೌಜದಾರರು ಅದನ್ನೆಲ್ಲ ಬರೆದುಕೊಂಡು ಅವಳ ಸಹಿ ಹಾಕಿಸಿಕೊಂಡು ಬಂದರು. ಇನ್ಸ್‌ಪೆಕ್ಟರರು ಆ ಯುವತಿಯ ಹೇಳಿಕೆಯನ್ನು ಕಳಿಸಿ, ಫೌಜದಾರರು ಸ್ಪಷ್ಟೀಕರಣ ಕೊಡಬೇಕೆಂದು ಆಜ್ಞೆ ವಿಧಿಸುತ್ತಲೂ ಅವಳು ಫೌಜದಾರರೆದುರಿಗೆ ಕೊಟ್ಟ ಹೇಳಿಕೆಯ ಪ್ರತಿಯನ್ನು ಕಳಿಸಲಾಯಿತು. ಇನ್ಸ್‌ಪೆಕ್ಟರು ಗಾಬರಿಗೊಂಡು, ಕಚೇರಿಗೆ ಬಂದು ಫೌಜದಾರರೊಡನೆ ಒಪ್ಪಂದ ಮಾಡಿಕೊಳ್ಳುವ ಹಾಗೆ ನಟಿಸಿ ಆ ಎರಡೂ ಹೇಳಿಕೆಗಳನ್ನು ಹರಿದು ಹಾಕಿ ಆ ಪ್ರಕರಣವನ್ನು ಮುಗಿಸಿದರು.

ಫೌಜದಾರರ ಬಗೆಗಿದ್ದ ದ್ವೇಷವನ್ನು ಮಾತ್ರ ಅವರು ತ್ಯಜಿಸಲಿಲ್ಲ. ನನ್ನನ್ನೂ ತಮ್ಮ ಪಕ್ಷಕ್ಕೆಳೆದುಕೊಳ್ಳಲು ಬಗೆಬಗೆಯಾಗಿ ಯತ್ನಿಸಿದರು. ನಾನು ಇನ್ಸ್‌ಪೆಕ್ಟರರ ಪಕ್ಷವಹಿಸಿದಲ್ಲಿ ನನಗೆ ಇನ್ನೂ ಹೆಚ್ಚಿನ ಬಡತಿ ದೊರೆಯ ಬಹುದೆಂದು ಮೊದಲಾಗಿ ಆಸೆ ತೋರಿಸಲಾಯಿತು. ಅಂಥ ದುರಾಸೆಗೆ ಬಲಿ ಬಿದ್ದು ಫೌಜದಾರರಿಗೆ ಅನ್ಯಾಯ ಬಗೆಯುವಂಥ ಕೀಳು ಸ್ವಭಾವ ನನ್ನ ದಾಗಿರಲಿಲ್ಲ. ಅಂತೆಯೆ, ನಾನು ಆ ಲೋಭಗಳಿಗೊಳಗಾಗಲಿಲ್ಲ. ನನ್ನನ್ನು ಪಡೆದುಕೊಳ್ಳಲು ಅವರು ಯತ್ನಿಸಿದ ಸಂಗತಿಯನ್ನು ಫೌಜದಾರರಿಗೆ ತಿಳಿಸುವ ಗೊಡವೆಗೂ ಹೋಗದೆ ಸುಮ್ಮನಿದ್ದು ಬಿಟ್ಟೆ. ಆದರೆ, ಇನ್ಸ್‌ಪೆಕ್ಟರರು ಮಾತ್ರ ನನ್ನ ಬಗೆಗೆ ಕತ್ತಿ ಮಸೆಯತೊಡಗಿದರು. ಮನಗೋಳಿಯ ಬಗೆಗೂ ಅವರಿಗೆ ರೋಷವಿತ್ತು. ಅವನು ಫೌಜದಾರರ ಅಂಗರಕ್ಷಕನಂತೆ ಇದ್ದುಕೊಂಡು ಅವರ ಎಲ್ಲಾ ಕೆಲಸಗಳಲ್ಲೂ ನೆರವಾಗುತ್ತಿದ್ದ. ನಮ್ಮನ್ನು ಮೂವರನ್ನೂ ಮನೆಗೆ ಕಳಿಸದೆ ವಿರಮಿಸುವುದಿಲ್ಲವೆಂದು ಇನ್ಸ್‌ಪೆಕ್ಟರರು ಬಹಿರಂಗವಾಗಿಯೆ ಮಾತ ನಾಡುವುದಕ್ಕಾರಂಭಿಸಿದರು. ಅವರು ಕಳಿಸಿದ ಅನೇಕ ವರದಿಗಳ ಪರಿಣಾಮ ವಾಗಿ ಕೊನೆಗೆ ಫೌಜದಾರರಿಗೆ ಅಲ್ಲಿಂದ ವರ್ಗವಾಯಿತು.

ಆಗ ಮಾತ್ರ ನನಗೆ ದಿಗಿಲಾಗದಿರಲಿಲ್ಲ. ನಾನು ಉಗ್ರಪುರಕ್ಕೆ ಬಂದು ದಕ್ಕೆ ಇನ್ನೂ ಹತ್ತು ತಿಂಗಳಾಗಿರಲಿಲ್ಲ. ಅಷ್ಟು ಬೇಗ ನನಗೂ ಅಲ್ಲಿಂದ ವರ್ಗ ವಾಗುವಂತಿರಲಿಲ್ಲ. ಫೌಜದಾರರು ಹೋದ ಬಳಿಕ ಈ ಇನ್ಸ್‌ಪೆಕ್ಟರರ ಕೈಯಲ್ಲಿ ನಾವು ತಡೆದುಕೊಳ್ಳುವುದು ಕಷ್ಟವೆಂಬುದಂತೂ ಎಂದೋ ಗೊತ್ತಾಗಿ ಹೋಗಿತ್ತು.

ಅದೇ ಸಮಯದಲ್ಲಿ ಫೌಜದಾರಿಕೆಯ ಶಿಕ್ಷಣಕ್ಕಾಗಿ ಉಮೇದುವಾರ ರನ್ನಾರಿಸುವ ಪರೀಕ್ಷೆ ನಡೆದಿತ್ತು. ನಾನೂ ಆ ಪರೀಕ್ಷೆಗೆ ಕುಳಿತುಕೊಂಡಿದ್ದೆ, ತೇರ್ಗಡೆ ಹೊಂದಿದ್ದೆ.

....ಹೊಸ ಫೌಜದಾರರು ಬಂದು ಅಧಿಕಾರಸೂತ್ರ ವಹಿಸಿಕೊಂಡರು. ಹಾಳುಮನೆ ಎಂದು ಅವರ ಹೆಸರು. ಲಿಂಗವಂತಮತೀಯರೇ ಅವರೂ.

ಭಾರತವು ಸ್ವತಂತ್ರವಾಗುತ್ತಲೂ ಬಿಳಿಯ ಅಧಿಕಾರಿಗಳು ಹೊರಟು ಹೋಗಿ ಅವರ ಸ್ಥಳಕ್ಕೆ ಕರಿಯರು ಏರಿದ್ದರಷ್ಟೆ. ಮೊದಲು ಫೌಜದಾರರಾಗಿದ್ದ ವರನೇಕರು ಇನ್ಸ್‌ಪೆಕ್ಟರರಾಗಿಯೂ, ಇನ್ಸ್‌ಪೆಕ್ಟರರಾಗಿದ್ದವರು ಡಿ. ವೈ. ಎಸ್.

ಪಿ. ಗಳಾಗಿಯೂ, ಡಿ. ವೈ. ಎಸ್. ಪಿ. ಗಳಾಗಿದ್ದವರು ಡಿ. ಎಸ್. ಪಿ. ಗಳಾಗಿಯೂ ಬಡ್ತಿ ಹೊಂದಿದ್ದರು. ಫೌಜದಾರರ ಸ್ಥಳಗಳೆಷ್ಟೋ ತೆರವಾದುದ ರಿಂದ ಜಮಾದಾರರನ್ನು ಆ ಸ್ಥಳಗಳಿಗೇರಿಸಲಾಗಿತ್ತು. ಹಾಗೆ ಬಡ್ತಿ ಹೊಂದಿ ಫೌಜದಾರರಾಗಿದ್ದವರಲ್ಲಿ ನಮ್ಮ ಹಾಳುಮನೆಯವರೂ ಒಬ್ಬರು.

ಅವರು ಬಂದಿಳಿದಾಗ ಇನ್ಸ್‌ಪೆಕ್ಟರರು ಊರಿನಲ್ಲಿರಲಿಲ್ಲ. ನಾಲ್ಕು ದಿನಗಳ ವರೆಗೆ ನಮ್ಮ ಜತೆಗೆ ಚೆನ್ನಾಗಿಯೆ ನಡೆದುಕೊಳ್ಳುತ್ತಿದ್ದರು ಫೌಜದಾರರು. ಇನ್ಸ್‌ಪೆಕ್ಟರರು ಬಂದರು. ಫೌಜದಾರರಿಗೂ ಅವರಿಗೂ ಭೆಟ್ಟಿಯಾಯಿತು. ಆ ಭೆಟ್ಟಿಯ ಕಾಲಕ್ಕೆ ಇನ್ಸ್‌ಪೆಕ್ಟರರು ನನ್ನ ಬಗೆಗೂ ಮನಗೋಳಿಯ ಬಗೆಗೂ ನಿಷ್ಠುರವಾಗಿರುವಂತೆ ಅವರಿಗೆ ಹೇಳಿರಬೇಕು. ಈ ಇನ್ಸ್‌ಪೆಕ್ಟರರು ಕಳ್ಳೀ ಕಾಯಿ ಜಿಲ್ಲೆಯಲ್ಲಿ ಫೌಜದಾರರಾಗಿದ್ದಾಗ ಹಾಳುಮನೆಯವರು ಅವರ ಕೈಯಲ್ಲಿ ಕಾರಕೂನರಾಗಿ ಕೆಲಸ ಮಾಡಿದ್ದರಂತೆ. ಸರಿ. ಆ ಹಳೆಯ ಯಜ ಮಾನನ ಇಚ್ಛೆಯನ್ನನುಸರಿಸಿ ನಡೆಯಬೇಕಲ್ಲವೆ?

ಅಂದಿನಿಂದ ಹಾಳುಮನೆಯವರು ನಮ್ಮಿಬ್ಬರನ್ನೂ ಪೀಡಿಸುವುದಕ್ಕಾ ರಂಭಿಸಿದರು.

“ನಿಮಗಿಬ್ಬರಿಗೂ ಏನೇನೂ ಕೆಲಸ ಬರುವದಿಲ್ಲ. ನಿಮ್ಮಿಂದಾಗಿ ಈ ಕಚೇರಿಯ ಹೆಸರೇ ಕೆಟ್ಟುಹೋಗಿದೆ. ಈಗ ನಾನು ಅದನ್ನು ಸುಧಾರಿಸಬೇಕು. ಇನ್ನು ಮುಂದೆ ವೈಗಳ್ಳತನ ಮಾಡಿದರೆ ನಡೆಯಲಿಕ್ಕಿಲ್ಲ. ರಿಪೋರ್ಟ್‌ಮಾಡಿ ಮನೆಗೆ ಕಳಿಸಬೇಕಾದೀತು!” ಎಂದು ಅವರು ನಮಗೆ ಎಚ್ಚರಿಕೆ ಕೊಟ್ಟರು.

ಈ ಮಧ್ಯೆ ಮನಗೋಳಿಗೆ ಕಾಹಿಲೆಯಾಗಿ ಅವನು ಹಾಸಿಗೆ ಹಿಡಿದು ಮಲಗಿದ. ಆಸ್ಪತ್ರೆಯಲ್ಲಿ ಔಷಧಿ ತೆಗೆದುಕೊಳ್ಳುತ್ತಿದ್ದುದರಿಂದ ಅವನು ‘ಡ್ಯೂಟಿ’ಗೆ ಬರಬೇಕಾಗಿರಲಿಲ್ಲ. ರಾತ್ರಿಯ ಹಾಜರಿಗೆ ಮಾತ್ರ ತಪ್ಪದೆ ಬರ ಬೇಕಾಗುತ್ತಿತ್ತು.

ಒಂದು ದಿನ ನನಗೆ ವಿಪರೀತ ಕೆಲಸ. ಬೆಳಗಿನ ಎಂಟು ಗಂಟೆಯಿಂದ ಸಾಯಂಕಾಲ ಎಂಟು ಗಂಟೆಯವರೆಗೆ ಕಚೇರಿಯಲ್ಲಿಯೆ ಇದ್ದು ಕೆಲಸ ಮಾಡುತ್ತಿದ್ದೆ. ಮಧ್ಯಾಹ್ನದ ಊಟಕ್ಕೂ ಹೋಗಲಾಗಿರಲಿಲ್ಲ. ಎಂಟು ಗಂಟೆಗೆ ಫೌಜದಾರರು ಬರುತ್ತಲೂ ಕಚೇರಿಯ ‘ಚಾರ್ಜ್’ ಅವರಿಗೊಪ್ಪಿಸಿ ನಾನು ಮನೆಗೆ ಹೋದೆ. ಆ ದಿನ ಇತರ ಅಮಲ್ದಾರರೂ ಇರಲಿಲ್ಲವಾದುದರಿಂದ ರಾತ್ರಿ

ಕಚೇರಿಯಲ್ಲಿರುವ ಕೆಲಸವೂ ನನ್ನ ಪಾಲಿಗೇ ಬಂದಿತ್ತು. ಊಟ ಮುಗಿಸಿ ಕೊಂಡು ನಾನು ಬರುವವನಿದ್ದೆ.

ಎಂಟೂವರೆ ಗಂಟೆಗೆ ಹಾಜರಿಗಾರಂಭವಾಯಿತು. ಮನಗೋಳಿ ಅಸ್ವಸ್ಥ ನಾಗಿದ್ದುದರಿಂದ ಒಂದು ಮೂಲೆಯಲ್ಲಿ ಕುಳಿತುಕೊಂಡಿದ್ದ. ಹಾಜರಿಯ ಕಾಲಕ್ಕೆ ಪೋಲೀಸರೆಲ್ಲರೂ ಎದ್ದು ನಿಂತುಕೊಳ್ಳುವುದು ವಾಡಿಕೆ. ಕಾಹಿಲೆ ಯವನಾದ ಮನಗೋಳಿ ಎದ್ದು ನಿಲ್ಲುವ ಆವಶ್ಯಕತೆಯೇನೂ ಇರಲಿಲ್ಲ. ಆದರೆ, ಆ ಚಿಲ್ಲರೆ ವಿಷಯವೇ ಮುಂದೆ ದೊಡ್ಡ ಅನಾಹುತಕ್ಕೆ ಕಾರಣವಾಯಿತು.

ನಾನು ಮನೆಗೆ ಬರುತ್ತಲೂ ನನ್ನ ಹೆಸರಿನಲ್ಲಿ ಕಚೇರಿಯ ವಿಳಾಸಕ್ಕೆ ತಂತಿಯೊಂದು ಬಂದಿತ್ತು. ಹಾಳು ಮನೆಯವರು ಅದನ್ನೊಡೆದು ನೋಡಿದ್ದರು. ಫೌಜದಾರಿಕೆಯ ತರಬೇತಿಗೊಂದು ನಮ್ಮ ಜಿಲ್ಲೆಯಿಂದ ಆರಿಸಲ್ಪಟ್ಟ ನಾಲ್ಕು ಜನರಲ್ಲಿ ನಾನೂ ಒಬ್ಬನಾಗಿದ್ದ ಸಂತೋಷದ ಸಂಗತಿಯನ್ನು ಓರೆಕೋರೆಯ ನನ್ನ ಗೆಳೆಯರೊಬ್ಬರು ತಿಳಿಸಿ ಆ ತಂತಿ ಕಳಿಸಿದ್ದರು. ನನ್ನನ್ನು ಕಂಡರೆ ಹಲ್ಲು ಕಡಿಯುತ್ತಿದ್ದ ಫೌಜದಾರರಿಗೆ ಆ ಸಮಾಚಾರದಿಂದಾಗಿ ತಲೆ ಕೆಟ್ಟು ಹೋಗಿದ್ದಿ ತೇನೊ. ಉರಿ ಮೋರೆಯಿಂದ ಹೊರಗೆ ಬಂದು ಹಾಜರಿಗಾರಂಭಿಸಿದ್ದರು. ಮನಗೋಳಿ ಎದ್ದು ನಿಲ್ಲದೆ, ಕುಳಿತುಕೊಂಡಿದ್ದುದನ್ನು ಕಂಡು ಅವರ ಪಿತ್ತ ಕೆರಳಿತ್ತು.

"ಏ, ಯಾಕೆ ಕೂತಿದ್ದೀ ?" ಎಂದು ಕೇಳಿದ್ದರು.

"ನಾನು ಎದ್ದು ನಿಲ್ಲಲು ತ್ರಾಣವಿಲ್ಲ. ಹಾಜರಿ ಮುಗಿಯಲು ಅರ್ಧ ತಾಸು ಬೇಕಾಗುತ್ತದೆ. ಅದುವರೆಗೆ ನಾನು ಹ್ಯಾಗೆ ನಿಂತುಕೊಳ್ಳಲಿ ?" ಎಂದು ಅವನು ಶಾಂತವಾಗಿಯೆ ಉತ್ತರವಿತ್ತಿದ್ದ.

ಫೌಜದಾರನಾದ ತಾನು ಪ್ರಶ್ನೆ ಕೇಳುವಾಗ, ತನ್ನೆದುರಿಗೆ ಕುಳಿತುಕೊಂಡೇ ಉತ್ತರಿಸುವ ಉದ್ಧಟತನವೇ ಇವನದು! ಎಂದು ರೇಗಿ,

"ಏ ಸೂಳೇಮಗನೇ, ನಾನು ಯಾರು ಗೊತ್ತಿದೆಯೋ ಇಲ್ಲೋ? ಫೌಜ ದಾರರು ಪ್ರಶ್ನೆ ಕೇಳುವಾಗ ಕೂತುಕೊಂಡು ಉತ್ತರ ಕೊಡುತ್ತೀಯಾ? ಸೊಕ್ಕೇನೋ ನಿನ್ನ ಮೈಯಲ್ಲಿ ?" ಎಂದು ಗದರಿಸಿದ್ದರು.

"ರಾವ್‌ಸಾಹೇಬರೆ, ಬಯ್ಯಬೇಡಿರಿ. ಮರ್ಯಾದೆಯಿಂದ ಮಾತಾಡಿರಿ. ನೀವು ಇಂಗ್ಲೀಷ್ ನಾಲ್ಕುಯತ್ತೆ ಕಲಿತಿದ್ದೀರಿ. ಪೆನ್ಶನಿಗೆ ಹೋಗುವ

ಸಮಯಕ್ಕೆ ಫೌಜದಾರರಾಗಿದ್ದೀರಿ. ನಾನು ನಿಮಗಿಂತ ಹೆಚ್ಚು ಕಲಿತವನಿದ್ದೇನೆ. ನಾನೂ ಫೌಜದಾರನಾಗಿಯೇ ತೀರುತ್ತೇನೆ. ಆಗ ನಾನೂ ಕೆಳಗಿನವರಿಗೆ ಸೂಳೇಮಗನೇ ಎಂತ ಬಯ್ಯಬಹುದೇ?"

"ಚುಪ್, ಕತ್ತೇಮಗನೇ," ಎನ್ನುತ್ತಾ ಫೌಜದಾರರು ಅವನ ಮೈಮೇಲೆ ಏರಿಹೋದರು. ಮನಗೋಳಿ ಹುಲಿಯಂತೆ ಹಾರಿ ಫೌಜದಾರರನ್ನು ಹಿಡಿದು ತನ್ನ ಕಾಲಲ್ಲಿಯ ಬೂಟನಿಂದ ನಾಲ್ಕು ಏಟು ಹಾಕಿದ. ಅಷ್ಟರಲ್ಲಿ ಒಬ್ಬ ಸಿಪಾಯಿ ನಡುವೆ ಬಂದು ಮನಗೋಳಿಯನ್ನು ಹಿಡಿದು ಎಳೆದೊಯ್ಯದಿದ್ದರೆ ಅವನು ಫೌಜದಾರರ ಪ್ರಾಣ ತೆಗೆಯಬಹುದಾಗಿತ್ತು. ಫೌಜದಾರರು ಅಂಜಿ ಓಡಿಹೋಗಿ ಕಚೇರಿಯಲ್ಲಿ ಹೊಕ್ಕು ಬಾಗಿಲು ಹಾಕಿಕೊಂಡಿದ್ದರು. ಪೋಲೀಸರೆಲ್ಲ ಸೇರಿ ಮನಗೋಳಿಯನ್ನು ಸಂತೈಸಿ ಮನೆಗೆ ಕಳಿಸಿದ್ದರು.

ನನಗೆ ಬಂದಿದ್ದ ತಂತಿ ಅಷ್ಟರೊಳಗಾಗಿ ನನ್ನ ಕೈಸೇರಿತ್ತು. ನನ್ನ ಆನಂದಕ್ಕೆ ಮಿತಿಯೇ ಇಲ್ಲದಂತಾಗಿತ್ತು. ಇದೇ ಹಿರಿಯಾಸೆಯಿಟ್ಟುಕೊಂಡು ಎಂಟು ಹತ್ತು ವರ್ಷಗಳವರೆಗೆ ನನ್ನ ದೇಹಾರೋಗ್ಯವನ್ನೂ ಲಕ್ಷಿಸದೆ ದುಡಿದಿದ್ದೆ. ಕೊನೆಗೂ ನನ್ನ ಆಸೆ ಕೈಗೆಟಕುವ ಸಮಯ ಬಂದಿತ್ತು. ಫೌಜದಾರಿಕೆಯ ತರಬೇತಿಗಾಗಿ ಡಿ. ಎಸ್. ಪಿ. ಯವರು ನನ್ನನ್ನು ಆರಿಸಿಕೊಂಡಿದ್ದರು. ಇನ್ನು ಡಿ. ಐ. ಜಿ. ಮತ್ತು ಐ. ಜಿ. ಯವರು ಆರಿಸುವುದುಳಿದಿತ್ತು. ಅವರೂ ಆರಿಸುವರೆಂಬ ವಿಶ್ವಾಸ ನನಗಿತ್ತು. ನಾನು ಸಾಕಷ್ಟು ಬಹುಮಾನ ಪಡೆದಿದ್ದೆ, ಪ್ರಶಸ್ತಿಪತ್ರಿಕೆ ದೊರಕಿಸಿದ್ದೆ, ಬಾರನಿಸಿ, ಕ್ರೈಂ ಕಾರಕೂನ, ಕಾರಕೂನ, ಬೀಟ್ ಅಮಲ್ದಾರ್ ಮೊದಲಾದ ಅನೇಕ ಸ್ಥಳಗಳಲ್ಲಿ ದುಡಿದು ಅನುಭವ ಪಡೆದಿದ್ದೆ. ಐ. ಜಿ. ಯವರೂ ನನ್ನನ್ನು ಆರಿಸುವರೆಂಬ ಭರವಸೆ ನನಗಿತ್ತು. ಆ ಆನಂದದಲ್ಲಿ ಅಂದು ನಾನು ಎರಡು ತುತ್ತು ಅನ್ನವನ್ನು ಹೆಚ್ಚಾಗಿಯೇ ನುಂಗಿದೆ. ನನ್ನ ತಾಯಿ, ಪತ್ನಿ, ಕಿರಿಯ ತಮ್ಮ ಜಯಣ್ಣ ಮೂವರಿಗೂ ಪರಮಸಂತೋಷವಾಗಿ ಮನೆಯೆಲ್ಲ ನಲಿಯುತ್ತಿತ್ತು. ಮ್ಯಾಟ್ರಿಕ್ ಪಾಸುಮಾಡಿ ನೌಕರಿ ಹುಡುಕಲೆಂದು ಓರೆಕೋರೆ ನಗರಕ್ಕೆ ಹೋಗಿದ್ದ ಇನ್ನೊಬ್ಬ ತಮ್ಮ ವೀರಭದ್ರನಿಗೂ ಅಂದೇ ಆ ಸಮಾಚಾರ ತಿಳಿದಿದ್ದುದರಿಂದ ಅವನೂ ನನಗೊಂದು ತಂತಿ ಬಿಟ್ಟಿದ್ದ. ನಾವು ಸಂತೋಷದಿಂದ ಮಾತನಾಡುತ್ತ ಕುಳಿತಿದ್ದಾಗಲೇ ಅವನ ತಂತಿಯೂ ನಮ್ಮ ಕೈಸೇರಿತು.

ಅದನ್ನು ತಂದುಕೊಟ್ಟ ಪೋಲೀಸ ನನ್ನನ್ನು ಹೊರಗಡೆ ಕರೆದು, ಹಾಜರಿಯ ಸಮಯಕ್ಕೆ ನಡೆದ ಘಟನೆಯನ್ನೆಲ್ಲ ವಿವರಿಸಿ ಹೇಳಿದ. ನನ್ನ ಆನಂದವೆಲ್ಲವೂ ಮಾಯವಾಗಿ ಅಂಜಿಕೆ ಅದರ ಸ್ಥಳವನ್ನಾಕ್ರಮಿಸಿಕೊಂಡಿತು. ಫೌಜದಾರರನ್ನು ಮನಗೋಳಿ ಬೂಟನಿಂದ ಬಾರಿಸಿದುದು ಅಶುಭ ಸೂಚನೆಯಾಗಿಯೇ ತೋರಿತು.

"ನೀವು ಫೌಜದಾರರ ಮನೆಗೆ ಹೋಗಿ ಅವರನ್ನು ಈಗಿಂದೀಗ ಭೆಟ್ಟಿಯಾಗಬೇಕಂತೆ," ಎಂದು ಹೇಳಿದ ಸಿಪಾಯಿ.

ನಾನು ಕೋಟು ಟೊಪ್ಪಿಗೆ ಹಾಕಿಕೊಂಡು ಅವರ ಮನೆಗೆ ಹೊರಟೆ.

ನನ್ನನ್ನು ನೋಡುತ್ತಲೂ ಅವರು ತಮಗೂ ಮನಗೋಳಿಗೂ ನಡೆದ ಜಗಳದ ಬಗೆಗೆ ವಿವರಿಸಿ ಹೇಳಿದರು.

"ಕ್ಷಮಿಸಿರಿ ರಾವ್‌ಸಾಹೇಬರೆ. ಆದರೆ, ಇಂಥ ಪ್ರಸಂಗ ತಂದುಕೊಂಡದ್ದು ನಿಮ್ಮ ತಪ್ಪೇ ಅಂತ ನನಗನ್ನಿಸುತ್ತದೆ."

ರಾವ್‌ಸಾಹೇಬರು ನನ್ನನ್ನು ಕ್ಷಮಿಸಲಿಲ್ಲ. ಭಯಂಕರವಾಗಿ ರೇಗಿ ನುಡಿದರು:

"ನೀನೂ ಅವನೂ ಮಾತಾಡಿಕೊಂಡೇ ಈ ಕೆಲಸ ಮಾಡಿರಬೇಕು. ನಿಮ್ಮಿಬ್ಬರನ್ನೂ ಮನೆಗೆ ಕಳಿಸದೆ ಬಿಡುವದಿಲ್ಲ."

"ಛೆ. ಛೆ. ನಮ್ಮ ಬಗ್ಗೆ ಪೂರಾ ತಪ್ಪುಕಲ್ಪನೆ ಮಾಡಿಕೊಂಡಿದ್ದೀರಿ ರಾವ್‌ಸಾಹೇಬರೆ. ನಿಮ್ಮನ್ನು ನಾವು ದ್ವೇಷಿಸಲು ಕಾರಣವಾದರೂ ಏನಿದೆ? ನೀವು ಮೊನ್ನೆ ಮೊನ್ನೆ ಬಂದವರು. ನಿಮಗೂ ನಮಗೂ ಏನೂ ಜಗಳವಿಲ್ಲ. ಹೀಗಿರುವಾಗ...." ಎಂದು ನಾನು ಹೇಳುತ್ತಿದ್ದ ಹಾಗೆ ಅವರು ನಡುವೆ ಬಾಯಿ ಹಾಕಿ,

"ಹೂಂ. ಇರಲಿ ಅದೆಲ್ಲಾ. ಆದದ್ದು ಆಗಿ ಹೋಯಿತು. ಪೋಲೀಸರೆಲ್ಲರ ಮುಂದೆ ನನ್ನ ಅಪಮಾನ ಅಂತೂ ಆಯಿತಲ್ಲ. ಈಗ ನಾನು ಅವನ ಮೇಲೆ ರಿಪೋರ್ಟ್ ಮಾಡುತ್ತೇನೆ. ನೀನೂ ಸಾಕ್ಷಿ ಹೇಳಬೇಕು," ಎಂದರು.

"ಏನೆಂದು?"

"ನನ್ನನ್ನು ಹೊಡೆದ, ಎಂದು."

"ರಾವ್‌ಸಾಹೇಬರೆ, ಅವನು ನಿಮ್ಮನ್ನು ಹೊಡೆದಾಗ ನಾನು ಅಲ್ಲಿರಲಿಲ್ಲವಲ್ಲ. ನೋಡದೇ ಇದ್ದ ವಿಷಯವಾಗಿ ನಾನು ಹ್ಯಾಗೆ ಸಾಕ್ಷಿ ಹೇಳಲಿ?"

“ಪೋಲೀಸರೆಲ್ಲಾ ನಿನ್ನ ಮಾತು ಕೇಳುತ್ತಾರೆ. ನೀನು ಸಾಕ್ಷಿ ಹೇಳಲು ತಯಾರಾದರೆ ಮಾತ್ರ ಅವರೂ ತಯಾರಾಗುತ್ತಾರೆ. ನೀನು ಹೇಳಲಿಕ್ಕೇ ಬೇಕು.”

ನನಗೆ ಉಭಯಸಂಕಟಕ್ಕಿಟ್ಟುಕೊಂಡಿತು. ಆ ಪ್ರಸಂಗದಿಂದ ಪಾರಾಗಲು ದಾರಿ ಕಾಣಲಿಲ್ಲ. ನನಗೆ ಫೌಜದಾರಿಕೆ ಲಭಿಸುವುದರಲ್ಲಿದ್ದಾಗಲೆ ಅದಕ್ಕೆ ಅಡ್ಡವಾಗಿ ಈ ಬಿಕ್ಕಟ್ಟಿನ ಪ್ರಸಂಗ ತಲೆಯೆತ್ತಿದ್ದಿತು.

“ಬೇರೆ ಪೋಲೀಸರು ಸತ್ಯವನ್ನು ಹೇಳುವಂತೆ ಯತ್ನಿಸುತ್ತೇನೆ. ಆದರೆ ನಾನು ಮಾತ್ರ ಸುಳ್ಳು ಸಾಕ್ಷಿ ಹೇಳಲಾರೆ,” ಎಂದು ಹೇಳಿ ನಾನು ಕಚೇರಿಗೆ ಬಂದೆ. ಆ ದಿನದ ಘಟನೆಯ ಬಗೆಗೆ ಕಚೇರಿಯ ದಿನಚರಿ ಪುಸ್ತಕದಲ್ಲಿ ಫೌಜದಾರರು ಬರೆದುಬಿಟ್ಟುದುದನ್ನು ಕಂಡಾಗ ನನಗೆ ಇನ್ನಷ್ಟು ವಿವಂಚನೆಗಿಟ್ಟುಕೊಂಡಿತು.

೨೯

## ನಾನೂ ಸ್ವತಂತ್ರನಾದೆ!

ಮರುದಿವಸ ಬೆಳಗಾಗುತ್ತಲೂ, ರಾತ್ರಿಯ ಹಾಜರಿಗೆ ಸೇರಿದ್ದ ಪೋಲೀಸ ರನ್ನೆಲ್ಲ ಕರೆಯಿಸಿ ಅವರ ಹೇಳಿಕೆ ಬರೆದುಕೊಂಡರು ಇನ್ಸ್‌ಪೆಕ್ಟರು.

ಫೌಜದಾರರನ್ನು ಮನಗೋಳಿ ಬೂಟನಿಂದ ಹೊಡೆದನೆಂದು ಯಾರೂ ಹೇಳಲಿಲ್ಲ. ಹಾಜರಿ ಮುಗಿದ ಬಳಿಕ ಮನಗೋಳಿಗೂ ಫೌಜದಾರರಿಗೂ ವಾಗ್ವಾದಕ್ಕಾರಂಭವಾಯಿತೆಂದೂ, ತಾವು ತಮ್ಮ ತಮ್ಮ ಮನೆಗಳಿಗೆ ಹೊರಟು ಹೋದುದರಿಂದ ಹೆಚ್ಚಿನ ವಿಷಯ ತಮಗೇನೂ ತಿಳಿಯದೆಂದೂ ಅವರು ಹೇಳಿದರು. ಫೌಜದಾರರು ಕೈ ಹಿಸುಕಿಕೊಳ್ಳುತ್ತಾ ತೆಪ್ಪಗೆ ಕುಳಿತುಕೊಂಡಿದ್ದರು.

ಪೋಲೀಸರ ಹೇಳಿಕೆಗಳು ಮುಗಿದ ಬಳಿಕ, ಇನ್ಸ್‌ಪೆಕ್ಟರರೂ ಫೌಜದಾರರೂ ಕೂಡಿ, ಮುಂದಿನ ದಾರಿಯನ್ನು ಆಲೋಚನೆ ಮಾಡಿರಬೇಕು. ಮನಗೋಳಿಯನ್ನೂ ನನ್ನನ್ನೂ ಮನೆಗೆ ಕಳಿಸುವ ನಿಶ್ಚಯವನ್ನಂತೂ ಅವರೆಂದೋ ಮಾಡಿಕೊಂಡಿದ್ದರು. ಸರಿ. ಈ ಪ್ರಕರಣದಲ್ಲಿಯೇ ನನ್ನನ್ನು ಸಿಲುಕಿಸಿ ನನ್ನ ಮೇಲೂ ಅಪವಾದ ಹೊರಿಸಲು ಗೊತ್ತುಮಾಡಿಕೊಂಡು, ತಮ್ಮ ಹಸ್ತಕರಾಗಿದ್ದ ಪೋಲೀಸರಿಬ್ಬರನ್ನು ಕರೆಯಿಸಿ ನನ್ನ ವಿರುದ್ಧವಾಗಿ ಹೇಳಿಕೆ ತೆಗೆದುಕೊಂಡರು.

ಮನಗೋಳಿಯು ಫೌಜದಾರರನ್ನು ಹೊಡೆದ ತರುವಾಯ ನಾನು ಕಚೇರಿಗೆ ಹೋಗಿ, ಫೌಜದಾರರ ವಿರುದ್ಧವಾಗಿ ಒಂದು ಅರ್ಜಿಯನ್ನು ಸಿದ್ಧಗೊಳಿಸಿ ಅದಕ್ಕೆ ಪೋಲೀಸರೆಲ್ಲರ ಸಹಿ ಹಾಕಿಸಿದ್ದೆನೆಂದೂ, ರಾತ್ರೆ ಫೌಜದಾರರ ಮನೆಗೆ ಹೋಗಿ ಆ ಅರ್ಜಿಯನ್ನು ಅವರಿಗೆ ತೋರಿಸಿ, ಮನಗೋಳಿಯ ವಿರುದ್ಧ ವರದಿ ಮಾಡುವುದನ್ನು ಅವರು ಬಿಟ್ಟುಕೊಡದಿದ್ದಲ್ಲಿ ಅರ್ಜಿಯನ್ನು ಡಿ. ಎಸ್. ಪಿ.

ಯವರಿಗೆ ಕಳಿಸಿಕೊಡುವುದಾಗಿ ಬೆದರಿಕೆ ಹಾಕಿದ್ದೆನೆಂದೂ ಪೋಲೀಸರೆಲ್ಲರೂ ಮುಷ್ಕರ ಹೂಡಿ ಫೌಜದಾರರನ್ನು ಫಜೀತಿ ಮಾಡಬೇಕೆಂದು ಪ್ರಚೋದಿಸಿದ್ದೆನೆಂದೂ ಆ ಇಬ್ಬರು ಮಹಾಶಯರು ಹೇಳಿಕೆ ಕೊಟ್ಟಿದ್ದರು!

"ಪೋಲೀಸರಿಗೆಲ್ಲ ಶಿವಣ್ಣ ಪುಢಾರಿಯಾಗಿದ್ದು ಅವರೆಲ್ಲರೂ ಸೇರಿ ನನ್ನ ಪರವಾಗಿ ಯಾರೂ ಸಾಕ್ಷಿ ನುಡಿಯದಂತೆ ಮಾಡಿರುತ್ತಾರೆ. ಇಲ್ಲಿ ನನ್ನ ಮಾತು ಯಾರೂ ಕೇಳುವುದಿಲ್ಲ. ನಾನೇನನ್ನಾದರೂ ಹೇಳಲು ಹೋದರೆ ನಾನೇ ಹೊಡೆತ ತಿನ್ನಬೇಕಾಗುತ್ತದೆ. ಮನಗೋಳಿ ನನ್ನ ಮೇಲೆ ಏರಿಬರಲು ಶಿವಣ್ಣನ ಬೆಂಬಲವೇ ಕಾರಣವಾಗಿದೆ. ಈಗ ಅವರು ಮುಷ್ಕರ ಹೂಡಿ ಗಂಭೀರ ಪರಿಸ್ಥಿತಿ ನಿರ್ಮಾಣ ಮಾಡಿರುತ್ತಾರೆ. ಆದ್ದರಿಂದ ಮನಗೋಳಿಯನ್ನೂ ಶಿವಣ್ಣನನ್ನೂ ತಕ್ಷಣ ಇಲ್ಲಿಂದ ವರ್ಗ ಮಾಡಬೇಕು," ಎಂದು ಫೌಜದಾರರು ವರದಿ ಮಾಡಿದರು.

ನನ್ನ ಮೇಲೆ ಆಕಾಶವೇ ಕಳಚಿ ಬಿದ್ದಂತಾಯಿತು. ನಾನು ಕನಸಿನಲ್ಲಿಯೂ ಯೋಚಿಸದಿದ್ದ ಅಪರಾಧಗಳನ್ನು ನನ್ನ ಮೇಲೆ ಆರೋಪಿಸಲಾಗಿತ್ತು. ಪೋಲೀಸರೆಲ್ಲರೂ ಸಾಮೂಹಿಕವಾಗಿ ಅರ್ಜಿ ಮಾಡಿಕೊಳ್ಳುವುದು ನಮ್ಮ ಖಾತೆಯಲ್ಲಿ ಕಾನೂನುಬಾಹಿರವಾದುದು. ಮುಷ್ಕರದ ಮಾತನ್ನಂತೂ ಯಾರೂ ಎತ್ತುವ ಹಾಗಿಲ್ಲ. ಅಂಥ ಗಂಭೀರ ಸ್ವರೂಪದ ಅಪರಾಧವೆಸಗಿದ ಅಪವಾದವನ್ನು ಹೊರಿಸಲಾಗಿತ್ತು ನನ್ನ ಮೇಲೆ. ಮುನ್ನಾದಿನ ಆನಂದದಿಂದ ನಗುತ್ತಿದ್ದ ನನ್ನ ಮನೆ ಮತ್ತೆ ಚಿಂತೆಯಲ್ಲಿ ಮುಳುಗಿಕೊಂಡಿತು.

ಇಪ್ಪತ್ನಾಲ್ಕು ಗಂಟೆಗೊಳಗಾಗಿ ನಾನು ಮತ್ತು ಮನಗೋಳಿ ಇಬ್ಬರೂ ಅಲ್ಲಿಂದ ಹೊರಟು ಜಿಲ್ಲೆಯ ಇನ್ನೊಂದು ಮೂಲೆಯಲ್ಲಿದ್ದ ಊರಿಗೆ ಹೋಗಿ ನೌಕರಿಗೆ ಹಾಜರಾಗಬೇಕೆಂದು ಡಿ. ಎಸ್. ಪಿ. ಯವರ ಆಜ್ಞೆಯಾಯಿತು.

ನನ್ನ ಜೀವಮಾನದಲ್ಲಿ ಅದುವರೆಗೂ ನಾನು ಯಾರ ಕಾಲುಗಳನ್ನೂ ಹಿಡಿದು ಯಾವುದಕ್ಕೂ ಯಾಚಿಸಿರಲಿಲ್ಲ. ಅಂದು ಮಾತ್ರ ಫೌಜದಾರ್ ಹಾಳು ಮನೆಯವರ ಕಾಲು ಹಿಡಿದುಕೊಂಡೆ.

"ನನಗೇನೂ ಸಂಬಂಧವಿಲ್ಲದ ಪ್ರಕರಣದಲ್ಲಿ ನನ್ನನ್ನೆಳೆಯಬೇಡಿರಿ. ನನ್ನ ಕರಿಯರ್ ಹಾಳು ಮಾಡಬೇಡಿರಿ. ಹತ್ತು ವರ್ಷ ಜೀವ ತೇಯ್ದು ಈಗ

ಒಳ್ಳೆಯ ದಿನ ಕಾಣುತ್ತಿದ್ದೇನೆ. ಫೌಜದಾರಿಕೆಯ ಕೋರ್ಸಿಗೂ ನನ್ನ ಆಯ್ಕೆಯಾಗಿದೆ. ಅದಕ್ಕೆ ಕಲ್ಲು ಹಾಕಬೇಡಿರಿ."

ಹಾಳುಮನೆ ಫೌಜದಾರರು ಕಲ್ಲು ಬಂಡೆಯಂತೆ ನಿಂತುಕೊಂಡಿದ್ದರು. ಒಂದು ಮಾತನ್ನೂ ಅವರು ಆಡಲಿಲ್ಲ.

ನನ್ನ ತಾಯಿಯನ್ನೂ ಹೆಂಡತಿಯನ್ನೂ ಹಳ್ಳಿಗೆ ಕಳಿಸಿ, ಆರನೆಯ ತರಗತಿಯಲ್ಲಿ ಓದುತ್ತಿದ್ದ ಜಯಣ್ಣನೊಬ್ಬನನ್ನೇ ಅಲ್ಲಿ ಬಿಟ್ಟು ನಾನು ಉಗ್ರಪುರವನ್ನು ತ್ಯಜಿಸಿ ವರ್ಗವಾದ ಊರಿಗೆ ತೆರಳಿದೆ.

ನಮ್ಮ ಮೇಲಿನ ಆರೋಪಗಳ ವಿಚಾರಣೆ ನಡಸಲು ಒಬ್ಬರು ಡಿ. ವೈ ಎಸ್. ಪಿ. ಯವರನ್ನು ನೇಮಿಸಲಾಯಿತು.

ನಾನು ಸಿದ್ಧಗೊಳಿಸಿದ್ದೆನೆಂದು ಹೇಳಲಾಗಿದ್ದ ಅರ್ಜಿಯನ್ನು ಹಾಜರು ಪಡಿಸಬೇಕಾದುದು ಫೌಜದಾರರ ಕರ್ತವ್ಯವಾಗಿದ್ದಿತಷ್ಟೆ. ಅದೆಲ್ಲವೂ ಕೇವಲ ಕಟ್ಟು ಕಥೆಯಾಗಿರುವಾಗ ಕಾಲ್ಪನಿಕ ಅರ್ಜಿಯನ್ನು ಅವರು ತರುವುದಾದರೂ ಎಲ್ಲಿಂದ?

ಅರ್ಜಿಯ ಮೇಲೆ ಯಾರಾದರೂ ಸಹಿ ಹಾಕಿದ್ದರೋ ಹೇಗೆ?

ಅಂಥ ಅರ್ಜಿಯ ವಿಚಾರವೂ ಕೂಡ ತಮಗೆ ತಿಳಿಯದೆಂದು ಅಲ್ಲಿಯ ನಲವತ್ತು ಜನ ಪೋಲೀಸರೆಲ್ಲರೂ ಹೇಳಿದರು.

ಇನ್ಸ್‌ಪೆಕ್ಟರರ ಚಿತಾವಣೆಯಿಂದಾಗಿ ಮೊದಲು ನನ್ನ ವಿರುದ್ಧ ಹೇಳಿಕೆ ಕೊಟ್ಟಿದ್ದ ಇಬ್ಬರು ಮಹಾಶಯರೂ ಕೂಡ ವಿಚಾರಣಾಧಿಕಾರಿಯ ಪ್ರಶ್ನೆಗಳಿಗೆ ಉತ್ತರವೀಯುತ್ತಾ ಆ ಅರ್ಜಿಯ ವಿಷಯ ತಮಗೇನೂ ತಿಳಿಯದೆಂದೇ ಹೇಳಿದರು.

"ಸಂಪು ಹೂಡುವ ವಿಚಾರ ತೆಗೆದಿದ್ದನೇನು ಶಿವಣ್ಣ?"

"ಇಲ್ಲ."

"ಹಾಗಾದರೆ ನೀವು ಆಗ ಇನ್ಸ್‌ಪೆಕ್ಟರೆದುರಿಗೆ ಹಾಗೇಕೆ ಜವಾಬು ಕೊಟ್ಟಿರಿ?"

"ತಿಳಿಯದೆ ಕೊಟ್ಟೆವು ಸಾಹೇಬರೆ. ಕ್ಷಮಿಸಬೇಕು," ಎಂದರು ಅವರಿಬ್ಬರೂ.

ನನ್ನ ಮೇಲೆ ಹೊರಿಸಲಾಗಿದ್ದ ಅಪವಾದ ಕೇವಲ ಕಾಲ್ಪನಿಕ

ವಾದುದೆಂದು ಸಿದ್ಧವಾಗುವುದರಲ್ಲಿತ್ತು. ಆದರೆ, ಫೌಜದಾರರ ಪರವಾಗಿ ಸಾಕ್ಷಿ ನುಡಿದ ಖಾಸಗೀ ಗೃಹಸ್ಥರೊಬ್ಬರ ಸಂದಿಗ್ಧ ಸ್ವರೂಪದ ಹೇಳಿಕೆಯಿಂದಾಗಿ ವಿಚಾರಣಾಧಿಕಾರಿಗಳಿಗೆ ಸ್ವಲ್ಪ ಅನುಮಾನವುಂಟಾಯಿತು.

ಫೌಜದಾರರ ಪಕ್ಕದ ಮನೆಯಲ್ಲಿ ವಾಸವಾಗಿದ್ದವರು ಆ ಗೃಹಸ್ಥರು. ನಡುರಾತ್ರಿಯಲ್ಲಿ ನಾನು ಫೌಜದಾರರ ಮನೆಗೆ ಹೋಗಿ ಅವರನ್ನೆಬ್ಬಿಸಿ ಆ ಅರ್ಜಿಯನ್ನು ತೋರಿಸಿದೆನೆಂದೂ ಅವರಿಗೂ ನನಗೂ ತೀಕ್ಷ್ಣವಾಗ್ವಾದ ನಡೆಯಿತೆಂದೂ ಅವರು ಸಾಕ್ಷಿ ನುಡಿಯುವವರಿದ್ದರು. ಆ ವಿಷಯ ಗೊತ್ತಾಗುತ್ತಲೂ ನಾನು ಅವರನ್ನು ಕಂಡು ನನ್ನಂಥ ನಿರಪರಾಧಿಯ ಹೊಟ್ಟೆಯ ಮೇಲೆ ಕಲ್ಲು ಹಾಕಬಾರದೆಂದು ಕೇಳಿಕೊಂಡಾಗ ಅವರಿಗೆ ಕನಿಕರ ಉತ್ಪನ್ನವಾಗಿರಬೇಕು. ವಿಚಾರಣಾಧಿಕಾರಿಯ ಮುಂದೆ ಹೆಚ್ಚಿನದೇನನ್ನೂ ಅವರು ಹೇಳಲಿಲ್ಲ.

"ನನಗೆ ಯಾವುದೂ ಗೊತ್ತಿಲ್ಲ. ನಾನು ನಿದ್ದೆಯಲ್ಲಿದ್ದೆ. ಇವರು ರಾತ್ರಿ ಬಂದದ್ದು ಮಾತ್ರ ನಿಜ. ಫೌಜದಾರರೂ ಇವರೂ ಅವರ ಆಫೀಸಿಗೆ ಸಂಬಂಧಪಟ್ಟ ವಿಷಯ ಮಾತಾಡಿದ ಹಾಗೆ ತೋರಿತು."

"ಏನು ಮಾತಾಡಿದರು?"

"ಏನೋ ಮಾತಾಡಿದರು. ನಾನು ನಿದ್ದೆಯಲ್ಲಿದ್ದೆ. ನನಗೆ ನೆನಪಿಲ್ಲ," ಎಂದು ಅವರು ಮುಗಿಸಿದರು.

ಯಾವ ಸಾಕ್ಷಿಗಳೂ ನನಗೆ ವಿರುದ್ಧವಾಗಿರಲಿಲ್ಲ. ಆ ಪ್ರಕರಣದಿಂದ ನಾನು ಉಳಿದುಕೊಳ್ಳಬಹುದಾದ ಲಕ್ಷಣಗಳು ಕಂಡುಬಂದುವು.

ಮೂರು ದಿನಗಳಲ್ಲಿ ಮುಗಿಯಬಹುದಾಗಿದ್ದ ವಿಚಾರಣೆ ಮೂವತ್ತು ದಿನ ನಡೆಯಿತು. ಡಿ. ವೈ. ಎಸ್. ಪಿ. ಯವರು ಆ ಬಗೆಗೆ ತಮ್ಮ ವರದಿಯನ್ನೂ ಸಿದ್ಧಗೊಳಿಸಿದರು. ಅದರ ಸಾರಾಂಶ ಹೀಗೆ:

"ಅಮಲ್ದಾರ್ ಶಿವಣ್ಣನ ಮೇಲೆ ಫೌಜದಾರರೂ ಇನ್ಸ್‌ಪೆಕ್ಟರರೂ ಹೊರಿಸಿದ ಅಪವಾದ ಕೇವಲ ಕಲ್ಪಿತ ಕಥೆಯಾಗಿದೆಯೆಂದು ನನಗೆ ಮನವರಿಕೆಯಾಗಿದೆ. ಶಿವಣ್ಣನ ವಿರುದ್ಧವಾಗಿ ಈ ಇಬ್ಬರು ಅಧಿಕಾರಿಗಳು ಒಪ್ಪಿಸಿದ ವರದಿಗಳಲ್ಲಿನ ಒಂದು ಸಂಗತಿಯೂ ನಿಜವಿಲ್ಲ. ಆದುದರಿಂದ ಶಿವಣ್ಣನ ಮೇಲಿನ ಆರೋಪ ಸಿದ್ಧವಾಗುವುದಿಲ್ಲ.

"ಆದರೆ, ಶಿವಣ್ಣನು ಅಂಥ ರಾತ್ರಿಯಲ್ಲಿ ಫೌಜದಾರರ ಮನೆಗೆ ಹೋಗಿದ್ದುದು ಮಾತ್ರ ಸಿದ್ಧವಾಗಿದೆ. ಅಂಥ ಸಮಯದಲ್ಲಿ ಅವನು ಅಲ್ಲಿಗೆ ಹೋಗಿದ್ದುದನ್ನು ಗಮನಿಸಿದಾಗ ನನಗೆ ಸ್ವಲ್ಪ ಅನುಮಾನ ಬರುತ್ತದೆ. ಶಿವಣ್ಣನ ಹಿಂದಿನ ಸೇವೆಯ ಉತ್ಕೃಷ್ಟ ರಿಕಾರ್ಡನ್ನು ನೋಡಿದರೆ, ಅವನಿಂದ ಈ ಸಂದರ್ಭದಲ್ಲಿ ಅಪರಾಧ ನಡೆದಿರಬಹುದೆಂದೂ, ಅನಿಸುವುದಿಲ್ಲ. ಆದರೂ, ಫೌಜದಾರರಿಗೂ ಅವನಿಗೂ ಯಾವುದೊಂದು ವಿಷಯದ ಬಗ್ಗೆ ತಿಕ್ಕಾಟವಾಗಿರಬೇಕೆನ್ನಿಸುತ್ತದೆ. ಅದಕ್ಕಾಗಿ ಅವನಿಗೆ ಇದೊಂದು ಸಲ ಎಚ್ಚರಿಕೆ ಕೊಟ್ಟು ಬಿಟ್ಟುಬಿಡಬೇಕು."

ಈ ಎರಡನೆಯ ಪ್ಯಾರಾ ಬರೆಯುವುದನ್ನು ಅವರು ಬಿಟ್ಟುಕೊಟ್ಟಿದ್ದಲ್ಲಿ ನಾನು ಆ ಪ್ರಕರಣದಿಂದ ಪಾರಾಗಬಹುದಾಗಿತ್ತು. ಆದರೆ, ನನ್ನ ಮೇಲಿನ ಆರೋಪ ಕೇವಲ ಕಲ್ಪಿತ ಕಥೆಯೆಂದು ಬರೆದು ಅಷ್ಟಕ್ಕೇ ಅವರು ಸುಮ್ಮನಾಗಿದ್ದರೆ ನಿಯಮಗಳ ಪ್ರಕಾರ ಫೌಜದಾರರ ಮೇಲೆ ಕ್ರಮ ತೆಗೆದುಕೊಳ್ಳಬೇಕಾದ ಪ್ರಸಂಗ ಬರುತ್ತಿತ್ತು. ಡಿ. ವೈ. ಎಸ್. ಪಿ. ಯವರಿಗೆ ಅದು ಇಷ್ಟವಿರಲಿಲ್ಲ. ಅದಕ್ಕೊಂದು ವೈಯಕ್ತಿಕ ಕಾರಣವೂ ಇತ್ತು.

ಹಾಳುಮನೆ ಫೌಜದಾರರು ಬೇರೊಂದು ಜಿಲ್ಲೆಯಲ್ಲಿ ಕೆಲಸದಲ್ಲಿದ್ದಾಗ ಈ ಡಿ. ವೈ. ಎಸ್. ಪಿ. ಸಾಹೇಬರೂ ಅಲ್ಲಿಯೆ ಇದ್ದರು. ಮುಪ್ಪಿನ ಕಾಲದಲ್ಲಿ ಹರೆಯದ ಹೆಂಡತಿಯನ್ನು ಮದುವೆಯಾಗಿದ್ದರು ಈ ಹಾಳುಮನೆಯವರು. ಡಿ. ವೈ. ಎಸ್. ಪಿ. ಸಾಹೇಬರು ಆಕೆಯನ್ನು ವಶಪಡಿಸಿಕೊಂಡು ತಮ್ಮ ಪ್ರೇಯಸಿಯನ್ನಾಗಿ ಇಟ್ಟುಕೊಂಡಿದ್ದರು. ಪ್ರೇಯಸಿಯ ಗಂಡನನ್ನು ಅವರು ಅಂಥ ಬಿಕ್ಕಟ್ಟಿನ ಪ್ರಸಂಗದಲ್ಲಿ ಸಿಲುಕಿಸುವುದುಂಟೇ? ಅಂತೆಯೆ, ಫೌಜದಾರರನ್ನುಳಿಸಲೆಂದು ಅವರು ನನ್ನಂಥ ಬಡವನ ಕೊರಳು ಮುರಿಯುವುದಕ್ಕೂ ಹೇಸಿಕೊಳ್ಳಲಿಲ್ಲ.

ಡಿ. ಎಸ್. ಪಿ. ಯವರ ಹತ್ತಿರ ಹೋಯಿತು, ಅವರ ವರದಿ.

ಅವರ ಕೈಕೆಳಗಿನ ಅಧಿಕಾರಿಯಾಗಿದ್ದ ಡಿ. ವೈ. ಎಸ್. ಪಿ. ಯವರು ನನಗೆ ಎಚ್ಚರಿಕೆ ಕೊಟ್ಟು ಬಿಟ್ಟುಬಿಡಬೇಕೆಂದು ಬರೆದಿದ್ದರಾದರೂ ಡಿ. ಎಸ್. ಪಿ. ಯವರಿಗೆ ಅದು ಸಮಾಧಾನವನ್ನುಂಟುಮಾಡಲಿಲ್ಲ. ನಾನು ಅವರೆದುರಿಗೆ ಏನು ಹೇಳಿದರೂ ಅವರು ಕೇಳಲಿಲ್ಲ. ಅಮಲ್ದಾರನಾಗಿದ್ದ ನನ್ನನ್ನು ಹಿಂಬಡತಿ ಮಾಡಿ ಮತ್ತೆ ಸಿಪಾಯಿಯನ್ನಾಗಿ ಮಾಡಿದರು. ಸ್ವಾತಂತ್ರ್ಯ ಬಂದೊಡನೆ

ಬಿಳಿಯ ಅಧಿಕಾರಿಗಳೆಲ್ಲರೂ ಹೊರಟುಹೋಗಿ ಕರಿಯರು ಅವರ ಸ್ಥಾನಗಳನ್ನಾಕ್ರಮಿಸಿದ್ದರು. ಅಧಿಕಾರದ ಅಮಲಿನಲ್ಲಿ ನೈವುರೆತಿದ್ದ ಈ ಕರಿಯರಿಗೆ ನನ್ನಂಥ ಬಡವರ ಬಗೆಗೆ ಕನಿಕರ ಬರುವುದೂ ಅಸಾಧ್ಯವಾಗಿತ್ತು.

ಡಿ. ಎಸ್. ಪಿ. ಯವರ ನಿರ್ಣಯ, ಪ್ರಾಂತದ ಉಚ್ಚ ಪೋಲೀಸ್ ಅಧಿಕಾರಿಯ ಒಪ್ಪಿಗೆಗಾಗಿ ಹೋಯಿತು. ಕೇವಲ ಹಿಂಬಡತಿ ಮಾಡುವುದರಿಂದಲೇ ಡಿ. ಎಸ್. ಪಿ. ಯವರಿಗೆ ಸಮಾಧಾನವಾಗಿದ್ದಿತಾದರೆ ಈ ಉಚ್ಚಾಧಿಕಾರಿಗೆ ಆ ಶಿಕ್ಷೆ ಸಾಲದೆಂದು ತೋರಿತು. ಆ ಪ್ರಕರಣದಲ್ಲಿನ ಸತ್ಯವನ್ನು ಕಂಡುಹಿಡಿಯುವ ಶ್ರಮ ತೆಗೆದುಕೊಳ್ಳದೆ ಅವರು ನನ್ನನ್ನು ನೌಕರಿಯಿಂದ ದೂರಗೊಳಿಸುವ ಶಿಕ್ಷೆ ವಿಧಿಸಿದರು.

'ಸತ್ಯಮೇವ ಜಯತೇ' ಎಂಬ ಮಹಾಮಂತ್ರವನ್ನು ಸರಕಾರದ ಧ್ಯೇಯ ವಾಕ್ಯವನ್ನಾಗಿಟ್ಟುಕೊಂಡ ನಮ್ಮ ಜನತಾ ಸರಕಾರದ ಮಂತ್ರಿಗಳಿಗಾದರೂ ಮೊರೆ ಹೋದರೆ ಅವರು ಸತ್ಯವನ್ನು ಕಂಡು ಹಿಡಿದು, ಉಚ್ಚ ಪೋಲೀಸ್ ಅಧಿಕಾರಿಯ ಆಜ್ಞೆಯನ್ನು ರದ್ದುಗೊಳಿಸಬಹುದೆಂಬ ಆಸೆಯಿಂದ ಒಂದು ಕಾಗದ ಬರೆದು ಸಚಿವರ ಸಂದರ್ಶನಕ್ಕಾಗಿ ಪ್ರಾರ್ಥಿಸಿಕೊಂಡೆ. ನಮ್ಮಂಥ ಬಡ ಜನರ ಹೆಸರಿನಲ್ಲಿ ರಾಜ್ಯಸೂತ್ರ ವಹಿಸಿಕೊಂಡಿದ್ದ ಆ ಮಂತ್ರಿಗಳನ್ನು ನಾನು ಭೇಟಿ ಮಾಡುವ ಆವಶ್ಯಕತೆಯೇನೂ ಇಲ್ಲವೆಂಬುದಾಗಿ ಉತ್ತರ ದೊರೆಯಿತು.

"ಸತ್ಯಮೇವ ಜಯತೇ? ನಾನೃತಂ?" ಅಥವಾ, "ಅಸತ್ಯಮೇವ ಜಯತೇ?"

ನನ್ನಂಥ ಬಡವರ ಮಟ್ಟಿಗಂತೂ 'ಅಸತ್ಯಮೇವ ಜಯತೇ' ಎಂಬುದೇ ನಿಜ.

ಹತ್ತು ವರ್ಷಗಳ ಕಾಲ ನನ್ನ ಯೌವನದ ನೆತ್ತರನ್ನು ಸುಟ್ಟು ಸೇವೆ ಸಲ್ಲಿಸಿದ್ದ ನನ್ನನ್ನು ನೌಕರಿಯಿಂದ ಕಿತ್ತು ಹಾಕುವುದು ಯಾವ ಅಪರಾಧಕ್ಕಾಗಿ? ಎಂದು ಯಾರೂ ಯೋಚಿಸಲಿಲ್ಲ. ಮುಂದೆ ನನ್ನ ಗತಿಯೇನು? ನನ್ನ ಸಂಸಾರದ ಗತಿಯೇನು? ಎಂದು ಯಾರೂ ಯೋಚಿಸಲಿಲ್ಲ.

ನಾನು ಆ ನೌಕರಿಗೆ ಸೇರಿಕೊಂಡಾಗಲೂ ನನ್ನ ಜೇಬು ಬರಿಯದಾಗಿತ್ತು. ನೌಕರಿಯನ್ನು ಕಳೆದುಕೊಂಡಾಗಲೂ ಅಷ್ಟೆ. ಜೇಬಿನಲ್ಲಿ ಮೂರು ಕಾಸೂ ಉಳಿದಿರಲಿಲ್ಲ.

ಹತ್ತು ವರ್ಷಗಳ ಅವಧಿಯಲ್ಲಿ ಸಾವಿರಾರು ರೂಪಾಯಿಗಳು ನನ್ನ ಕೈಗೆ ಬಂದಿದ್ದುವು, ಬಂಗಾರ ಬಂದಿತ್ತು, ಬೆಳ್ಳಿ ಬಂದಿತ್ತು. ಬಂದುದೇನೂ ಉಳಿದಿರಲಿಲ್ಲ. ನನ್ನ ಕೈಯಲ್ಲಿದ್ದ ಉಂಗುರವೂ ಎಂದೋ ಹೊರಟುಹೋಗಿತ್ತು.

ನೌಕರಿ ಹುಡುಕಲೆಂದು ನಮ್ಮ ಹಳ್ಳಿಯಿಂದ ನಾನು ಓರೆಕೋರೆಗೆ ಹೊರಟು ನಿಂತ ಸಮಯದಲ್ಲಿ ನನ್ನ ತಾಯಿ ಕೊಟ್ಟಿದ್ದ ಅವಳ ತಾಳಿಯೊಂದು ಇನ್ನೂ ಉಳಿದಿತ್ತು ನನ್ನ ಟ್ರಂಕಿನಲ್ಲಿ. ನಾನು ಉಳಿಸಿದ್ದ ಬಂಗಾರವೆಂದರೆ ಅಷ್ಟೇ! ಎಂಥ ಕಠಿನ ಪ್ರಸಂಗದಲ್ಲೂ ನಾನು ಅದನ್ನು ವಿಕ್ರಯಿಸಿರಲಿಲ್ಲ.

ಆದರೆ, ನೌಕರಿಯನ್ನು ಕಳೆದುಕೊಂಡು ಹಳ್ಳಿಗೆ ಹಿಂದಿರುಗಿ ಹೋಗುವಾಗ ಆ ತಾಳಿಯನ್ನು ವಿಕ್ರಯಿಸದೆ ಗತ್ಯಂತರವಿರಲಿಲ್ಲ. ರೈಲು ವೆಚ್ಚಕ್ಕಾದರೂ ಹಣ ಬೇಡವೆ?

ಚಿಕ್ಕ ಜಯಣ್ಣನಿಗೆ ವಾರದ ಮನೆಗಳನ್ನು ಗೊತ್ತು ಮಾಡಿಕೊಟ್ಟು, ಅವನ ಸಹಪಾಠಿಯೊಬ್ಬನ ಕೊಠಡಿಯಲ್ಲಿ ವಸತಿಯ ವ್ಯವಸ್ಥೆಮಾಡಿ, ಉಗ್ರಪುರದ ಮನೆಯಲ್ಲಿನ ಸಾಮಾನುಗಳನ್ನೆಲ್ಲ ಕಟ್ಟಿಕೊಂಡು ರೈಲು ಏರಿದೆ, ಸ್ವತಂತ್ರ ಭಾರತದಲ್ಲಿನ ಲಕ್ಷಾವಧಿ ನಿರುದ್ಯೋಗಿಗಳಲ್ಲಿ ನಾನೂ ಒಬ್ಬನಾದೆ.

“ಕೆಂಪು ಮೋರೆಯವರು ಹೋಗಿಬಿಟ್ಟರು. ನಾಡು ಸ್ವತಂತ್ರ ಆಯಿತು. ನೀನು ಪೋಲೀಸ್ ಖಾತೆಯ ಗುಲಾಮಗಿರಿಯಿಂದ ಸ್ವತಂತ್ರನಾದೆ!” ಎಂದಳು ನನ್ನ ತಾಯಿ.

—ಸ್ವತಂತ್ರನಾದುದೇನೋ ನಿಜ; ಉದ್ಯೋಗವಿಲ್ಲದೆ ಅಲೆಯಲು ಸ್ವತಂತ್ರ, ಹೊಟ್ಟೆಗಿಲ್ಲದಿದ್ದಾಗ ಉಪವಾಸವಿರಲು ಸ್ವತಂತ್ರ, ಉಪವಾಸವನ್ನು ಸಹಿಸಲಾಗದಿದ್ದಾಗ ಆತ್ಮಹತ್ಯೆಮಾಡಿಕೊಳ್ಳಲು ಸ್ವತಂತ್ರ!

ಹಾಗೆ ಯೋಚಿಸುತ್ತಾ ನಾನು ಮೂಢನಂತೆ ನಗತೊಡಗಿದೆ.

“ಏನು, ಬಹಾಳ ನಗುತೀಯಲ್ಲ! ನೌಕರಿ ಹೋಯಿತಂತ ಸಂತೋಷವಾಗೈತೇನು?” ಎಂದಳು ತಾಯಿ.

ನಾನು ಬಿದ್ದು ಬಿದ್ದು ನಗತೊಡಗಿದೆ.

——:——

## ಮುಂದಿನ ಪ್ರಕಟನೆಗಳು

# ಪ್ರೋಲಿ ಪಟಾಲಂ

ಶ್ರೀ ದೇವುಡುರವರ ಕಾದಂಬರಿ



# ಪದ್ಮಿನಿ ಪ್ರೇಮಾಪಹರಣ

ಶ್ರೀ 'ಜಿಬಿಜ್'ರವರ ಕಾದಂಬರಿ



# ಹೊನ್ನಾವರದ ಹುಡುಗಿ

ಶ್ರೀ ಮಾ. ನಾ. ಚೌಡಪ್ಪನವರ ಕಾದಂಬರಿ



# ಬಣ್ಣದ ಮಾಲಿಂಗ

ಶ್ರೀ ಕುಮಾರ ವೆಂಕಣ್ಣನವರ ಕಾದಂಬರಿ



# ಗ್ಯಾಲಿಯ ಗುಲಾಮ

ಶ್ರೀ ತ. ರಾ. ಸು. ರವರ ಕಾದಂಬರಿ



# ಕಾಂಚನ-ಗಂಗಾ

('ಕಾಮಿನಿ – ಕಾಂಚನ'ದ ಎರಡನೆಯ ಭಾಗ)

ಶ್ರೀ ಅ. ನ. ಕೃರವರ ಕಾದಂಬರಿ

# ಶಾರದಾ ಪ್ರಕಟನಾಲಯದ ಪ್ರಕಟನೆಗಳು

| | | | | ಬೆಲೆ | |
|---|---|---|---|---|---|
| ೧. | ಕಾರವಾನ್ (ದ್ವಿತೀಯ ಮುದ್ರಣ) .... .... | ೧ | ೪ | ೦ |
| ೨. | ಸ್ವಾತಂತ್ರ್ಯದೆಡೆಗೆ (ದ್ವಿತೀಯ ಮುದ್ರಣ) .... .... | ೨ | ೪ | ೦ |
| ೩. | ಜೀವನ – ಕಲೆ * .... .... | ೧ | ೦ | ೦ |
| ೪. | ಮುಗುಳುನಗೆ * .... .... | ೧ | ೪ | ೦ |
| ೫. | ಸ್ವಪ್ನಸುಂದರಿ (ದ್ವಿತೀಯ ಮುದ್ರಣ) .... .... | ೧ | ೪ | ೦ |
| ೬. | ಆಲದ ಹೂ .... .... | ೧ | ೧೨ | ೦ |
| ೭. | ಹುಡುಗಾಟ .... .... | ೧ | ೪ | ೦ |
| ೮. | ಶವದ ಮನೆ .... .... | ೧ | ೪ | ೦ |
| ೯. | ಎದಿರೇಟು .... .... | ೧ | ೮ | ೦ |
| ೧೦. | ಸರ್ವಮಂಗಳಾ (ದ್ವಿತೀಯ ಮುದ್ರಣ) .... .... | ೩ | ೮ | ೦ |
| ೧೧. | ಕೇಡಿಗನ ಕಿಡಿಗಳು .... .... | ೧ | ೦ | ೦ |
| ೧೨. | ದೇವತೆಗಳು ನಕ್ಕಾಗ .... .... | ೧ | ೪ | ೦ |
| ೧೩. | ಜ್ವಾಲಾಮುಖಿಯ ಮೇಲೆ .... .... | ೪ | ೦ | ೦ |
| ೧೪. | ನನ್ನ ರಸಿಕ ಮತ್ತು ಬಂಗಾರದ ಗೆಜ್ಜೆ .... .... | ೧ | ೮ | ೦ |
| ೧೫. | ಹಾಳು – ಮೂಳು .... .... | ೧ | ೦ | ೦ |
| ೧೬. | ನಾಡಿಗೇರರ ನಗೆಬರಹಗಳು ೧ .... .... | ೧ | ೪ | ೦ |
| ೧೭. | ಮೋಹದ ಬಲೆಯಲ್ಲಿ .... .... | ೫ | ೧೨ | ೦ |
| ೧೮. | ಸಾವಿನೊಂದಿಗೆ ಸರಸ .... .... | ೧ | ೪ | ೦ |
| ೧೯. | ಅನುರಾಗ .... .... | ೧ | ೪ | ೦ |
| ೨೦. | ಬಿಡುಗಡೆಯ ಬೇಡಿ .... .... | ೩ | ೪ | ೦ |
| ೨೧. | ಜೋಳದ ಬೆಳೆಯ ನಡುವೆ .... .... | ೧ | ೪ | ೦ |
| ೨೨. | ಜರತಾರಿ ಜಗದ್ಗುರು .... .... | ೩ | ೧೨ | ೦ |
| ೨೩. | ಕಾನ್ವೆಂಟ್ ಗರ್ಲ್ .... .... | ೧ | ೦ | ೦ |
| ೨೪. | ಶಾನಾವಳಿಯ ನೀಲಾ .... .... | ೧ | ೦ | ೦ |
| ೨೫. | ರಂಗನಾಯಕಿ .... .... | ೨ | ೦ | ೦ |

* ಪ್ರತಿಗಳು ಮುಗಿದಿವೆ.

| | | | | |
|---|---|---|---|---|
| ೨೬. | ಮದುವೆ ಮಾಡಿ ನೋಡು | .... | .... | ೧ ೦ |
| ೨೭. | ಕಲ್ಯಾಣಿ | .... | .... | ೨ ೮ |
| ೨೮. | ನೀ ನನ್ನ ಮುಟ್ಟಬೇಡ | .... | .... | ೧ ೮ |
| ೨೯. | ನನ್ನ ದೇವರು ('ಕುವೆಂಪು' ರವರ ಕಥಾಸಂಕಲನ) | | .... | ೧ ೪ |
| ೩೦. | ಕಾಮಿನಿ – ಕಾಂಚನ | .... | .... | ೧ ೮ |
| ೩೧. | ಜನಿವಾರ ಮತ್ತು ಶಿವದಾರ | .... | .... | ೧ ೮ |
| ೩೨. | ಮಲ್ಲಿ | .... | .... | ೧ ೮ |
| ೩೩. | ಆನಂದ ಲಹರಿ | .... | .... | ೦ ೧೨ |
| ೩೪. | ಸೀತಾ – ರತ್ನ | .... | .... | ೦ ೧೨ |
| ೩೫. | ನಾಡಿಗೇರರ ನಗೆಬರಹಗಳು ೨ | .... | .... | ೧ ೮ |
| ೩೬. | ನಾನು ಪೋಲೀಸನಾಗಿದ್ದೆ | .... | .... | ೧ ೮ |
| ೩೭. | ರಾಗಿಣಿ | .... | .... | ೧ ೮ |
| ೩೮. | ಮಧುಚಂದ್ರ | .... | .... | ೦ ೧೨ |
| ೩೯ | ಬಂಗಾರದ ಜಿಂಕೆಯ ಹಿಂದೆ | .... | .... | ೧ ೮ |

---